# ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಸಂಸ್ಕೃತಿ

## ೧೯೭೦



ಕೊಡಗು ಮತ್ತು ದಕ್ಷಿಣ ಕನ್ನಡ ಗೌಡಸಮಾಜ



ಬೆಂಗಳೂರು

ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ

ಬೆಂಗಳೂರು.

ಬೆಲೆ : ರೂ. 3-50

೧೯೭೦



ಪ್ರಕಾಶಕರು :

**ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ**
ಬೆಂಗಳೂರು.

**ಬೆಲೆ : ರೂ 3-50**

ಮುದ್ರಕರು :

**ಶ್ರೀ ಸುಧೀಂದ್ರ ಮುದ್ರಣಾಲಯ**
ಲನೇ ಕ್ರಾಸ್, ಮಲ್ಲೇಶ್ವರಂ,
ಬೆಂಗಳೂರು-೩.

# ವಿ ಷ ಯಾ ನು ಕ್ರ ಮ ಣಿ ಕೆ



—೦—



॥ ಶ್ರೀ ಕುಲಗುರುವೇ ನಮಃ ॥

# ಪ್ರಾರ್ಥನೆ

ಲೇಖಕರು : **ಕೂಡಕಂಡಿರ ಎ. ಪೊನ್ನಪ್ಪ** ಬಿ.ಎ., ಬಿ.ಎಲ್., ಮಡಿಕೇರಿ

ನಮೋದೇವ ನಮೋಗುರುವೆ
ನಮೋಎಮ್ಮಯ ಕುಲಗುರುವೆ
ನಮಿಸಿ ಭಜಿಸೆವು ತಿರುಮಲೇಶನೇ
ಕ್ಷಮಿಸು ನಮ್ಮಯ ತಪ್ಪನು

ಶಿರವ ಬಾಗುತ ಕರವಜೋಡಿಸಿ
ಗುರುವೇ ನಿಮ್ಮಯ ನಮಿಪೆವು
ನರರು ಗೈದಿಹ ಪಾಪವೆಲ್ಲವು
ಅರಿವು ಇಲ್ಲದೆ ಆಯಿತೈ

ತಿರುಮಲೇಶನೆ ಕರುಣಿಸೆಮ್ಮಲಿ
ಅರಿವು ಎಂಬಾ ಜ್ಯೋತಿಯಾ
ಕರುಣೆಯಿಂದಲಿ ಕಾಯೇ ಎಮ್ಮನು
ತಿರುಪತಿಯ ತಿಮ್ಮಪ್ಪನೇ

ನಿನ್ನ "ಮುಡಿಪನು" ಪೂಜೆಗೈಯ್ಯುತ
ನಿನ್ನ ಮಡಿಲಲಿ ಸೇವೆ ಗೈಯುತ
ನಮ್ಮ ಬನ್ನವ ದೂರಗೊಳಿಸಲು
ನಿನಗೆ ನಮಿಪೆವು ದೇವನೇ

ಹೊನ್ನರಾಶಿಯ ದಿವ್ಯ ಜ್ಯೋತಿಯೇ
ನೀನೆ ನಮ್ಮಯ ಪ್ರಾಣವು
ತೋರಿಸೆಮ್ಮಲಿ ನಿನ್ನಕರುಣೆಯ
ಈಶನೆ ಶ್ರೀ ವೆಂಕಟೇಶನೇ

ದೇವ ದೇವನೇ ವೆಂಕಟೇಶನೆ
ಭಾವಭಕುತಿಯ ದಿವ್ಯಮೂರ್ತಿಯೇ
ಕಾವರಿಲ್ಲವು ನಮ್ಮನೆಲ್ಲರ
ದೇವನೇ ಪರಮಾತ್ಮನೆ

ಹರಿಸು ದೇವನೆ ನಮ್ಮನೆಲ್ಲರ
ಪರಮ ಪಾವನ ಮೂರ್ತಿಯೇ
ಬೆಂಗಳೂರಿನ ನಮ್ಮ ಸಂಘದ
ಮಂಗಳದ ಶುಭಕಾರ್ಯಕೆ
ನಮೋ ದೇವ ನಮೋ
ಗುರುವೇ
ನಮೋ ತಿರುಮಲೇಶನೇ



# ಮೊದಲೆರಡು ಮಾತು

ಭಾರತದ ವೈಶಿಷ್ಟ್ಯ ಅನೇಕತೆಯ ಏಕತೆ, ನಾನಾಜಾತಿ, ಮತ, ಭಾಷೆ, ವರ್ಣವಿಚಾರಗಳಿದ್ದರೂ ನಮ್ಮ ಧ್ಯೇಯ ಒಂದು. ಒಂದು ದೇವಾಲಯಕ್ಕೆ ಅನೇಕ ದಾರಿಗಳಿರುವಂತೆ ಭಾರತೀಯ ಐಕ್ಯತೆಗೆ ಜಾತಿ, ಮತ, ಭಾಷೆ ಇತ್ಯಾದಿ ಐಕ್ಯತೆಯ ಗುರಿಮುಟ್ಟಿಸುವ ಅನೇಕ ದಾರಿಗಳು.

ಗೌಡ ಜನಾಂಗವೂ ಸಹ ಕೊಡಗು ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತಲೆ ತಲಾಂತರಗಳಿಂದ ಬೆಳೆದು ಬಂದಿರುವಂಥ ಜನಾಂಗ. ಇವರು ಜೀವನೋಪಾಯಕ್ಕಾಗಿಯೋ ಅಥವಾ ಇನ್ನಾವ ಕಾರಣದಿಂದಲೋ ನಾಲ್ಕಾರೆಡೆ ಗಳಲ್ಲಿ ಹಂಚಿರುವುದರಿಂದ ಮುತ್ತುಗಳನ್ನು ಪೋಣಿಸಿ ಒಂದೇ ಭವ್ಯವಾದ ಮುಕ್ತಮಾಲೆಯನ್ನು ಕಟ್ಟಲೋಸುಗ ನಮ್ಮ ಈ (ಕೊಡಗು ಮತ್ತು ದಕ್ಷಿಣ ಕನ್ನಡ) ಗೌಡ ಸಮಾಜ ಸ್ಥಾಪಿತವಾಗಿರುವುದು. ಈ ಸಮಾಜದ ಪ್ರತಿಯೊಬ್ಬ ಮಾನ ವೀಯ ಸದಸ್ಯರೂ, ಒಂದು ಭುವನಮನ ಮೋಹಕ ಮನೋಹರ ಭವನವನ್ನು ಕೆತ್ತಿ ಕಟ್ಟಿ ಸಹಕರಿಸಿ ಅಲಂಕರಿಸುವ ಶಿಲ್ಪಿ. ಹೇಗೆ ಒಂದು ಅಣೆಕಟ್ಟೆಗೆ ಭದ್ರವಾಗಿರಲು ಪ್ರತಿವಸ್ತುವೂ ಮಹತ್ವಉಳ್ಳದ್ದೋ, ಅದೇರೀತಿ ಈ ಸಮಾಜದ ಓರ್ವೋರ್ವ ಸದಸ್ಯರೂ ಜ್ಞಾನದ ಪಂಜಿನ ಪ್ರತಿಕಿರಣವಿದ್ದಂತೆ.

ಸಮಾಜದಲ್ಲಿ ಏಕೀಕರಣಕ್ಕಾಗಿ, ಪಾರಸ್ಪರಿಕ ಸಹಾಯ ಪ್ರದಾನಕ್ಕಾಗಿ, ವಿದ್ಯಾವ್ಯಾಸಂಗ ಉದ್ಯೋಗಾದಿ ಕ್ಷೇತ್ರ ಗಳಲ್ಲಿ ಸಹಾಯಾರ್ಥ ಹಾಗೆ ಸೌಕರ್ಯಕಲ್ಪಿಸಿಕೊಳ್ಳುವುದಕ್ಕೂ, ಭಾರತದ ಭವ್ಯ ಸಂಸ್ಕೃತಿಯ ಅಡಿಪಾಯದಲ್ಲಿರುವ ಆಚಾರ, ವಿಚಾರ, ಸಂಸ್ಕಾರ, ಪದ್ಧತಿ, ಸಂಗೀತ, ಸಾಹಿತ್ಯ, ಕಲೆ ಇತ್ಯಾದಿಗಳ ಬಗ್ಗೆ ಪ್ರೋತ್ಸಾಹಿಸಿ ಈ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು, ದುಡಿಯುತ್ತಿರುವುದು.

ಈ ಹೊತ್ತಗೆ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ದ್ವಿತೀಯ ಕುಸುಮ. ಈ ಸಂಗ್ರಹದಲ್ಲಿ ಸಂಸ್ಕೃತಿ, ಸಭ್ಯತೆ, ಸಾಹಿತ್ಯ, ಗೀತ, ಜಾನಪದ ಇವೇ ಮೊದಲಾದ ವಿಷಯಗಳನ್ನು ಚರ್ಚಿಸಲಾಗಿದೆ. ಈ ದ್ವಿತೀಯ ಕುಸುಮ ಮೊದಲನೆಯದಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ವಿಕಸಿತವಾಗಿ ಶೋಭಿಸುತ್ತಿರುವ ಕಾರಣ ನಮ್ಮ ಸಮಾಜದ ಸಹೃದತೆಯ ವಿಕಸಿತರೂಪ ಎಂದು ಹೇಳಬಹುದು.

ಈ ಪುಸ್ತಕ (ಹೊತ್ತಗೆ) ನಮ್ಮ ಕೈಸೇರುವವರೆಗೂ ಅನೇಕ ಮಹನೀಯರ ಸಹಾಯ, ದಯೆ ಹಾಗೂ ಸೇವೆಗಳು ಸಂದಿವೆ. ಈ ಪುಸ್ತಕದಲ್ಲಿ ಕಂಡುಬರುವ ಲೇಖನಗಳನ್ನು ಸಮಯಕ್ಕೆ ಸರಿಯಾಗಿ ಬರೆದು ಸಹಕರಿಸಿದ ಲೇಖಕ ಲೇಖಕಿ ಯರಿಗೂ, ಭಾವಚಿತ್ರಗಳನ್ನೊದಗಿಸಿ ಕೊಟ್ಟ ಮಹನೀಯರಿಗೂ, ಅಂದವಾಗಿ ಮುದ್ರಿಸಿ ಕೊಟ್ಟ ಶ್ರೀ ಸುಧೀಂದ್ರ ಮುದ್ರಣಾ ಲಯದ ಮಾಲೀಕರಾದ ಶ್ರೀ ಸರ್ವೋತ್ತಮ ಪೈ, B. Sc., ಇವರಿಗೂ, ಮತ್ತು ಸಂಪಾದಕ ಮಂಡಲಿಯವರಿಗೂ, ಗೌಡ ಸಮಾಜದ ಉದ್ಧಾರಕ್ಕಾಗಿ ಸತತವಾಗಿ ಸೇವೆ ಸಲ್ಲಿಸುತ್ತಿರುವ ಪ್ರಿಯ ಮಿತ್ರ ಬಂಧು ಬಾಂಧವರಿಗೂ ಗೌಡ ಸಮಾಜದ ಪರವಾಗಿ ಹಾಗೂ ನನ್ನ ಪರವಾಗಿ ಕೃತಜ್ಞತೆಯನ್ನೊಳಗೊಂಡ ಅಭಿನಂದನೆಗಳು.

**ಪಡ್ಡಂಬೈಲು ವೆಂಕಟರಮಣ B. Sc., B. Ed., B. L., D. S. S.,**

ಅಧ್ಯಕ್ಷರು

ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಬೆಂಗಳೂರು.

# ಕೊಡಗು ಗೌಡ ಸಂಸ್ಕೃತಿ

## ಒಂದು ವಿಮರ್ಶೆ

(ಶ್ರೀ ಡಿ. ಎನ್. ಕೃಷ್ಣಯ್ಯ M. A., B.Ed., ವಿರಾಜಪೇಟೆ)

ಬೆಂಗಳೂರಿನ ಗೌಡ ಸಮಾಜದವರು ತಮ್ಮ ವಾರ್ಷಿಕ ಸ್ನೇಹ ಸಮ್ಮೇಳನದ ನೆನಪಿಗೋಸ್ಕರ ದಕ್ಷಿಣ ಕನ್ನಡ ಮತ್ತು ಕೊಡಗಿನ ಗೌಡ ಸಂಸ್ಕೃತಿಯ ವಿಶೇಷ ಸಂಚಿಕೆಯನ್ನು ಪ್ರಕಟಿಸಿರುವುದು ಸ್ತುತ್ಯಾರ್ಹವಾದ ಕೆಲಸ. ಈ ಸಂಚಿಕೆಯಲ್ಲಿ ಗೌಡ ಜನಾಂಗದ ಚರಿತ್ರೆ, ಅವರ ಕಟ್ಟುಕಟ್ಟಳೆಗಳು, ಹುಟ್ಟಿನಿಂದ ಸಾವಿನವರೆಗೆ ಮಾಡಬೇಕಾದ ಕಾರ್ಯಗಳು, ಅವುಗಳ ಕ್ರಮಗಳು ಮೊದಲಾದುವುಗಳ ಬಗ್ಗೆ ತಿಳಿದವರಿಂದ ಲೇಖನಗಳೂ, ವಿವಿಧ ವಿಷಯಗಳ ಮೇಲೆ ಕವನಗಳೂ, ಜಾನಪದ ಗೀತೆಗಳೂ, ದೇವರ ಹಾಡುಗಳೂ, ಸೋಬಾನೆ ಹಾಡುಗಳೂ ಇವೆ. ಈ ಲೇಖನಗಳಲ್ಲಿ ಗೌಡ ಜನಾಂಗದವರು ವಿಜಯನಗರದ ಕೃಷ್ಣದೇವರಾಯನ ವಂಶವಾದ ತೌಳವ ವಂಶಕ್ಕೆ ಸೇರಿದವರು ಎಂದು ಬರೆದಿದ್ದಾರೆ. ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ಅಗತ್ಯವಿದೆ. ಗೌಡ ಜನರ ಹುಟ್ಟಿನಿಂದ ಸಾವಿನವರೆಗಿನ ಪದ್ಧತಿಗಳನ್ನು ಆರು ಲೇಖಕರು ಬರೆದಿರುವರು ಇವರು ಬರೆದಿರುವ ಪದ್ಧತಿಗಳಲ್ಲಿ ಸ್ಥಳಕ್ಕೆ ಹೊಂದಿಕೊಂಡು ಕೆಲವು ವ್ಯತ್ಯಾಸಗಳು ಇರುವುದು ಸ್ವಾಭಾವಿಕ. ಗೌಡ ಜನರ ಪದ್ಧತಿಗಳನ್ನು ಕುರಿತು ಒಂದು ಅಧಿಕೃತವಾದ ಸಮಿತಿ ರಚಿಸಿ ಚರ್ಚಿಸಿ ಒಂದೇಒಂದು ಲೇಖನವನ್ನು ಬರೆದಿದ್ದರೆ ಒಳ್ಳೆಯದಿತ್ತೋ ಎಂದು ಗೌಡ ಜನಾಂಗದವನಾಗಿರದ ನನ್ನ ಅಭಿಪ್ರಾಯವಾಗಿದೆ. ಈ ಆರು ಜನರು ಬರೆದಿರುವ ಗೌಡ ಜನರ ಪದ್ಧತಿಗಳ ಕುರಿತಾದ ಲೇಖನಗಳಲ್ಲಿ ಯಾವುದು ಎಷ್ಟರಮಟ್ಟಿಗೆ ಸರಿಯೆಂದು ಹೇಳಲು ನಾನು ಶಕ್ತನಲ್ಲ.

ದೇವರ ಹಾಡುಗಳ ಸಂಗ್ರಹವು ಚೆನ್ನಾಗಿದೆ. ಸೋಬಾನೆ ಹಾಡುಗಳಲ್ಲಿ ಕೆಲವು ಹಾಡುಗಳು ಮಾತ್ರ ಗೌಡ ಜನಾಂಗದವರು ತಮ್ಮ ಸಮಾಜದ ಶುಭಕಾರ್ಯಗಳಲ್ಲಿ ಹಾಡುವ ಹಾಡುಗಳು. ಉಳಿದವು ಕನ್ನಡ ಮಾತನಾಡುವ ಜನರೆಲ್ಲರೂ ಹಾಡುವ ಹಾಡುಗಳು.

ಸಂಕ್ಷಿಪ್ತವಾಗಿ ಹೇಳುವುದಾದರೆ 'ಗೌಡ ಸಂಸ್ಕೃತಿ' ಸಂಚಿಕೆಯಲ್ಲಿ ಗೌಡ ಜನಾಂಗದವರ ವಿಷಯ ತಿಳಿಯಬೇಕಾದ ಎಲ್ಲಾ ಮಾಹಿತಿಗಳು ದೊರೆಯುತ್ತವೆ. ಆದರೆ ಒಂದೇ ವಿಷಯದ ಮೇಲೆ ಎಂದರೆ ಅವರ ಹುಟ್ಟು, ಮದುವೆ ಸಾವುಗಳ ಸಂಸ್ಕಾರಗಳನ್ನು ಕುರಿತು ಹಲವರು ಲೇಖನಗಳನ್ನು ಬರೆದು ಅವುಗಳಲ್ಲಿ ಭಿನ್ನಾಭಿಪ್ರಾಯಗಳಿದ್ದರೆ ಯಾರು ಬರೆದದ್ದು ಸರಿ, ಯಾರು ಬರೆದದ್ದು ಸರಿಯಲ್ಲ ಎಂದು ನಿರ್ಣಯಿಸುವುದು ಗೌಡ ಸಮಾಜದ ಈಗಿನ ಯುವಕ ಯುವಕಿಯರಿಗೆ ತೊಡಕಿನ ವಿಷಯವಾದೀತು. ಮಡಿಕೇರಿಯ ಕೊಡವ ಸಮಾಜದವರು ಎಲ್ಲಾ ಸಮಾಜದ ಹಿರಿಯರನ್ನು ಸೇರಿಸಿ ಅವರ ಅಭಿಪ್ರಾಯಗಳನ್ನು ತೆಗೆದುಕೊಂಡು ಕೋಮಿನ ಎಲ್ಲಾ ಪದ್ಧತಿ ಮತ್ತು ಸಂಸ್ಕಾರಗಳನ್ನು ಕ್ರೋಢೀಕರಿಸಿ ಒಂದು ಪುಸ್ತಕವನ್ನು ಪ್ರಕಟಿಸಿರುವರು ಅದೇರೀತಿಯಲ್ಲಿ ಗೌಡ ಸಮಾಜದವರೂ ಒಂದು ಹೊತ್ತಗೆಯನ್ನು ಹೊರಡಿಸುವುದು ಮುಂದಿನ ಪೀಳಿಗೆಯವರಿಗೆ ಪ್ರಯೋಜನವಾದೀತು. ಹಾಗೂ ಈ ಗೌಡ ಸಂಸ್ಕೃತಿಯ ಸಂಚಿಕೆಯು ಮೊದಲನೆಯಬಾರಿಗೆ ಗೌಡ ಜನಾಂಗದವರ ಮೇಲೆ ಬೆಳಕು ಚೆಲ್ಲಿದೆ. ಅವರ ಮೇಲೆ ಇನ್ನೂ ಹೆಚ್ಚಿನ ಬೆಳಕು ಬಿದ್ದು ಇನ್ನೂ ಹೆಚ್ಚಿನ ವಿಷಯ ತಿಳಿಯಲೆಂದು ಹಾರೈಸಿ ಈ ವಿಮರ್ಶೆಯನ್ನು ಮುಗಿಸುವೆನು.

# ಸಂಪಾದಕೀಯ

"ಗೌಡ ಸಂಸ್ಕೃತಿ"ಯ ವಿಷಯವಾಗಿ ಎರಡನೆ ಸಂಚಿಕೆ ಹೊರಬೀಳುವುದು ಸಂತೋಷದ ವಿಷಯವಾಗಿದೆ. ಈ ಸಲದ ಸಂಚಿಕೆಯಲ್ಲಿ 1968ರಲ್ಲಿ ಪ್ರಕಟವಾದ ಕೆಲವು ಲೇಖನ ಮತ್ತು ಕವನಗಳನ್ನು ಬಿಟ್ಟು ಹೊಸಲೇಖನ ಮತ್ತು ಕವನಗಳನ್ನು ಸೇರಿಸಿ ಪ್ರಕಟಿಸಲಾಗಿದೆ. ಈ ಸಂಚಿಕೆಯಲ್ಲಿ ಗೌಡರ ಚರಿತ್ರೆಯ ವಿಷಯದ ಲೇಖನಗಳು ಗೌಡರ ಚಾರಿತ್ರಿಕ ಹಿನ್ನೆಲೆಯು ಕಳೆದ ಸಂಚಿಕೆಗಿಂತ ಹೆಚ್ಚಿನ ಆಳ ಮತ್ತು ವಿವರಗಳಿಂದ ಕೂಡಿದ್ದಾಗಿವೆ, ಗೌಡರ ಪೂರ್ವೇತಿಹಾಸದ ಹೆಚ್ಚಿನ ಪರಿಚಯವನ್ನು ಮಾಡಿಕೊಟ್ಟಿವೆ. ಇನ್ನೂ ಹೆಚ್ಚಿನ ಸಂಶೋಧನೆಯನ್ನು ಕೈಕೊಂಡರೆ ಭಾರತದ ಇತಿಹಾಸದಲ್ಲಿ ಹೊಸ ದೊಂದು ಪುಟಕ್ಕೆ ಎಡೆಮಾಡಿಕೊಡುವುದರಲ್ಲಿ ಸಂಶಯವಿಲ್ಲ. "ಗೌಡ" ಎಂಬುದು ಬರೀ ಜಾತಿಯ ಹೆಸರಲ್ಲ. ಅದೊಂದು ಸಂಸ್ಕೃತಿಯ ಹೆಸರೆಂಬ ಅಭಿಪ್ರಾಯವನ್ನು ಈ ಸಂಚಿಕೆಯ ಲೇಖನಗಳು ಮಾಡಿಕೊಡುತ್ತವೆ.

ಈ ಸಂಚಿಕೆಯಲ್ಲಿ ನಾಲ್ಕು ಭಾಗಗಳಾಗಿ ವಿಂಗಡಿಸಿ ಮೊದಲನೆಯ ಭಾಗವನ್ನು ಗೌಡರ ಚರಿತ್ರೆಗೆ ಸಂಬಂಧ ಪಟ್ಟ ವಿಷಯಗಳಿಗೂ, ಎರಡನೆ ವಿಭಾಗವನ್ನು ಗೌಡರ ಸಾಮಾಜಿಕ ಜೀವನ ಮತ್ತು ಪದ್ಧತಿಗಳ ವಿಷಯಗಳಿಗೂ, ಮೂರನೆಯ ವಿಭಾಗವನ್ನು ಈಗಿನ ಗೌಡ ಸಮಾಜದ ರೂಪ ರೇಖೆಗಳನ್ನು ಬರೆದ ಲೇಖನಗಳಿಗೂ, ನಾಲ್ಕನೆಯ ವಿಭಾಗವನ್ನು ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಕಾರ್ಯಕಲಾಪಗಳ ಸೂಕ್ಷ್ಮ ಪರಿಚಯದ ವಿಷಯ ಗಳಿಗೂ ವಿೂಸಲಾಗಿದೆ.

ಈ ಸಂಚಿಕೆಯನ್ನು ಪ್ರಕಟಿಸಲು ಸಹಾಯಮಾಡಿದ ಎಲ್ಲಾ ಮಹನೀಯರಿಗೂ ನಮ್ಮ ಧನ್ಯವಾದಗಳು. ಆಚಾರ, ವಿಚಾರ ಚಾರಿತ್ರಿಕ ವಿಷಯದ ಲೇಖನಗಳ ಅಭಿಪ್ರಾಯಗಳಲ್ಲಿ ಲೋಪದೋಷಗಳಿದ್ದರೆ ವಾಚಕರು ತಿಳಿಯಪಡಿಸಿದರೆ ಅದನ್ನು ಸರಿಪಡಿಸಿಕೊಳ್ಳುತ್ತೇವೆ.

—ಸಂಪಾದಕರು

## ಆಡಳಿತ ಮಂಡಳಿಯವರು 1968-69

**(ಗೌಡ ಸಮಾಜ ಬೆಂಗಳೂರು.) 1968-69**

ಶ್ರೀ ಪಡ್ಡಂಬೈಲು ಮುದ್ದಪ್ಪಗೌಡ M Sc. (Ag.)
ಅಧ್ಯಕ್ಷರು.

ಶ್ರೀ ದೇವಜನ ಗಣಪತಿ ಉಪಾಧ್ಯಕ್ಷರು ನಂತರ ಅಧ್ಯಕ್ಷರು.

ಶ್ರೀ ತೋಟಂಬೈಲು ನಾಣಯ್ಯ
ಕಾರ್ಯದರ್ಶಿ

ಶ್ರೀ ದಂಬೆಕೋಡಿ ಆನಂದ B. Com C.A.
ಖಜಾಂಚಿ

ಶ್ರೀ ಮೊಟ್ಟೆರ ನಂಜಪ್ಪ ಸದಸ್ಯರು
(ನಂತರ ಉಪಾಧ್ಯಕ್ಷರು ಆದರ ನಂತರ ಅಧ್ಯಕ್ಷರು)

ಶ್ರೀ ಪೂಜಾರಿರ ಪೊಣ್ಣಪ್ಪ M. A.D. P. M. R. B. Ed B.L.
ಸದಸ್ಯರು.

ಶ್ರೀ ಬಾರನ ಸುರೇಶ್ ಸದಸ್ಯರು

ಡಾ|| ಗುಡ್ಡೇರ ಚಿಣ್ಣಯ್ಯ B.V. Sc. M. Sc.,
ಸದಸ್ಯರು

ಶ್ರೀ ಕಾಳೆಯಂಡ್ರ ಮಾಚಯ್ಯ ,,

ಡಾ|| ಕಾಯರಮಾರ್ ಕೆ.
ವಿಜಯಲಕ್ಷ್ಮಿ M.B.B.S. ,,

ಶ್ರೀ ಕಲ್ಲಂಬಿ ಗಣಪತಿ ,,

ಶ್ರೀಮತಿ ಜೆ.ಟಿ. ಪ್ರಕಾಶ್ ,,

ಶ್ರೀ ಡಿ. ಕೆ. ಬಾಬು ,,

ಶ್ರೀ ಮಾವಜಿ ಜನಾರ್ಧನ B.A.M.L:
ಲೀಗಲ್ ಅಡ್ವೈಸರ್

## 1969-70

### (ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಬೆಂಗಳೂರು)

ಶ್ರೀ ಚೆರಿಯ ಮನೆ ಪೊನ್ನಪ್ಪ (ಸ್ವಲ್ಪ ಸಮಯದ ನಂತರ ಶ್ರೀ ಪಡ್ಡಂಬೈಲು ವೆಂಕಟರಮಣನವರು ಅಧ್ಯಕ್ಷರಾಗಿ ಆಯ್ಕೆಯಾದರು)

ಶ್ರೀ ಪಡ್ಡಂಬೈಲು ವೆಂಕಟರಮಣ
BSc,B;Ed. B.L., D.S.S.
ಉಪಾಧ್ಯಕ್ಷರು. ನಂತರ
ಅಧ್ಯಕ್ಷರು.

ಶ್ರೀ ತೋಟಂಬೈಲು ನಾಣಯ್ಯ
ಉಪಾಧ್ಯಕ್ಷರು.

ಶ್ರೀ ಐಯ್ಯಂಡ್ರ ಭೀಮಯ್ಯ B.Sc.,
ಕಾರ್ಯದರ್ಶಿ

ಶ್ರೀ ಮುಕ್ಕಾಟಿರ ವಾಸುದೇವ B.Com.,
ಖಜಾಂಚಿ

ಶ್ರೀ ಮಂಜಾಪುರ ಪೊಣ್ಣಪ್ಪ ಸದಸ್ಯರು
ಶ್ರೀ ತೂಟೇರ ಮುತ್ತಣ್ಣ ,,
ಶ್ರೀ ಚೆಟ್ಟಿಮಾಡ ಕುಟ್ಟಪ್ಪ ,,
ಶ್ರೀ ಕೆದಂಬಾಡಿ ಪೊನ್ನಪ್ಪ ,,
ಶ್ರೀ ಕೆ. ಚಿನ್ನಪ್ಪಗೌಡರು B.A ,,
ಶ್ರೀ ಮುಂಗಿಮನೆ ಚಂದಪ್ಪಗೌಡರು B.A, ,,
ಶ್ರೀಮತಿ ಕುರಿಯ ಚಂದ್ರಾವತಿ ಚಾಮಯ್ಯ ,,
ಕುಮಾರಿ ಚರಿಯಮನೆ ಲೀಲಾ ,;
ಶ್ರೀ ತೆಕ್ಕಡ ಗೋಪಾಲ ,,
ಶ್ರೀ ದಂಬೆಕೋಡಿ ಚಂದ್ರಶೇಖರ್ ,,
ಶ್ರೀ ಕೊಪ್ಪಡ್ಕ ಕೃಷ್ಣಪ್ಪ ,,
ಶ್ರೀ ಹೊದೊಟ್ಟಿ ಭವಾನಿಶಂಕರ್ ,,
ಕುಮಾರಿ ಕಟ್ಟಿಮನೆ ನ್ಯಾನ್ಸಿ ,,
ಶ್ರೀ ತಿಮ್ಮಪ್ಪಗೌಡರು ,,
ಶ್ರೀ ದಂಬೆಕೋಡಿ ಸುಭಾಸ್ ,,
ಶ್ರೀ ಶಿರಕಜೆ ಆನಂದ ,,

### ಸಂಪಾದಕ ಮಂಡಳಿ

ಡಾ॥ ಕಾಯರಮಾರ್ ವೀರಪ್ಪಗೌಡರು
G.M.V.C., P.G., (U.S.A)
ಶ್ರೀ ಹೊದ್ದೆಟ್ಟಿ ಭವಾನಿಶಂಕರ್
ಶ್ರೀ ಪೂಜಾರಿರ ಪೊಣ್ಣಪ್ಪ M. A. D. P. M.R.
B. Ed., B L
ಶ್ರೀ ಬಾರನ ದೇವಯ್ಯ
ಶ್ರೀ ಮುಂಗಿಮನೆ ಚಂದಪ್ಪಗೌಡರು B.A.,
ಶ್ರೀ ಕೇವಳ ಚಿನ್ನಪ್ಪಗೌಡರು B.A,
ಶ್ರೀ ಮುಕ್ಕಾಟಿವಾಸುದೇವ B.Com.
ಶ್ರೀ ಕಾಯರಮಾರ್ ರಾಜಗೋಪಾಲ್ B.Sc., (Ag)
ಶ್ರೀ ಕೊಪ್ಪಡ್ಕ ಕೃಷ್ಣಪ್ಪ
ಶ್ರೀ ಮಾವಾಜಿ ಜನಾರ್ಧನ B. A. M. L.,
ಲೀಗಲ್ ಅಡ್ವೈಸರು
ಶ್ರೀ ದಂಬೆಕೋಡಿ ಆನಂದ B.Com., C.A.,
ಆಡಿಟರು.



# 1968-69-70 ಸಾಲಿನ ಸಮಾಜದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಮುಖ್ಯಅತಿಥಿಗಳು.



ಶ್ರೀ U. K. ಸುಬ್ಬಯ್ಯ
ನವರು
ಬೆಂಗಳೂರು.



ಡಾ|| ಕೆ. ವೀರಪ್ಪಗೌಡರು
G.M.V C.P.G (USA)
ಬೆಂಗಳೂರು.



ವಾರಂಟ್ ಆಫೀಸರ್
ಶ್ರೀ ನಂಗಾರು ಅಪ್ಪಾಜಿಯವರು
ಚಂಡೀಗಢ್



ಶ್ರೀ ಪಾಂಡನಸುಬ್ಬಯ್ಯ
ನವರು
ಮಡಿಕೇರಿ

# ಸಮಾಜದ ಪೋಷಕರು, ಕಾರ್ಯಕಾರಿಮಂಡಳಿಯವರು ಕೇಂದ್ರಗಳ ಅಧ್ಯಕ್ಷರುಗಳು, ಕಾರ್ಯದರ್ಶಿಗಳು ಮತ್ತು ಸಂಚಾಲಕರು



ಶ್ರೀ ಕುಜುಗೋಡು ವೆಂಕಟರಮಣಗೌಡರು B.A., B.L.
ಪುತ್ತೂರು (ಪೋಷಕರು



ಶ್ರೀ ಕೋರನ ದೇವಯ್ಯನವರು
ಹೊದ್ದೂರು (ಪೋಷಕರು.)



ಶ್ರೀ ತೋಟಂಬೈಲು ಚಂಗಪ್ಪ ಬಿ.ಎ.ಬಿ.ಎಲ್.
ರವರು ಮಡಿಕೇರಿ (ಪೋಷಕರು)



ಶ್ರೀ ದಂಬೆಕೋಡಿ ಸುಬ್ರಾಯನವರು
ಚೆಟ್ಟಳ್ಳಿ (ಪೋಷಕರು)



ಶ್ರೀ ದೇವರ ಗುಂಡ
ಸುಬ್ಬಣ್ಣನವರು ಸುಳ್ಯ (ಪೋಷಕರು)



ಡಾ|| ಗುಡ್ಡೆಮನೆ ಗಣಪತಿ ಬಲಮುರಿ
(ಪೋಷಕರು)



ಶ್ರೀ ಡಂಜೆಕೋಡಿ ಚಿಣ್ಣಪ್ಪ B.Com
B. L ರವರು ಮಡಿಕೇರಿ (ಪೋಷಕರು)



ವಿದ್ವಾನ್ ಕೊಳಂಬೆ ಪುಟ್ಟಣ್ಣ
ಗೌಡರು ಸುಳ್ಯ (ಪೋಷಕರು)



(ಕೆ. ವ್ಯಾಲಪ್ಪಗೌಡರು)
(ಸುಳ್ಯ) (ಪೋಷಕರು)



ಶ್ರೀ ಬೈಮನ ಪೊನ್ನಪ್ಪನವರು
ವಾಲಪೊರೈ (ಪೋಷಕರು)



ಶ್ರೀ ಮಾವಾಜಿ ಜನಾರ್ಧನ
B.A.M.L., ಲೀಗಲ್ ಅಡ್ವೈಸರ್



ಶ್ರೀ ಕೆದಂಬಾಡಿ ಮೊಣ್ಣಪ್ಪನವರು
ಅಚ್ಯುತ್‌ಮಂಗಲ (ಪೋಷಕರು)



ಶ್ರೀ ಜೆರಿಯ ಮನೆ
ಪೊನ್ನಪ್ಪನವರು
ಹೊಸಕೇರಿ (ಪೋಷಕರು)



ಶ್ರೀಮತಿ ಜೆರಿಯಮನೆ
ಪೊನ್ನಮ್ಮನವರು
ಹೊಸಕೇರಿ (ಪೋಷಕರು)



ಶ್ರೀ ಹೊದ್ದೆಟ್ಟಿ ವೆಂಕಪ್ಪನವರು
ಸಂಪಾಜೆ (ಪೋಷಕರು)

1968-69ರ ಅಧ್ಯಕ್ಷರು



ಶ್ರೀ ಪಡ್ಡಂಬೈಲು ಮುದ್ದಪ್ಪ
MSc., (Ag) ರವರು



ಕೇಪ್ಟನ್ ಕುಯ್ಯಮುಡಿ ಪ್ರಭಾಕರ್‌ರವರು
ಬೆಂಗಳೂರು (ಪೋಷಕರು)



ಕುಳಿತವರು : ಎಡದಿಂದಬಲಕ್ಕೆ :– ಶ್ರೀಗಳಾದ ಪೂಜಾರಿರ ಪೊಣ್ಣಪ್ಪ M.A.,D.P.M.R., B.E,d., B.L., (ಸಂಪಾದಕರು) ಮುಕ್ಕಾಟಿರ ವಾಸುದೇವ B.Com., (ಕಜಾಂಚಿ) ಕೋಟಂಬ್ಳೈಲು ನಾಣಯ್ಯ (ಉಪಾಧ್ಯಕ್ಷರು) ಡಾ॥ ಕಾಯರಮಾರ್ ವೀರಪ್ಪಗೌಡರು G.M.V.C.,P.G., (U.S.A)(ಸಂಪಾದಕರು) ಪಡ್ಡಂಬೈಲು ವೆಂಕಟರಮಣ, B.Sc,. B.Ed., B.L , D.S.S., (ಅಧ್ಯಕ್ಷರು) ಐಯ್ಯಂಡ್ರ ಭೀಮಯ್ಯ B.Sc., (ಕಾರ್ಯದರ್ಶಿ) ಶ್ರೀಮತಿ ಕುರಿಯ ಚಂದ್ರಾವತಿ ಚಾಮಯ್ಯ (ಸದಸ್ಯರು) ಕುಮಾರಿ ಚೆರಿಯಮನೆ ಲೀಲಾ (ಸದಸ್ಯರು) ಬಾರನ ದೇವಯ್ಯ (ಸಂಪಾದಕರು)

ನಿಂತವರು :– 1ನೇ ಸಾಲು ಶ್ರೀಗಳಾದ ಕೊಪ್ಪಡ್ಕ ಕೃಷ್ಣಪ್ಪ, (ಸದಸ್ಯರು) ಮಂಜಪುರ ಪೊಣ್ಣಪ್ಪ (ಸದಸ್ಯರು) ಶಿರಕಜೆ ಆನಂದ (ಸದಸ್ಯರು) ಪಂಜಿಕೋಡಿ ಚಂದ್ರಶೇಖರ, (ಸದಸ್ಯರು) ಮುಂಗ್ಲಿಮನೆ ಚಂಪಪ್ಪಗೌಡರು B.A., (ಸಂಪಾದಕರು) ಪಂಜಿಕೋಡಿ ಆನಂದ B.Com. C.A., (ಆಡಿಟರು)

ನಿಂತವರು :– ಎರಡನೇ ಸಾಲು ದಂಜಿಕೋಡಿ ಸುಭಾಸ್ (ಸದಸ್ಯರು) ಕೇವಳ ಚಿನ್ನಪ್ಪಗೌಡರು B.A., (ಸಂಪಾದಕರು) ಹೊದ್ದೆಟ್ಟಿ ಭವಾನಿಶಂಕರ್ (ಸಂಪಾದಕರು) ಕಾಳೇರಮ್ಮನ ದೇವಯ್ಯ (ಸದಸ್ಯರು) ಕೆದಂಬಾಡಿ ಪೊನ್ನಪ್ಪ (ಸದಸ್ಯರು) ಕಾಯರಮಾರ್ ರಾಜಗೋಪಾಲ್ B.Sc., (Ag) (ಸಂಪಾದಕರು) ತಿಕ್ಕಡ ಗೋಪಾಲ್ (ಸದಸ್ಯರು). ಕೆಳಗೆ ಕುಳಿತವರು ಕುಮಾರಿ ಚೆರಿಯಮನೆ ಸುಶೀಲ, ಕುಮಾರ ಕುರಿಯ ಅಚ್ಚುತ ಚಾಮಯ್ಯ.



ಶ್ರೀ ಸೂದನ ನಂಜಪ್ಪನವರು
ಆಲೂರು ಕೇಂದ್ರದ ಅಧ್ಯಕ್ಷರು



ಶ್ರೀ ಮೂಟೇರ ಕುಟ್ಟಪ್ಪನವರು
ಅರ್ವತ್ತೊಕ್ಲು ಕೇಂದ್ರದ ಅಧ್ಯಕ್ಷರು.



ಶ್ರೀ ಮಕ್ಕಾಟಿರ ಗಣಪತಿಯವರು
ಆಲೂರು ಕೇಂದ್ರದ ಕಾರ್ಯದರ್ಶಿಗಳು



ಶ್ರೀ ಮುಲೆಮಜ್ಲ ಸೋಮಣ್ಣನವರು
ಕಾಜೂರು ಕೇಂದ್ರದ ಅಧ್ಯಕ್ಷರು



ಶ್ರೀ ಮಂಡೇಕೋಲು ಗಂಗಾಧರ್
ಬಿ.ಎ., ಬಿ.ಎಡ್., ರವರು
ಸುಳ್ಯದ ಸಂಚಾಲಕರು



ಶ್ರೀಯಂಕನ ಕುಶಾಲಪ್ಪನವರು ಬಿ.ಎ. ಬಿ.ಎಲ್.,
ಸುಂಟಿಕೊಪ್ಪದ ಸಂಚಾಲಕರು



ಶ್ರೀ ಕೆಮ್ಮಾರನ ಗಣಪತಿಯವರು
ನಂಜರಾಜ ಪಟ್ಣದ ಸಂಚಾಲಕರು.



ಶ್ರೀ ಕುಂಬಗೌಡನ ಭೀಮಯ್ಯನವರು
ಎಂ.ಎ.ಬಿ.ಇಡಿ., ಮಡಿಕೇರಿಯ
ಸಂಚಾಲಕರು.



ಶ್ರೀ ಮೂಲೆಮಜ್ಲು ಶಿವರಾಮಯ್ಯನವರು
ಸಂಪಾಜೆ ಕೇಂದ್ರದ ಸಂಚಾಲಕರು



ಶ್ರೀ ಟಿ. ಜಿ. ಮದೂರುರವರು
ಪಂಜದ ಸಂಚಾಲಕರು



ಶ್ರೀ ಕೆ. ಜಿ. ಜಯರಾಂ (ಬಿ.ಎಸ್.ಸಿ.,)
ಪುತ್ತೂರಿನ ಸಂಚಾಲಕರು

## ೧೯೬೯-೭೦ನೇ ಸಾಲಿನಲ್ಲಿ
## ಸಮಾಜದ ಕಾರ್ಯ ಕಲಾಪ ಹಾಗೂ ವಿಶೇಷ ಸಂಚಿಕೆಯ ಖರ್ಚಿಗಾಗಿ
## ೫೦ ರೂಗಿಂತ ಹೆಚ್ಚಿನ ಧನಸಹಾಯ ಮಾಡಿದ ಮಹನೀಯರು.



ಶ್ರೀವರ್ಮಾ ಯಂಕನ ಉತ್ತಯ್ಯನವರು ಉಲುಗುಲಿ ಗ್ರಾಮಪಂಚಾಯಿತಿಯ ಅಧ್ಯಕ್ಷರಾಗಿದ್ದಾರೆ. ಇವರೊಬ್ಬ ಯುವಕ ಮುಂದಾಳುಗಳಾಗಿ ಅನೇಕ ಸಾರ್ವಜನಿಕ ಕಾರ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. (ಪೋಷಕರು)



ಚೇರಳ ಶ್ರೀ ಮಂಗಲ ಗ್ರಾಮದ ಶ್ರೀ ಪೇರಿಯನ ಪೂವಯ್ಯನವರು ಕಾಫಿ ತೋಟಗಾರರು. ಇವರು ಗೌಡಸಂಘದ ಕಾರ್ಯದರ್ಶಿಗಳಾಗಿ ತುಂಬಾ ಸೇವೆ ಸಲ್ಲಿಸಿದ್ದಾರೆ. ಮೈಸೂರಿನ ನಿಯೋಜಿತ ಗೌಡ ಹಾಸ್ಟೇಲಿಗೆ 1000ರೂ ಧನ ಸಹಾಯಮಾಡಿದ್ದಾರೆ ಇವರು 1968ರಲ್ಲಿ ಧನ ಸಹಾಯ ಮಾಡಿದ್ದಾರೆ.



ಬಿಳಿಗೇರಿ ಗ್ರಾಮದ ದಿವಂಗತ ಶ್ರೀ ದಂಬೆಕೋಡಿ ಅಪ್ಪಚ್ಚನವರು ಕೊಡಗು ಗೌಡ ವಿದ್ಯಾಸಂಘದ ಏಳಿಗೆಗಾಗಿ ದುಡಿದಿದ್ದಾರೆ. ಇವರೊಬ್ಬ ಹೆಸರಾಂತ ಜಮೀನ್ದಾರರು. ವೈಸರಾಯರನ್ನು ಭೇಟಿಮಾಡಿದ ಮಹನಿಯರಲ್ಲೊಬ್ಬರು



ಶ್ರೀವರ್ಮಾ ಯಂಕನ ಅಣ್ಣಯ್ಯನವರು ನಾರ್ಗಣೆ ಗ್ರಾಮದ ಕಾಫಿ ತೋಟಗಾರರು. ಹರೆಯದ ವಯಸ್ಸಿನಲ್ಲಿ ಅನೇಕ ಸಾರ್ವಜನಿಕ ಕ್ಷೇತ್ರದಲ್ಲಿ ದುಡಿದು ಹೆಸರು ಪಡೆದಿದ್ದಾರೆ. ಇವರು ವೈಸರಾಯರನ್ನು ಭೇಟಿಮಾಡಿದ ಮಹನೀಯರಲ್ಲೊಬ್ಬರು (ಪೋಷಕರು)



ಬಿಳಿಗೇರಿ ಗ್ರಾಮದ ದಿವಂಗತ ಶ್ರೀ ದಂಬೆಕೋಡಿ ಪೊನ್ನಪ್ಪನವರು ಒಬ್ಬ ಹೆಸರಾಂತ ಜಮೀನ್ದಾರರಾಗಿದ್ದಾರೆ. ಇವರುಹಲವಾರು ಸಾರ್ವಜನಿಕ ಸಂಸ್ಥೆಗಳಿಗೆ ಧನಸಹಾಯಮಾಡಿದ್ದಾರೆ.





ಶ್ರೀ ಮತ್ತು ದಿವಂಗತ ಶ್ರೀಮತಿ ಜಾರುವಾಕು ಪದ್ಮಯ್ಯ ಗೌಡರು ಪುತ್ತೂರಿನವರಾಗಿದ್ದು ಒಬ್ಬ ಪ್ರತಿಭಾವಂತ ವ್ಯಕ್ತಿ ದಕ್ಷಿಣಕನ್ನಡ ಗೌಡ ವಿದ್ಯಾಸಂಘದ ಏಳಿಗೆಗಾಗಿ ದುಡಿದಿದ್ದಾರೆ. ಇವರು ಅಧ್ಯಕ್ಷರಾಗಿದ್ದಾಗ ಗೌಡ ವಿದ್ಯಾಸಂಘವು ಉನ್ನತ ಸ್ಥಿತಿಗೆ ಬಂದಿತು. ಇವರೊಡನೆ ದಿವಂಗತ ಶ್ರೀಮತಿ ಪದ್ಮಯ್ಯ ಗೌಡರು ತುಂಬಾ ಸೇವೆ ಸಲ್ಲಿಸಿದ್ದಾರೆ. (ಪೋಷಕರು)



[illegible] ಗೌಡರು M.P.C.C. ಸದಸ್ಯರು ಯುವಕ ಮಂಡಳಿ ಹಲವಾರು ಸಾರ್ವಜನಿಕ ಕ್ಷೇತ್ರದಲ್ಲಿ ದುಡಿದಿದ್ದಾರೆ ಸುಳ್ಯದ ಒಬ್ಬ ಪ್ರಭಾವವಂತ ವ್ಯಕ್ತಿಯಾಗಿದ್ದಾರೆ

(ಪೋಷಕರು)



ದಿವಂಗತ ಶ್ರೀ ದಂಬೆಕೋಡಿ ಬೋಪಣ್ಣನವರು ಬಿಳಿಗೇರಿ ಗ್ರಾಮದವರು. ಇವರು ಕೊಡಗು ಗೌಡ ವಿದ್ಯಾರ್ಥಿ ಭವನದ ಏಳಿಗೆಗಾಗಿ ದುಡಿದಿದ್ದಾರೆ ಇವರ ಜ್ಞಾಪಕಾರ್ಥವಾಗಿ ಶ್ರೀ ದಂಬೆಕೋಡಿ ಸುಬ್ರಾಯನವರು ಧನಸಹಾಯ ಮಾಡಿದ್ಧಾರೆ.



ಕಾಜೂರು ಗ್ರಾಮದ ಶ್ರೀ ಕಾಳೇರಮ್ಮನ ಐಯ್ಯಣ್ಣನವರು ಒಬ್ಬ ಕಾಫಿ ತೋಟಗಾರರು. ಹಲವಾರು ಸಾರ್ವಜನಿಕ ಸಂಸ್ಥೆಗಳಿಗೆ ಧನಸಹಾಯಮಾಡಿದ್ದಾರೆ ಇವರೊಬ್ಬ ಆದರ್ಶ ವ್ಯವಸಾಯಗಾರರು.

(ಪೋಷಕರು)



ದೇವಚಳ್ಳಗ್ರಾಮದ ಮುಂಡೋಡಿ ಕುಶಾಲಪ್ಪ ಗೌಡರು ಹಲವಾರು ಸಾರ್ವಜನಿಕ ಕಾರ್ಯಕ್ಷೇತ್ರದಲ್ಲೂ ಗೌಡ ವಿದ್ಯಾ ಸಂಘದ ಏಳಿಗೆಗಾಗಿಯೂ ದುಡಿದಿದ್ದಾರೆ. ಅಲ್ಲದೆ ಧನಸಹಾಯವನ್ನೂ ಮಾಡಿದ್ದಾರೆ. (ಪೋಷಕರು)



ಶ್ರೀ ಅಮಣ್ಣರ ರಾಮಣ್ಣಗೌಡರು ಜಾಲಸೂರು ಗ್ರಾಮದವರು. ಸುಳ್ಯ ತಾಲೋಕು ಅಭಿವೃದ್ಧಿ ಮಂಡಳಿಯ ಸದಸ್ಯರು. ಇದಲ್ಲದೆ ಸಹಕಾರ ಸಂಘ ಮತ್ತು ಗ್ರಾಮ ಪಂಚಾಯತಿಗೆಯಲ್ಲಿ ಸೇವೆ ಸಲ್ಲಿಸಿದ್ದಾರೆ. ಗೌಡ ವಿದ್ಯಾ ಸಂಘದ ಅಭಿವೃದ್ಧಿಗೆ ತುಂಬಾ ಶ್ರಮಿಸಿದ್ದಾರೆ. (ಪೋಷಕರು)



ದೇವಚಳ್ಳಗ್ರಾಮದ ಶ್ರೀ ಮುಂಡೋಡಿ ಬೆಳ್ಯಪ್ಪ ಗೌಡರು ಸುಳ್ಯ ತಾಲೋಕು ಅಭಿವೃದ್ಧಿ ಮಂಡಳಿಯ ಸದಸ್ಯರು ಇವರು ಪಂಚಾಯತಿ, ಸಹಕಾರ ಸಂಘ ಮತ್ತು ಗೌಡ ವಿದ್ಯಾ ಸಂಘಗಳಲ್ಲಿ ಸಾಕಷ್ಟು ದುಡಿದಿದ್ದಾರೆ. (ಸಂಚಾಲಕರು)



ನಿಡ್ಯಮಲೆ ಸೋಮಣ್ಣ ದಯಾನಂದನವರು ಒಬ್ಬ ಯುವಕ ಕಾಫಿತೋಟಗಾರರು ಇವರು ದಿ॥ ನಿಡ್ಯಮಲೆ ಸೋಮಣ್ಣನವರ ಪುತ್ರರು (ಪೋಷಕರು)



ಮುತ್ತಾರ್ಮುಡಿ ಗ್ರಾಮದ ಕೊಡೆಕಲ್ಲು ಶಿವಯ್ಯನವರು ಹಾಕತ್ತೂರು ಗ್ರಾಮದ ಪಂಚಾಯತಿ ಅಧ್ಯಕ್ಷರಾಗಿದ್ದಾರೆ. ಇವರು ತಮ್ಮ ಊರಿನ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ. (1968ರಲ್ಲಿ ಧನ ಸಹಾಯ ಮಾಡಿದರು.) (ಪೋಷಕರು)



ದಿವಂಗತ ಶ್ರೀಮತಿ ಬಾಳನ ಮುದ್ದಪ್ಪ ಗೌರಮ್ಮ ಒಬ್ಬ ಆದರ್ಶ ತಾಯಿಯಾಗಿ ದುಡಿದು ತನ್ನ ಕುಟುಂಬ ಏಳಿಗೆಗಾಗಿ ಶ್ರಮಿಸಿದ್ದಾರೆ. ಇವರ ಪುತ್ರ ಶ್ರೀ ಬಾರನ ದೇವಯ್ಯನವರು ಇವರ ಜ್ಞಾಪಕಕ್ಕಾಗಿ ಧನಸಹಾಯ ಮಾಡಿದ್ದಾರೆ.



ಕಾಜೂರು ಗ್ರಾಮದ ಮೂಲೆಮಜ್ಲು ಸೋವಣ್ಣ ಪೊನ್ನಪ್ಪನವರು ಸೈನ್ಯದಲ್ಲಿ ಸೇವೆಸಲ್ಲಿಸುತ್ತಿದ್ದಾರೆ. ಇವರು ತಮ್ಮ ಸೇವೆಯ ಅವಧಿಯಲ್ಲಿ ದೊಡ ಅಧಿಕಾರಿಯಾಗಲೀ ಎಂದು ಹಾರೈಸುತ್ತೇವೆ. (ಪೋಷಕರು)





ಶ್ರೀ ಮತ್ತು ಶ್ರೀಮತಿ ಉರುಬೈಲು ಪುಟ್ಟಪ್ಪನವರು. ಶ್ರೀ ಊರು ಬೈಲು ಪುಟ್ಟಪ್ಪನವರು ಅರಣ್ಯ ಇಲಾಖೆಯಲ್ಲಿ ಅಧಿಕಾರಿಯಾಗಿದ್ದಾರೆ. ಸರಳ ಸ್ವಭಾವದ ಇವರು ಜನರ ಮೆಚ್ಚಿಗೆಯನ್ನು ಸಂಪಾದಿಸಿದ್ದಾರೆ. ಶ್ರೀಮತಿ ಊರುಬೈಲು ಪುಟ್ಟಪ್ಪನವರು ಪುತ್ತೂರು ಟೌನ್ ಪಂಚಾಯತಿಯ ಸದಸ್ಯರಾಗಿದ್ದಾರೆ. ಸಾರ್ವಜನಿಕ ಸೇವೆಯಲ್ಲಿ ತುಂಬಾ ಶ್ರದ್ಧೆಯಿಂದ ದುಡಿಯುತ್ತಿದ್ದಾರೆ. (ಪೋಷಕರು)



ಶ್ರೀ ಕೊಡೇಕಲ್ಲು ಕುಶಾಲಪ್ಪನವರು
ಮತ್ತಾರುಡ ಗ್ರಾಮದ ಮುಂದಾಳು ಹಾಗೂ
ಪ್ರಗತಿ ಪರ ವ್ಯವಸಾಯಗಾರರು



ಶ್ರೀ ತೆಕ್ಕಡ ಉತ್ತಯ್ಯನವರು ಮುತ್ತಾರ್ಮುಡಿ ಗ್ರಾಮದವರು_
ಇವರು ಪೋಸ್ಟ್ ಮಾಸ್ಟರಾಗಿ ನಿವೃತ್ತರಾಗಿದ್ದಾರೆ, ಜನಾನು
ರಾಗಿಯಾಗಿ ಸೇವೆ ಸಲ್ಲಿಸಿ ಎಲ್ಲರ ಪ್ರೀತಿಗೂ ಪಾತ್ರರಾಗಿದ್ದಾರೆ.



ದೇರಪಜ್ಜನ ವೀರಪ್ಪ ಗೌಡರು
ಶ್ರೀಯುತರು ದ. ಕ. ಗೌಡವಿದ್ಯಾಸಂಘದ ಉಪಾಧ್ಯಕ್ಷ
ಮತ್ತು ಅಧ್ಯಕ್ಷರಾಗಿ ೨ ದಶಕಗಳಿಗಿಂತ ಹೆಚ್ಚು ದುಡಿದು
ವಿದ್ಯಾಸಂಘದ ಅಭಿವೃದ್ಧಿಗೆ ಕಾರಣಕರ್ತರಾಗಿದ್ದಾರೆ.
ಇದಲ್ಲದೆ ಪಂಚಾಯತಿ ಸಹಕಾರ ಸಂಘಗಳಲ್ಲಿ ಸೇವೆ
ಸಲ್ಲಿಸಿದ್ದಾರೆ.



ಪದ್ಮನಾಭನವರು
ಶ್ರೀಯುತರು ಯಾನೆಕಲ್ಲು ಗೌಡ ಯುವಕ ಸಂಘದ ಅಧ್ಯಕ್ಷರಾ-
ಯುವಕರಾದ ಇವರು ತಮ್ಮ ಯುವಕಸಂಘದ ಮೂಲಕ
ಸಮಾಜಸುಧಾರಣೆ, ಮದುವೆ ಮುಂಜಿಗಳಲ್ಲಿ ಊಟ
ಉಪಚಾರದ ವ್ಯವಸ್ಥೆಯನ್ನು ವಹಿಸಿಕೊಂಡು ಸಹಾಯ-
ಮಾಡುತ್ತಿರುವುದು ಶ್ಲಾಘನೀಯ,



ಹೆಗ್ಗಳ ಗ್ರಾಮದ ಟಿ. ಯಂ. ಬಾಬುರವರು
ಭಾರತ್ ಎಲೆಕ್ಟ್ರಾನಿಕ್ಸ್‌ನಲ್ಲಿ ಕೆಲಸ ಮಾಡುತ್ತಿದ್ದಾರೆ.
ಸಮಾಜದ ಕಾರ್ಯಕಲಾಪಗಳಿಗೆ ಹಣವನ್ನು ಒದಗಿಸಿಕೊಟ್ಟು
ಸಹಾಯಮಾಡಿದ್ದಾರೆ.



ಶ್ರೀ ಕೊಡೆಕಲ್ಲು ಸುಬ್ರಾಯನವರು
ಮತ್ತುರ್ಮುಡಿ ಗ್ರಾಮದ ತಮ್ಮ ಕುಟುಂಬದ ಪಟ್ಟೆದಾರ
ಇವರೊಬ್ಬ ಆದರ್ಶವ್ಯಕ್ತಿಯಾಗಿದ್ದಾರೆ.
(ಪೋಷಕರು)



ಶ್ರೀ ಮತ್ತು ಶ್ರೀಮತಿ ಡಂಬಿಕೋಡಿ ಮುಂದಣ್ಣನವರು
ಸೋಮವಾರ ಪೇಟೆ ತಾಲ್ಲೋಕಿನ ತಹಸಿಲ್‌ದಾರರಾಗಿದ್ದಾರೆ
ಇವರೊಬ್ಬ ಸರಳ ಸ್ವಭಾವ ವ್ಯಕ್ತಿಯಾಗಿ ಜನರ ಅನುರಾಗ
ವನ್ನು ಗಳಿಸಿದ್ದಾರೆ.
ಶ್ರೀಮತಿ ಮುಂದಣ್ಣನವರು ಒಬ್ಬ ಆದರ್ಶ ಮಹಿಳೆ.



ಶ್ರೀಮತಿ ಕೊಪತ್ತಿಲ ಅಮ್ಮ ತಾಯಿಯವರು
ಐವರ್ ನಾಡು ಗ್ರಾಮದವರಾಗಿದ್ದು ಹಲವಾರು
ಸಂಘ ಸಂಸ್ಥೆಗಳಿಗೆ ದಾನ ಮಾಡಿದ್ದಾರೆ.
ಇವರೊಬ್ಬ ಆದರ್ಶ ಮಹಿಳೆಯಾಗಿದ್ದಾರೆ.



ಶ್ರೀ ತುಮುತಜ್ಜೀರ ಬಿದ್ದಪ್ಪನವರು
ಅರ್ವತ್ತೆಕ್ಲು ಗ್ರಾಮಸ್ಥರಾಗಿದ್ದು ಸರಳ ಸ್ವಭಾವದ ಯುವಕ
ವ್ಯವಸಾಯಗಾರರೂ ಹಾಗೂ ಮುಂದಾಳು. (ಪೋಷಕರು)



ಕೊಡೆಕಲ್ಲು ಅಪ್ಪಚ್ಚನವರು
ಮುತ್ತಾರ್ಮುಡಿ ಗ್ರಾಮದ ಒಬ್ಬ ಪ್ರಗತಿ ಪರ ವ್ಯವಸಾಯ
ಗಾರರೂ ಸರಳ ವ್ಯಕ್ತಿಗಳು ಆಗಿದ್ದಾರೆ. (ಪೋಷಕರ



ಶ್ರೀ ಬಿಟ್ರ ವಿಠಲ್ ಬಿ.ಇ.
ಮುಂಬೈಯಲ್ಲಿ ಟಾಟಾ ಇಂಜಿನಿಯರಿಂಗ್ ಸರ್ವಿಸಸ್
ನಲ್ಲಿ ಅಸಿಸ್ಟೆಂಟ್ ಇಂಜಿನಿಯರಾಗಿ ಕೆಲಸ ಮಾಡು
ತ್ತಿದ್ದಾರೆ. ಯುವಕರಾದ ಇವರು ಇನ್ನೂ
ದೊಡ್ಡ ಹುದ್ದೆಯನ್ನು ಪಡೆಯಲೆಂದು
ಹಾರೈಸುತ್ತೇವೆ. (ಪೋಷಕರು)



ಶ್ರೀ ದೇರಪ್ಪಜ್ಜನರಾಮಪ್ಪ ಗೌಡರು
ಶ್ರೀಯುತರು ಸುಳ್ಯ ತಾಲೋಕು ಅಭಿವೃದ್ಧಿ
ಮಂಡಳಿಯ ಸದಸ್ಯರಾಗಿದ್ದಾರೆ. ಇದಲ್ಲದೆ
ಹಲವಾರು ಸಾರ್ವಜನಿಕ ಕ್ಷೇತ್ರದಲ್ಲಿ
ದುಡಿಯುತ್ತಿದ್ದಾರೆ. (ಪೋಷಕರ)



ಶ್ರೀ ಬಾಳಾಡಿಮಾವಪ್ಪನವರು ಅರ್ವತ್ತೊಕ್ಲು ಗ್ರಾಮದ ಒಬ್ಬ ಯುವಮುಂದಾಳು ಒಬ್ಬ ಪ್ರಗತಿಪರ ವ್ಯವಸಾಯಗಾರರು (ಪ್ರೋಷಕರು)



ಶ್ರೀ ಹರಿಹರ ಪಲ್ಲತಡಗ್ರಾಮದ ಮಲ್ಲಾರ ಶ್ರೀ ಗಿರಿಯಪ್ಪಗೌಡರು ಸುಳ್ಯದ ತಾಲೋಕು ಬೋರ್ಡು ಸದಸ್ಯರು. ಹಲವಾರು ಸಂಘ ಸಂಸ್ಥೆಗಳ ಸದಸ್ಯರಾಗಿದ್ದಾರೆ ಇವರೊಬ್ಬ ದೊಡ್ಡ ಜಮೀನ್ದಾರರೂ, ಅಡಿಕೆ ತೋಟಗಾರರೂ ಆಗಿದ್ದಾರೆ. (ಪ್ರೋಷಕರು)



ಶ್ರೀ ಬಿಟ್ರುಉಲ್ಲಾಸ MSc (Ag) ರವರು ಕರ್ಣಾಟಕ ವಿಶ್ವವಿದ್ಯಾಲಯದಲ್ಲಿ MSc (Ag) ಪ್ರಥಮ ದರ್ಜೆಯಲ್ಲಿ ಪ್ರಥಮ ಸ್ಥಾನ ಪಡೆದು ಪೂನವಲ್ಲಿ PHDಗೆ ಸಂಶೋದನೆ ನಡೆಸುತ್ತಿದ್ದಾರೆ. (ಪ್ರೋಷಕರು)



ಶ್ರೀ ಸಂಪಾಜೆ ದೇವಿಪ್ರಸಾದ್ B.A.,ರವರು ಮಡಿಕೇರಿಯ ತಾಲ್ಲೋಕು ಅಭಿವೃದ್ಧಿಮಂಡಳಿಯ ಸದಸ್ಯರು ಇವರೊಬ್ಬ ಯುವಕ ಮುಂದಾಳು. ಇವರು ಹಲವಾರು ಸಾರ್ವಜನಿಕ ಸಂಸ್ಥೆಗಳಿಗೆ ದಾನಮಾಡಿದ್ದಾರೆ. (ಪ್ರೋಷಕರು)



ಶ್ರೀ ನಂಗಾರು ಸೋಮಪ್ಪನವರು
ಸೋಮವಾರಪೇಟೆ ತಾಲೋಕಿನ ನಾಗವಾಲ
ಗ್ರಾಮದವರು ಇವರೊಬ್ಬ ಮಾದರಿ ವ್ಯವಸಾಯ
ಗಾರರಾಗಿ ಊರಿನ ಒಬ್ಬ ಗಣ್ಯವ್ಯಕ್ತಿಯಾಗಿದ್ದಾರೆ.



ದಿವಂಗತ ನಡುಬೆಟ್ಟು ಸಣ್ಣಯ್ಯಗೌಡರು
ಒಬ್ಬ ಜಮೀನ್ದಾರಾಗಿ ಹೆಸರುವಾಸಿಯಾಗಿದ್ದರು
ಇವರ ಜ್ಞಾಪಕಾರ್ಥವಾಗಿ ಇವರ ಪುತ್ರ ಚೆಂಬ
ಗ್ರಾಮದ ನಡುಬೆಟ್ಟು ದೇವಪ್ಪಗೌಡರು ದಾನ
ಮಾಡಿದ್ದಾರೆ.

# ಪ್ರಾರ್ಥನೆ

ಲೇಖಕರು : ಹೊದ್ದೆಟ್ಟಿ ಭವಾನಿ ಶಂಕರ್

---

ನಿನ್ನನೆ ನಂಬಿಯೊಳೊ ।
ಜಗತ್ತ್‌ಲಿ
ಜನಂಗೆಲ್ಲ
ನಿನ್ನದೆ ಗೇನಲೊಳೊ ॥

ಎಲ್ಲರ ಪ್ರೀತಿಲಿ ಸಾಂಕ್‌ನಿ ಬ್ರಹ್ಮ ।
ಎಲ್ಲರ ಕಾಯುದು ನಿನ್ನ್‌ದ್ ಧರ್ಮ ।
ಬೇಡುವೆ ನಿನ್ನನ ಬೊದ್ಕಿಸ್ ನಮ್ಮ
ಹೊತ್ತು ಕೊಂಡೊಳೊ ನಾವು ಎಂತೊದೊ ಕರ್ಮ
॥ ನಿನ್ನನೆ ॥

ಗೂಡ್‌ಲಿ ಹಾಕಿದ ಹಕ್ಕಿನಾಂಗಾಕಂಡ್ ।
ಬಡವರ ಕಷ್ಟನ ನೋಡಿವೆ ಯಾರಿಂದ್ ।
ಮುಂದೆಗೆ ಹೋಕೆನು ದಾರಿಟ್ಟ್ ಎಲ್ಲಿಂದ್ ।
ಎಲ್ಲರ ಕಷ್ಟ ನೀವಾರಿಸ್ ನೀ ಬಂದ್ ॥ ನಿನ್ನನೆ ॥

ನಿನ್ನ ರಥನ ಎಳಿವ ಕುದುರೆಗ ನಾವು ।
ನೀ ಓಡ್ಸಿದಾ ಕಡೆ ಓಡಿಕೊಂಡೋವು ॥
ನೀ ಹೊಡಿವಾ ಪೆಟ್ಟ್ ತಿಂಬೊದು ನಾವು ।
ನೀ ಕರೆಕಾಕನ ಓಡೋಡಿ ಬರೊವು ॥ ನಿನ್ನನೆ ॥

ಮೊನ್‌ಷಂಗೆ ಜನ್ಮನ ಕೊಟ್ಟ್‌ದ್ ನೀನೆ ।
ನೆನ್ಸಿದ್ ನೋಡ್ ನಿ ಎಲ್ಲರ ಬೇನೆ ॥
ಕಣ್ಣ್‌ಲಿ ಕಾಣದ ಸುಖಗಳ ತಾನೆ ।
ಮನ್ನಿಸಿ ಕೊಡೊಕುಂತ ನಾನಿನ್ನ ಬೇಡ್ನೆ ॥ ನಿನ್ನನೆ ॥

ಭಾಗ ೧

## ಚಾರಿತ್ರಿಕ ವಿಭಾಗ

# ಗೌಡ ಸಮಾಜ ಗೌಡ ರಾಜ್ಯ

ಲೇಖಕರು : ಮಾಕೋನಹಳ್ಳಿ ದೊಡ್ಡಮನೆ ದೊಡ್ಡಪ್ಪಗೌಡರು



ಶ್ರೀ ದೊಡ್ಡಪ್ಪಗೌಡರು ಮಾಕೋನ ಹಳ್ಳಿಯ ಒಬ್ಬ ಕಾಫಿ ಪ್ಲಾಂಟರು. ಶ್ರೀಯುತರು ಬೆಂಗಳೂರು ಇಂಟರ್‌ಮಿಡಿಯೇಟ್ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದ ನಂತರ 1928ರಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಕಾಂಗ್ರೆಸ್ಸಿಗೆ ಸೇರಿದರು. ಅಂದಿನಿಂದಲೂ ಕಾಂಗ್ರೆಸ್ ಸಂಸ್ಥೆಗಾಗಿ ದುಡಿಯುತ್ತಿದ್ದಾರೆ. ಇವರು ಡಾ|| ನಾ. ಸು. ಹರ್ಡೀಕರ್‌ರವರ ಶಿಷ್ಯರಾಗಿ ಹಿಂದೂಸ್ತಾನೀ ಸೇವಾದಳಕ್ಕೆ ಸೇರಿ ಉಪ್ಪಿನ ಸತ್ಯಾಗ್ರಹ, ಸೊಲ್ಲಾಪುರದಲ್ಲಿ (Martial Law) ಮಿಲಿಟರಿ ಕಾಯಿದೆ ಭಂಗದಲ್ಲಿ ಭಾಗವಹಿಸಿ ಚಿತ್ರಹಿಂಸೆಗೆ ಗುರಿಯಾದರು. ಅದರ ನಂತರ ಅರಣ್ಯ ಸತ್ಯಾಗ್ರಹಗಳನ್ನು ಯಶಸ್ವಿಯಾಗಿ ನಡೆಸಿದ್ದಾರೆ.

1932ರ ನಂತರ ಊರಿನ ಅಭಿವೃದ್ಧಿಗಾಗಿ ತಾಲ್ಲೋಕು ಕಾಂಗ್ರೆಸ್ಸಿನ ಸಂಘಟನೆ, ಊರಿನ ಹೈಸ್ಕೂಲು ಸ್ಥಾಪನೆ, ಮೂಡಿಗೆರೆ ಮುನಿಸಿಪಾಲಿಟಿ, ತಾಲ್ಲೋಕು ಅಭಿವೃದ್ಧಿ ಮಂಡಳಿ, ಸಹಕಾರ ಸಂಘ, ಏಲಕ್ಕಿ ವರ್ತಕರ ಸಂಘ, ಒಕ್ಕಲಿಗರ ವಿದ್ಯಾರ್ಥಿ ಭವನದ ಸಮಿತಿ, ಸಣ್ಣ ಕಾಫಿ ಬೆಳೆಗಾರರ ಸಂಘ, ಮೂಡಿಗೆರೆ ಕ್ಲಬ್, ಮಲೆನಾಡು ಅಭಿವೃದ್ಧಿ ಸ್ಥಾಯೀ ಸಮಿತಿ ಮುಂತಾದ ಹಲವಾರು ಸಾರ್ವಜನಿಕ ಕೆಲಸ ಕಾರ್ಯಗಳಲ್ಲಿ ತುಂಬಾ ಆಸಕ್ತಿ ವಹಿಸಿ ದುಡಿದು ಅವುಗಳನ್ನು ಕಾರ್ಯಗತ ಮಾಡಿದ್ದಾರೆ. ಈಗ ಶ್ರೀಯುತರು ಸಾರ್ವಜನಿಕ ಚಟುವಟಿಕೆಗಳಿಂದ ನಿವೃತ್ತರಾಗಿ ಸಾಹಿತ್ಯ ಮತ್ತು ಸಂಸ್ಕೃತಿಯ ದಿಸೆಯಲ್ಲಿ

ಸೇವೆಯನ್ನು ಸಲ್ಲಿಸಲು ಹೊರಟು ತಮ್ಮ ಕುಲಬಾಂಧವರ ಪೂರ್ವೇತಿಹಾಸ, ಸಾಮಾಜಿಕ ವಿಚಾರಗಳ ಕುರಿತು ವಿಚಾರ ಮಾಡುವವರಾಗಿ "ಒಕ್ಕಲಿಗರು" ಎಂಬ ಪುಸ್ತಕವನ್ನು ಬರೆದಿದ್ದಾರೆ. ಇದರಿಂದ ಭಾರತದ ಇತಿಹಾಸದ ಪುಟಕ್ಕೆ ಹೊಸ ಬೆಳಕನ್ನು ಚೆಲ್ಲುವುದಕ್ಕೆ ದಾರಿ ಮಾಡಿ ಕೊಟ್ಟಿದ್ದಾರೆ. ಇದೂ ಅಲ್ಲದೆ ಇವರು ಬರೆದಿರುವ ಸುಮಾರು 300 ಪುಟಗಳ "ಸತ್ಯಾಗ್ರಹಿ" ಎಂಬ ಕಾದಂಬರಿಯು ಆದಷ್ಟು ಶೀಘ್ರವಾಗಿ ಅಚ್ಚನ್ನು ಕಾಣಲಿದೆ. ಶ್ರೀಯುತ ದೊಡ್ಡಪ್ಪ ಗೌಡರು 60 ವರ್ಷ ಮೀರಿದವರಾದರೂ ಯುವಕರಂತೆ ಇನ್ನೂ ಹಗಲಿರುಳು ಸಾಮಾಜಿಕ ಮತ್ತು ಸಾಹಿತ್ಯ ಸೇವೆಯಲ್ಲಿ ನಿರತರಾಗಿರುವುದು ಶ್ಲಾಘನೀಯ.

–ಸಂ.]

---

ಊರಿಗೊಬ್ಬ ಗೌಡ ದೇಶಕ್ಕೊಬ್ಬ ದೊರೆ. ಇದು ಕನ್ನಡದ ನಾಡನುಡಿ. ದೇಶದ ಜನತೆ ಪೂರ್ವದ ಒಕ್ಕಲಿಗ ಗೌಡರುಗಳ ಬಳಕೆಯ ಮಾತು. ಇದನ್ನು ಗೌಡಾಳ್ವಿಕೆಯೆಂದೇ ಕರೆಯುತ್ತಾರೆ. "ಗೌಡ" ಶಬ್ದವು ಅತೀ ಪ್ರಾಚೀನವಾದದ್ದು. ಪುರಾತನ ಗದ್ಯ ಸಾಹಿತ್ಯದಲ್ಲಿ ಅಂಗವಂಗ – ಕಳಿಂಗ ಮುಂತಾದ ಐವತ್ತಾರು (ಚಪ್ಪನ್ನಾರು) ದೇಶಗಳ ಹೆಸರು ಹೇಳುವಾಗ ಗೌಡ ದೇಶವೂ ಇರುತ್ತದೆ. ಇದರಿಂದ ಗೌಡ ರಾಜ್ಯವೊಂದು ಇತ್ತೆಂಬುದಾಗಿ ತಿಳಿಯಬಹುದು.

ಪ್ರಸಿದ್ಧ ಚರಿತ್ರೆಕಾರರಾದ ಪ್ರೊ|| ಪಿ. ಎನ್. ಓಕ್, ಎಂ.ಎ. ಎಲ್.ಎಲ್.ಬಿ., ಯವರು ತಮ್ಮ "ಭಾರತದ ಇತಿಹಾಸದ ಮೇಲೆ ಹೊಸ ಬೆಳಕು" ಎಂಬ ಪುಸ್ತಕದಲ್ಲಿ (ಪುಟ ೧೦) ರಲ್ಲಿ ಹೀಗೆ ಹೇಳಿದ್ದಾರೆ "ಪೂರ್ವದಲ್ಲಿ ಆಂಧ್ರ, ತಮಿಳುನಾಡು, ಕರ್ನಾಟಕ, ಮಹಾರಾಷ್ಟ್ರ ಗುಜರಾತ್‌ಗಳು ಪಂಚಗೌಡ ದೇಶವೆಂದು ಕರೆಯಲ್ಪಟ್ಟದ್ದೆಂದು ಹೇಳುತ್ತಾರೆ" ಇವರ ಅಭಿಪ್ರಾಯದಂತೆ "ದ್ರಾವಿಡ"ಯೆಂಬುದು ಒಂದು ಸಂಸ್ಕೃತಿಯ ಹೆಸರೇ ವಿನಃ ಅದನು ಒಂದು ಜಾತಿಯೆನ್ನಿಸುವುದಿಲ್ಲ.

ಅದರಂತೆ "ಗೌಡ"ಯೆಂಬುದು ಆ ಕಾಲದಲ್ಲಿ ಪ್ರಚಲಿತವಾಗಿದ್ದ ಒಂದು ಸಂಸ್ಕೃತಿಯ ಹೆಸರುಯೆಂಬುದೂ ಸ್ಪಷ್ಟವಾಗಿದೆ. ಮತ್ತು ಐತರೇಯ ಅರಣ್ಯದಲ್ಲಿ ಕಂಡುಬರುವ ಚೇರ ಜನಾಂಗ ಬಿಹಾರದಿಂದ ಅಸ್ಸಾಂವರೆಗೆ ಪ್ರಬಲರಾಗಿದ್ದರು ಅವರು ಗೌಡ ಸಂಸ್ಕೃತಿಯ ಪರಿಪೋಷಕರಾಗಿ ಬಾಳುಗೊಂಡಿದ್ದರು ಎಂತಲೂ ಅಭಿಪ್ರಾಯವಾಗುತ್ತದೆ.

ಆರ್ಯಾವೃತ್ತದಿಂದ ದಕ್ಷಿಣಕ್ಕೆ ವಲಸೆ ಬಂದ ಚೇರರು ತಮ್ಮ ಸಂಸ್ಕೃತಿಯ ಪ್ರತೀಕವಾಗಿ "ಗೌಡ" ಎಂಬ ಹೆಸರಿನಿಂದಲೇ ಇಂದಿಗೂ ಉಳಿದುಕೊಂಡು ಬಂದಿದ್ದಾರೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಸೋಮೇಶ್ವರನ ಮಗ ವಿಕ್ರಮಾದಿತ್ಯ II (ತ್ರಿಭುವನ ಮಲ್ಲ ಕ್ರಿ. ಶ. 1076–1126) ಬಂಗಾಳದ ಗೌಡ ರಾಜ್ಯ ಮತ್ತು ಆಸ್ಸಾಂಗಳನ್ನು ಗೆದ್ದಂತೆ ಉಲ್ಲೇಖವಿದೆ. ರಾಷ್ಟ್ರಕೂಟ ಅರಸ ಅಮೋಘ ವರ್ಷನ ಮಗನಾದ ಕೃಷ್ಣ II ಅಥವಾ ಅಕಾಲ ವರ್ಷ (777 – 799)ನು "ಲಾಟ್"ರನ್ನು ಮತ್ತು "ಗೌಡ"ರು‡ ಗಳನ್ನು ಸದೆಬಡಿದಂತೆಯೂ ಇದೆ.

ಈ ಗೌಡರಾಜ್ಯಗಳು ಯಾವುದೆಂದು ತಿಳಿಯದು. ಆದರೆ ಚೋಳರಿಂದ ನಾಶವಾದ ತಲಕಾಡಿನ ಗಂಗರಸ ಸಂತತಿಯಲ್ಲಿ ಚೋರಗಂಗ ಎಂಬವನು ಅಳಿದುಳಿದ ಸೈನಿಕರನ್ನು ಕೂಡಿಕೊಂಡು ಬಹು ದೂರದ ಒರಿಸ್ಸಾ ಪ್ರಾಂತಕ್ಕೆ ನುಗ್ಗಿ ಆ ದೇಶವನ್ನು ಗೆದ್ದು ಗಂಗರಾಜ್ಯವನ್ನು ಸ್ಥಾಪಿಸಿದನು. ಪುರಿ ಜಗನ್ನಾಥ ದೇವಾಲಯವನ್ನು, ಕೋನಾರಾಕ್ ಸೂರ್ಯ ದೇವಾಲಯವನ್ನೂ ಕಟ್ಟಿಸಿದವರು ಈ ವಂಶದವರೇ. ಜಗನ್ನಾಥ ದೇವಾಲಯದಲ್ಲಿ ಇಂದಿಗೂ ಇರುವ ದಾಖಲೆಯಂತೆ ಈ ವಂಶೀಕರು ಕ್ರಿ. ಶ. ೧೧೩೨ರಿಂದ ೧೫೩೪ರ ವರೆಗೆ ಆ ದೇಶವನ್ನು ಆಳುತ್ತಿದ್ದರು. ತ್ರಿಭುವನ ಮಲ್ಲನು ೧೧೨೭ ರಲ್ಲಿ

---

*Early History of Deccan R.G. Bhandarakar (P. P. 90-174)

ಬಂಗಾಳದ ಗೌಡ ರಾಜ್ಯವನ್ನು ಸೋಲಿಸಿದನು ಎನ್ನುವುದಕ್ಕೆ ಇಲ್ಲಿ ಸ್ವಲ್ಪ ಮಟ್ಟಿಗೆ ಸಮರ್ಥನೆ ದೊರೆಯುತ್ತದೆ. ಚೋರಗಂಗನು ಒರಿಸ್ಸಾ ಪ್ರಾಂತ್ಯಕ್ಕೆ ಧಾಳಿ ಇಟ್ಟ ಒಡನೇ ರಾಜ್ಯ ಸಂಪಾದನೆಯಾಯಿತೆಂದು ಊಹಿಸಲೂ ಸಾಧ್ಯವಿಲ್ಲ. ರಾಜ್ಯಗಳನ್ನು ಗೆದ್ದು ಸೋತು. ಸ್ಥಿರವಾಗಿ ರಾಜ ಗದ್ದುಗೆಯನ್ನೇರಿ ರಾಜ್ಯಭಾರ ಮಾಡಲು ಉಪಕ್ರಮಿಸಿದ್ದು ೧೧೩೨ರಲ್ಲಿ ಎಂದು ಭಾವಿಸಬಹುದಾದರೆ ಅದಕ್ಕೆ ಕೇವಲ ೮-೧೦ ವರ್ಷಗಳ ಹಿಂದೆ ಇನ್ನೂ ಬಾಲ್ಯಾವಸ್ಥೆಯಲ್ಲಿ ಅಸ್ಥಿರವಾಗಿದ್ದ ಈತನ ರಾಜ್ಯದ ಮೇಲೆ ತ್ರಿಭುವನ ಮಲ್ಲನು ಧಾಳಿಯಿಟ್ಟು ಸೋಲಿಸಿರಬಹುದೆಂದು ಊಹಿಸಲು ಸಾಕಷ್ಟು ಸಮರ್ಥನೆ ದೊರೆಯುತ್ತದೆ. ಆ ಕಾಲದಲ್ಲಿ ಬಂಗಾಳ ಒರಿಸ್ಸಾಗಳ ಪ್ರಾದೇಶಿಕ ಗಡಿಗಳು ಯಾವುವೂ ಇರಲಿಲ್ಲವೆಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

೧೩೩೪ರಲ್ಲಿ ಮುಸಲ್ಮಾನರ ಧಾಳಿಯಿಂದ ನಾಶವಾದ ಸಂತತಿ ಮತ್ತೆ ತಲೆ ಎತ್ತಲಿಲ್ಲ. "ಗೌಡ ಬಂಗಾಳಿ" ಯೆಂಬ ಜನರು ಈಗಲೂ ಬಂಗಾಳದಲ್ಲಿ ಇರುವುದಾಗಿ ತಿಳಿದು ಬರುತ್ತದೆ.

"ಗೌಡ ಸಾರಸ್ವತ"ರು ಎಂಬುದಾಗಿ ಕೊಂಕಣಿ ಜನರು ಹೇಳಿಕೊಳ್ಳುತ್ತಾರೆ. ಇವರು ಕೊಂಕಣ ಪ್ರಾಂತದವರು. ಇಲ್ಲಿ "ಗೌಡ" ಎಂಬುದರ ಪ್ರಾಮುಖ್ಯತೆ ಯೇನೆಂಬುದು ತಿಳಿಯದು.

## ಗೌಡ

"ಗೌಡ" ಎಂದರೆ ಯಜಮಾನ ಎಂದು ಅರ್ಥವಾಗುತ್ತದೆ. ಪ್ರಾಚೀನ ಗ್ರಂಥಗಳಲ್ಲಿಯೂ, ಶಾಸನಗಳಲ್ಲಿಯೂ, ಗಾವುಂಡ, ಗವುಂಡ, ಗೌಡಿ, ಗವುಂಡಿ, ಗವುಂಡರ್ ಎಂಬ ಪದಗಳನ್ನು ನೋಡಲು ಹೇರಳವಾಗಿ ಸಿಕ್ಕುತ್ತವೆ.

ಕಡೂರು ತಾಲ್ಲೂಕು ಯಗಟಿ ಹೋಬಳಿ ಮರುವಂಜಿ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಬಳಿ ನೆಟ್ಟಕಲ್ಲು :

ಅನ್ತುನೆಗಲ್ದ ಬಮ್ಮಗಾವುಂಡಂಗಂ ಆತನ ಕುಲವಧು ವಿಚವೆ ಗಾವುಂಡಿಂಗಂ ಪುಟ್ಟಿದರು ಸುಪುತ್ರ ಕುಲದೀಪಕರು....ಸ್ವಸ್ತಿ ಸಮಸ್ತ ಗುಣ । ಸಂಪನ್ನಂ ನುಡಿದು ಮತ್ತೆನ್ನಂ ಗೋತ್ರಪವಿತ್ರಂ ಪರನಾರೀಪುತ್ರ ಕುಲದೇವರ ಶ್ರೀಪಾದ ಪಂಕಜ ಭ್ರಮರನಪ್ಪ ಸೋಮ ಗೌವುಂಡಂ ನಾಗವ್ವೆ ಗೌಡಿಗಂ ಪುಟ್ಟಿದ ಪುತ್ರರು ಮಲ್ಲಗೌಡ ಬಸವಗೌಡ ..... (ಶಕವರುಷದ ೧೧೪೨ನೆಯ ವಿಕ್ರಮ ಸಂವತ್ಸರದ........)

ಗೌಡಾಳ್ವಿಕೆಯು ಚೇರರ ಕಾಲದಲ್ಲಿಯೇ ಪ್ರಾರಂಭವಾಗಿ ಗಂಗರಸರ ಕಾಲಕ್ಕೆ ದಕ್ಷಿಣ ಮೈಸೂರಾದ್ಯಂತ ವಿಸ್ತರಿಸಿದಂತೆ ಕಾಣುತ್ತದೆ. ಚೇರಪತಿಗಳು ಆದಿಯಲ್ಲಿ ಕೇರಳ ತಮಿಳುನಾಡುಗಳಲ್ಲಿ ರಾಜ್ಯವಿಸ್ತರಣೆ ಮಾಡುತ್ತಾ ಹೋದಂತೆ ಗೌಡಾಳ್ವಿಕೆಯೂ ಬೇರೂರಿತು. ಇದರಿಂದ ಈಗಲೂ ಆ ಭಾಗದಲ್ಲಿ ವೆಳ್ಳಾಲಗೌಂಡರ್ ಬೆಳ್ಳಿಯ ಗೌಂಡರ್‌ಗಳೆಂದು ಇದ್ದಾರೆ. ಇವರ ಮನೆಮಾತು ಮಲೆಯಾಳ ತಮಿಳು. ಕೊಯಮತ್ತೂರು, ಸತ್ಯಮಂಗಲ, ಪಾಲಘಾಟ್ ಕಡೆಯೂ ಗೌಡರ್, ಗೌಂಡರ್‌ಗಳು ಇದ್ದಾರೆ. ಇವರ ಮನೆಮಾತು ಕನ್ನಡ. ಮನೆಯಿಂದ ಹೊರಗೆ ಬಂದಾಗ ಶುದ್ಧ ತಮಿಳರೇ. ಈ ಎಲ್ಲರೂ ಒಕ್ಕಲಿಗರೇ ಆಗಿರುತ್ತಾರೆ. ಇವರ ಮನೆ ದೇವರೂ ಶ್ರೀ ಕಾಲಭೈರವ.

ಇದರಿಂದ 'ಗೌಡ' ಶಬ್ದದ ಪ್ರಾಚೀನತೆಯನ್ನು ನಿರ್ಣಾಯಕವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ, ರಾಜ್ಯದ ಆಡಳಿತಾಂಗದ ಒಂದು ಹುದ್ದೆಯ ಹೆಸರನ್ನು ಸೂಚಿಸುತ್ತದೆ. ಯುದ್ಧ ವ್ಯವಸಾಯದಲ್ಲಿ ನುರಿತ ಒಂದು ಜನಾಂಗ ರಾಜ್ಯ ಸ್ಥಾಪನೆಯನಂತರ ವ್ಯವಸ್ಥಿತ ಹಾಗೂ ಸುಭದ್ರ ಆಡಳಿತಕ್ಕಾಗಿ ತನ್ನವರನ್ನೇ ಮುಖ್ಯ ಸ್ಥಾನಗಳಿಗೆ

* Epigraphia Carnatica Vol. VI P. 24 By B. Viewis Rice C. I. E.

ನೇಮಿಸಿಕೊಳ್ಳುವುದು ಪೂರ್ವದ ರಾಜನೀತಿಯಾಗಿದ್ದಿತು. ಹೊಸ ಹೊಸ ಪ್ರಾಂತಗಳನ್ನು ಗೆದ್ದಾಗ ಸ್ಥಳದ ಪ್ರಜೆಗಳಲ್ಲಿ ವಿಶ್ವಾಸವಿರುತ್ತಿರಲಿಲ್ಲ. ಆದ್ದರಿಂದ ಚೇರರು, ಗಂಗರು ತಮ್ಮ ಜನರಿಗೆ ಗೌಡಿಕೆ ಕೊಟ್ಟು ಆ ಮೂಲಕ ಗ್ರಾಮಾಂತರದಲ್ಲಿ ಶಾಂತಿ ಸುವ್ಯವಸ್ಥೆಗಳು ಶಾಶ್ವತವಾಗಿ ನೆಲಸುವಂತೆ ಮಾಡುತ್ತಿದ್ದರು. ಆತನೇ ಊರ ಮುಖ್ಯಾಧಿಕಾರಿ, ನ್ಯಾಯಾಧೀಶ. ಗೌಡನನ್ನು ಸಾಮಾನ್ಯವಾಗಿ ರಾಜಪ್ರತಿನಿಧಿಗಳು ನೇಮಕ ಮಾಡುತ್ತಿದ್ದರು.

"The title of Heggade seems to have been same lines borne by the Provincial Governors.

"The chief men of Nads or rural circles were the the Gamunda, a Word which, after becoming Gaunda, now appears as Gaunda.... Every Indian village is and appears always to have been, in fact, a separate community or republic, the Gauda or Patel is the Judge and magistrate."*

ಈ ಜನಾಂಗದ ಬಹುಪಾಲು ಜನರಿಗೆ ಪೂರ್ವ ಕಾಲದ ಅರಸರುಗಳಿಂದ ಬಂದ ಉಂಬಳಿಗಳೂ ಇವೆ. ರಾಜಯೋಗ್ಯವಾದ ಪಲ್ಲಕ್ಕಿ, ಛತ್ರಿ ಚಾಮರಗಳೂ ಬಿರುದುಬಾವಲಿಗಳೂ ಇವೆ.

"ಗೌಡ" ಜನಾಂಗದ ಆಚಾರ ವಿಚಾರಗಳು ಊಟ ಉಪಚಾರಗಳ ಪರಿವರ್ತನೆ ಮುಂತಾದುವುಗಳಲ್ಲಿ ಕೆಲವು ಅಂಶಗಳು ಗಮನಾರ್ಹವಾಗಿವೆ.

The Kapalikas worshipped Bhirava....feasted on flesh and wine, worshipped women as the embodiment of Adishakti and at the same time recognised equality of all classes of people. The Tantric Shiva Worship and Chandika worship seem to have originated in the South among the Andhras and the Dravidians who were always spoken as the Chief Priests in the rites. Shivism in Gangawadı, however was qualified monism, which abbored the bloody sacrifices and revolting Practices of the Kapalikas. It regarded Vedas and Agamas as its scriptures, the former being intended for the twice born and the latter for all. Lakulisa Pasupatas or Kalamukhas exercised considerable infiuence in Gangawadi in the 9th, 10th and the following centuries."‡ ಕಾಪಾಲಿಗಳು ಕಾಲಭೈರವನ ಔಪಾಸಕರಾಗಿದ್ದಾರೆ. ಅವರು ಮದ್ಯಮಾಂಸಗಳನ್ನು ಸೇವಿಸುವವರು. ಇದರಿಂದಲೇ ದ್ರಾವಿಡನಾಡು, ಆಂಧ್ರ, ಗಂಗವಾಡಿಯಲ್ಲಿ ಶಿವ ಆದಿಶಕ್ತಿ, ಚಂಡಿಕಾಪೂಜೆಗೆ ಪ್ರಾಶಸ್ತ್ಯ ಹೆಚ್ಚಿದುದು. ಮತ್ತು ಪ್ರಾಣಿಬಲಿಯ ಪೂಜೆ ಹೆಚ್ಚಾದುದು. ೯-೧೦ನೇ ಶತಮಾನದಲ್ಲಿ ಕಾಳಮುಖಿಗಳ ಪ್ರಭಾವ ಗಂಗವಾಡಿಯಲ್ಲಿ ಅತಿ ಹೆಚ್ಚಿನ ಮಟ್ಟದಲ್ಲಿತ್ತು. ಇವರ ಜೊತೆಗೂಡಿಯೇ ಪುರೋಹಿತವರ್ಗದಿಂದ ಮತ್ತೆ ಯಜ್ಞಯಾಗಾದಿಗಳೂ ಉತ್ತೇಜನ ಪಡೆದವು. ಮಾಂಸಾಹಾರವು ಸರ್ವಸಾಮಾನ್ಯವಾದ ಊಟದ ಪದಾರ್ಥವಾಯಿತು. ರಾಜಾಧಿರಾಜರೂ ಕೂಡ ತಮ್ಮ ಅರಮನೆಯಲ್ಲಿ ಮಾಂಸಾಹಾರವನ್ನು ಧಾರಾಳವಾಗಿ ಬಳಸುತ್ತಿ

* Mysore Gezetteer, P. 436 : Administration

§ Gangas of Talkad PP. I89

ದ್ದರು. ಅರಮನೆಯಲ್ಲಿ ರುಚಿರುಚಿಯಾದ ಮಾಂಸದ ಭಕ್ಷಣೆಗಳನ್ನು ಮಾಡುವವನಿಗೆ "ಮಾಂಸಪಾಕ ವಿಶಾರದ" ನೆಂಬ ಬಿರುದೂ ದೊರೆಯುತ್ತಿತ್ತು.

"A Class of Brahmins are described as well versed in the science of sacrifices [yagha vidya] devote to the study of Shadangas and performance of the six duties and as incessant drinkers of the soma Juice [avichchina Soma Pitabhyam] with the decline of Jainism in the Country and the establishment of Hoysala sovereignty, Vaishnavite Persuation and the revival of rituals and sacrifices, animal food seems to have been rivived and indulged in by the kings and the nobility too. Culminary experts [Mamsa Paka Visharada] who could prepare varieties of flesh were employed in the Palace."*

"ಯಥಾರಾಜಾ ತಥಾಪ್ರಜಾ" ಇನ್ನು ಸಾಮಾನ್ಯ ಜನರ ಪಾಡೇನು. ಜೈನಧರ್ಮದ ಅವನತಿಯಿಂದ, ಕಾಪಾಲಿ-ಕಾಳಮುಖಿ ಮುಂತಾದ ಮತ ಪ್ರಚಾರಕರ ಪ್ರಭಾವದಿಂದ, ರಾಜಾಧಿರಾಜರ ಶ್ರೀಮಂತರ ಆಚರಣೆಯಿಂದ ಗೌಡಸಮಾಜವ ಒಕ್ಕಲಿಗ ಜನಾಂಗದವರೂ ಮದ್ಯ ಮಾಂಸಗಳನ್ನು ಸೇವಿಸತೊಡಗಿದರೆಂದರೆ ಆಶ್ಚರ್ಯ ವಿಲ್ಲ.

## ಪೌರಾಣಿಕ ಹಿನ್ನೆಲೆ

ತಾ|| ೧೭-೧೦-೧೯೧೨ನೇ ತಾರೀಖಿನಲ್ಲಿ ಮಂಗಳೂರು ಕದ್ರಿಮಠದ ಗುರುಗಳು ಶ್ರೀ ಶ್ರೀ ಟೀಲನಾಥಜೀ ಸ್ವಾಮಿಗಳು ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೋಕು ಮಡ್ಡೀಕೆರೆ ಗ್ರಾಮದ ದಿ|| ಈರೇಗೌಡರಿಗೆ ಬರೆದಿರುವ ಪತ್ರದಿಂದ ಆಯ್ದುದ್ದು :

ಸ್ಕಾಂದಪುರಾಣ-ಸ್ಯಹ್ಯಾದ್ರಿ ಖಂಡ-ಮುಪ್ಪತ್ತೆರಡನೆ ಅಧ್ಯಾಯ ಸೋಮವಂಶದ ಉತ್ಪತ್ತಿ ವರ್ಣಿಸುತ್ತದೆ, ಕ್ಷತ್ರಿಯರ ಉತ್ಪತ್ತಿ ೩೦ರಿಂದ ೩೩ನೇ ಅಧ್ಯಾಯದವರೆಗೆ ವಿವರವಿದೆ. ಕೊಲಂಬಾದೇವಿಯ ಭಕ್ತರಾಗಿ ಇರತಕ್ಕ ಪ್ರಿಯ ಋಷಿಗೋತ್ರದಲ್ಲಿ ಹುಟ್ಟಿದಂತ ಪ್ರಥಮ ಪುತ್ರನು ಜಗನು ಎಂಬುವನು.

| ತೃತೀಯ ಪುತ್ರ ಸೇಲರಾಜನು | ಈತನ ಪುತ್ರ |
|---|---|
| ಗೌಡರಾಜ | ,, |
| ಗೋಚರ | ,, |
| ಅಮತಪ್ರಿಯ | ,, |
| ಶಿಖಂಡಿ | ,, |
| ಕರ್ಕಶ | ,, |
| ಶುಕ | ,, |
| ಚಾರಣ | ,, |
| ಚಂಡ | ,, |

ಹೀಗೆ ಒಕ್ಕಲಿಗಗೌಡರುಗಳು ಕ್ಷತ್ರಿಯಕುಲದ ಸೋಮವಂಶದಲ್ಲಿ ಜನಿಸಿದ್ದಾರೆ. ಇವರ ಮೂಲಪುರುಷ ಗೌಡರಾಜ ಎಂದು ಬರೆದಿರುತ್ತಾರೆ.

ಈ ಪತ್ರದ ಅಸಲು ಪ್ರತಿ ಈರೇಗೌಡರ ಮಗ ಬಾಸೇಗೌಡರ ಬಳಿ ಇದೆ. ಮಠದ ಮುದ್ರೆ ಸ್ವಾಮಿಗಳ ಹಿಂದೀ ಲಿಪಿಯ ದಸ್ಕತ್ತು ಇದೆ.

## ಉಪಸಂಹಾರ

ಆರ್ಯರ ಆಗಮನಕ್ಕಿಂತ ಹಿಂದೆ ಅತಿ ಪ್ರಾಚೀನ ಭಾರತದ ಸಂಸ್ಕೃತಿಯ ನಿಲುವು ಏನೆಂಬುದು ಸಂಶೋಧಕರ ದೃಷ್ಟಿಯಲ್ಲಿ ಇನ್ನೂ ಸಮಸ್ಯೆಯಾಗಿಯೇ ಉಳಿದೆ.

*Gangas of Talkad. PP. 189

ಅನಾರ್ಯರು ಸುಸಂಸ್ಕೃತರಾಗಿದ್ದರು ಎಂಬುದು ಹರಪ್ಪ-ಮೊಹಂಜೋದಾರೋ ಮುಂತಾದ ಕಡೆ ಇತ್ತೀಚಿನ ಅಗೆತದಿಂದ ದೊರೆತ ಕಲಾತ್ಮಕವಾದ ವಸ್ತುಗಳಿಂದಲೂ, ಇವರ ಪಟ್ಟಣಗಳಿಂದಲೂ ಸ್ಥಿರಪಟ್ಟಿದೆ. ಮೊಹಂಜೋದಾರೋದಲ್ಲಿ ದೊರೆತಿರುವ ಒಂದು ಕೆತ್ತನೆಯಲ್ಲಿ ವೃಷಭನ ಕೊಂಬುಗಳೂ ತಲೆಯಲ್ಲಿ ಧರಿಸಿರುವ ದೇವತಾ ವಿಗ್ರಹವೂ ದೊರೆತಿವೆ. ಅದರ ಎಡಬಲಗಳಲ್ಲಿ ವೃಷಭ-ವ್ಯಾಘ್ರ ಮುಂತಾದ ಪ್ರಾಣಿಗಳ ಚಿಹ್ನೆ ಇರುವುದರಿಂದ ಇದು "ಪಶುಪತಿ" ಅಥವಾ ಶಿವನ ವಿಗ್ರಹವೆಂದು ಪಣಿತರು ಭಾವಿಸಿರುತ್ತಾರೆ ಕಾಶ್ಮೀರದ ದುರ್ಗಮ ಪರ್ವತ ಪ್ರಾಂತ್ಯದಲ್ಲಿನ "ಅಮರನಾಥ್" ಗುಹೆಯಲ್ಲಿ ಜಗತ್ ಸೃಷ್ಟಿಯೊಂದಿಗೆ, ಕೇವಲ ಹಿಮದಿಂದಲೇ ಉದ್ಭವವಾಗುತ್ತಿರುವ ಶಿವಲಿಂಗವು ಆಧುನಿಕ ವೈಜ್ಞಾನಿಕರಿಗೆ ಒಂದು ಸವಾಲಿನಂತಿದೆ. ಇದರಿಂದ ಭಾರತೀಯ ಸಂಸ್ಕೃತಿಯ ಉಗಮ ಹಾಗೂ ಶಿವಾರಾಧನೆಯ ಪ್ರಾಚೀನತೆ ಹತ್ತಾರು ವರ್ಷಗಳಷ್ಟು ಹಿಂದಿನದಾಗುತ್ತದೆ.

ಈ ಪುರಾತನ ಸಂಸ್ಕೃತಿ ಆರ್ಯರ ಸತತ ಧಾಳಿಯಿಂದಲೂ ನಾಶವಾಗಲಿಲ್ಲ. ಪ್ರತಿಯಾಗಿ ಹರಿ-ಹರರಲ್ಲಿ ಭೇದವನ್ನೆಣಿಸದಂತೆ ಸಮಾನ ಸ್ಥಾನಮಾನವನ್ನಿತ್ತು ತಮ್ಮ ವೇದವೇದಾಂಗಗಳ ವಿನಿಮಯಮಾಡಿಕೊಂಡರು. ಆದರೂ ಅವಧೂತಯೋಗಿಗಳು ಅತಿ ಪ್ರಾಚೀನ ಭಾರತದ ತಮ್ಮ ಸಂಸ್ಕೃತಿಯನ್ನು ಅದರ ಮೂಲಸ್ವರೂಪದಲ್ಲಿ ಉಳಿಸಿಕೊಂಡು ಬರಲು ಅಪಾರ ತ್ಯಾಗಮಾಡಿದ್ದಾರೆ.

ಚೇರರು ಇತರ ಅನಾರ್ಯರಾದ ದಾಸ-ದಸ್ಯು-ಪುಡ್ರ-ಕಿರಾತ ಮುಂತಾದ ವೈದೀಕವಲ್ಲದ ಭಿನ್ನ ಆಚಾರ ಆರಾಧನೆಗಳುಳ್ಳ ಜನರಂತೆಯೇ ಪ್ರತ್ಯೇಕ ಜನಾಂಗವಾಗಿದ್ದು, ಅವಧೂತ ಯೋಗಿಗಳ ಶಿಷ್ಯ ವರ್ಗಕ್ಕೆ ಸೇರಿದವರಾಗಿದ್ದರು. ಇವರು ತಮ್ಮ ಧರ್ಮದ ಉಳಿವಿಗಾಗಿ ಆರ್ಯರೊಡನೆ ಸತತ ಹೋರಾಡುತ್ತ ಹಿಮ್ಮೆಟ್ಟಿ, ದಕ್ಷಿಣದ ಕಡೆ ಧಾಳಿ ಇಟ್ಟರು. ಇವರ ಗುರು ಪುರೋಹಿತರಾದ ಶೈವಾಗಮದ ಆಚಾರ್ಯರು ಹಿಮಾಲಯದ ಪವಿತ್ರ ಕ್ಷೇತ್ರಗಳಲ್ಲಿ ಆಶ್ರಯಪಡೆದರು.

ಇತ್ತ ಚೇರರು ರಾಜ್ಯಸ್ಥಾಪನೆಯಲ್ಲಿ ಜೈನರ ಪ್ರಭಾವಕ್ಕೆ ಸಿಲುಕಿ ಜೈನರಾದರು. ಅಖಂಡ ಭಾರತದಲ್ಲಿಯೇ ಬೌದ್ಧ ಜೈನ ಧರ್ಮಗಳ ಪ್ರಭಾವದಿಂದ ವೈದಿಕಧರ್ಮ ಅಳಿಯುತ್ತಿತ್ತು ಈ ಸಂದರ್ಭದಲ್ಲಿಯೇ ಅವಧೂತಯೋಗಿಗಳು ಮತ್ತೆ ಸಮಯಕಾದು ಚೋಳರ ಆಶ್ರಯವನ್ನು ಪಡೆದು ದಕ್ಷಿಣಾಪಥದಲ್ಲಿ ಜೈನ-ಬೌದ್ಧ ಧರ್ಮಗಳನ್ನು ನಾಮಾವಶೇಷ ಮಾಡಿ ಪುನಃ ತಮ್ಮ ಪ್ರಾಚೀನ ಸಂಸ್ಕೃತಿಯನ್ನು ಬಿತ್ತಿ ಬೆಳೆಸಿದರು.

ಇದರಿಂದ ಚೇರರು ರಟ್ಟರಾಗಿ ಮತ್ತೆ ಗಂಗರಾಗಿ ತಮ್ಮ ಪೂರ್ವಾಶ್ರಮದ ಕಕ್ಷೆಯಲ್ಲಿ ಸೇರಿ ರೆಡ್ಡಿಯವರೂ, ಗಂಗಡಿಕಾರ ಒಕ್ಕಲಿಗರೂ ಆಗಿರುತ್ತಾರೆ. ಇವರು ಯಾವಾಗಲೂ ಆರ್ಯರ ವೈದೀಕ ಧರ್ಮದ ಚಾತುರ್ವರ್ಣಗಳಲ್ಲಿ ಸೇರಿದವರಾಗಿರಲಿಲ್ಲ.

## ನಾಮಧಾರಿ ಒಕ್ಕಲಿಗಗೌಡರು

ಒಕ್ಕಲಿಗ ಜನಾಂಗದಲ್ಲಿ ಶ್ರೀ ವೈಷ್ಣವ ಸಂಪ್ರದಾಯದ ನಾಮಧಾರಿ ಒಕ್ಕಲಿಗರು" ಎಂಬ ಒಳಪಂಗಡವಿರುವುದನ್ನು ನನ್ನ "ಒಕ್ಕಲಿಗರು"ಯೆಂಬ ಕಿರುಹೊತ್ತಿಗೆಯಲ್ಲಿ ಪ್ರಸ್ತಾಪಿಸಿರುತ್ತೇನೆ. ಇತ್ತೀಚಿನ ಪರಿಶೋಧನೆಯಿಂದ ಇವರ ಕುರಿತು ಹೊಸ ಹೊಸ ವಿಷಯಗಳನ್ನು ಬೆಳಕಿಗೆ ತರಲು ಸಾಧ್ಯವಾಯಿತು. ಅವರ ವಿವರಗಳನ್ನು ಕುಲಬಾಂಧವರ ವಿಮರ್ಶೆಗೆ, ವಿಸ್ತರಿಸಿದ್ದೇನೆ.

"ನಾಮಧಾರಿ ಒಕ್ಕಲಿಗರು" ಶಿವಮೊಗ್ಗ ಜಿಲ್ಲೆಯ ಮಲೆನಾಡು ತಾಲ್ಲೋಕುಗಳು, ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ, ಶೃಂಗೇರಿ, ಕೊಪ್ಪ ತಾಲ್ಲೋಕುಗಳು, ಮೂಡಿಗೆರೆಯ ಕಳಸ, ಬಾಳೂರು ಹೋಬಳಿಗಳು, ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು, ಸುಳ್ಯ ಬೆಳ್ತಂಗಡಿ ತಾಲ್ಲೋಕುಗಳು ಮತ್ತು ಕೊಡಗು ಮುಂತಾದ ಕಡೆ ಹೆಚ್ಚಾಗಿಯೂ, ಬಯಲು ಸೀಮೆಯ ನಾಗಮಂಗಲ, ಕುಣಿಗಲ್, ಬೇಲೂರು ಪಿರಿಯಾಪಟ್ಟಣ, ಕಡೂರು ತಾಲ್ಲೋಕುಗಳು ಮತ್ತು ಬೆಂಗಳೂರು ಸಿಟಿಯಲ್ಲಿ ವಿರಳವಾಗಿಯೂ ಕಂಡುಬರುತ್ತಾರೆ.

ಆಧ್ಯಾತ್ಮಿಕ ವಿಚಾರ ವೇದಿಕೆಯಲ್ಲಿ "ಶ್ರೀ ವೈಷ್ಣವ" ಹಾಗೂ "ವೀರಶೈವ"ರಲ್ಲಿ ನಡೆದ ವಾದವಿವಾದ ಒಕ್ಕಲಿಗ ಜನಾಂಗದಲ್ಲಿಯೂ ತಪ್ಪಿದಂತೆ ಕಾಣಲಿಲ್ಲ. ಒಕ್ಕಲಿಗರಲ್ಲಿ ಶೈವರು ನಾವು ಮೇಲು, ವೈಷ್ಣವರು ನಾವು ಮೇಲು, ಎಂಬ ವಾದ ದೂರದ ಕಿವಿ ಮಾತಾಗಿ ಇನ್ನೂ ಉಳಿದಿದೆ. ಈ ಜಿಜ್ಞಾಸೆಯ ಪರಮಾವಧಿಯಲ್ಲಿ ಅನೇಕ ಒಕ್ಕಲಿಗ ಗೌಡ ಸಮಾಜದ ಕುಟುಂಬಗಳು ಲಿಂಗಧಾರಣೆ ಮಾಡಿಕೊಂಡು, ಮದ್ಯ ಮಾಂಸಗಳನ್ನು ವರ್ಜಿಸಿ, ವೀರಶೈವರೇ ಆದರು. ಆದರೆ ಮಲೆನಾಡು ಪ್ರಾಂತ್ಯದಲ್ಲಿ ಶೈವ-ನಾಮಧಾರಿಯೆಂಬುದು ಆಚರಣೆಯಲ್ಲಿದೆಯೇ ವಿನಃ ಬಾಂಧವ್ಯ ಬೆಳೆಸುವಲ್ಲಿ ಯಾವ ತೊಡಕನ್ನೂ ಉಂಟುಮಾಡಿಲ್ಲ. ಅನೇಕ ತಲೆಮಾರುಗಳಿಂದ ಉಭಯಪಂಗಡಗಳಲ್ಲಿಯೂ ಬಾಂಧವ್ಯ ನಡೆಯುತ್ತಾ ಬಂದು ಈಗ ಶೈವ ವೈಷ್ಣವ ಯೆಂಬ ಭೇದ ಭಾವನೆಯೇ ಅಳಿಸಿ ಹೋಗಿದೆ.

ನಾಮಧಾರಿ ಒಕ್ಕಲಿಗರ ಪಂಗಡ ಅನಾದಿಯೆಂದು ನನಗೆ ಅನಿಸುತ್ತಿಲ್ಲ. ಇದುವರೆಗಿನ ದಾಖಲೆಗಳ ಸಾಧನದಿಂದ ಹೀಗೆ ಹೇಳಬಹುದು.

"ವಿಶಿಷ್ಟಾದ್ವೈತ ಶ್ರೀ ವೈಷ್ಣವ" ಮತ ಸ್ಥಾಪಕರಾದ ಶ್ರೀ ರಾಮಾನುಜಾಚಾರ್ಯರು. (12ನೆ ಶತಮಾನ) ಶೈವಧರ್ಮಕ್ಕೆ ಆಶ್ರಯದಾತರಾದ ಚೋಳ ರಾಜರ ಕಿರುಕುಳವನ್ನು ಸಹಿಸಲಾರದೆ ಮೈಸೂರು ದೇಶಕ್ಕೆ ಬಂದು ಹೊಯ್ಸಳರ ಆಶ್ರಯದಲ್ಲಿ ಮೇಲುಕೋಟೆಯಲ್ಲಿ ತಮ್ಮ ಆಶ್ರಮವನ್ನು ಸ್ಥಾಪಿಸಿ ಶ್ರೀವೈಷ್ಣವ ಪಂಥವನ್ನು ಸಾರಿದರು. ಇವರು ವಾದದಲ್ಲಿ ಜೈನಯತಿಗಳನ್ನು ಸೋಲಿಸಿದರು. ಇವರ ಉಪದೇಶದಿಂದ ಹೊಯ್ಸಳ ಚಕ್ರವರ್ತಿ ಬಿಟ್ಟಿದೇವನು ಮತಾಂತರ ಹೊಂದಿ ವಿಷ್ಣುವರ್ಧನನೆಂಬ ಹೆಸರನ್ನು ಇಟ್ಟುಕೊಂಡು ವೈಷ್ಣವನಾಗಿ ಬೇಲೂರಿನ ಶ್ರೀ ಚೆನ್ನಕೇಶವಸ್ವಾಮಿ ದೇವಾಲಯವನ್ನು ಕಟ್ಟಿಸಿದನು.

ಈ ಎರಡೂ ಕಾರಣಗಳಿಂದ ಮೇಲುಕೋಟೆ ಮತ್ತು ಬೇಲೂರುಗಳು ಶ್ರೀ ವೈಷ್ಣವ ಪಂಥದ ಪ್ರಸಾರ ಕೇಂದ್ರಗಳಾಗಿ ಶೈವ ಸಂಪ್ರದಾಯದ ಹಲವಾರು ಒಕ್ಕಲಿಗ ಕುಟುಂಬಗಳೂ ಮತಾಂತರ ಹೊಂದಿ ವೈಷ್ಣವರಾಗಿ "ನಾಮಧಾರಿ" ಒಕ್ಕಲಿಗರಾಗಿರುತ್ತಾರೆ.

"ನಾಮಧಾರಿ"ಯೆಂಬುವರು ಒಕ್ಕಲಿಗರಲ್ಲಿ ಮಾತ್ರವೇಯೆಂಬುದೇನಿಲ್ಲ. ಹರಿಜನರಿಂದ ಸವರ್ಣಿಗಳಾದ ನಾಮತಗಳಲ್ಲಿಯೂ "ನಾಮಧಾರಿ" ಮತ್ತು "ಶೈವರು"ಯೆಂಬ ಎರಡು ಪಂಗಡಗಳೂ ಕಂಡುಬರುತ್ತಿವೆ. ಅದನ್ನು ವಿವರಿಸುವ ಅಗತ್ಯವಿಲ್ಲ. ಶೈವರು ಹಣೆಗೆ ವಿಭೂತಿ ಧರಿಸುವಂತೆ ಇವರು ಮೂಗಿನ ನೇರಕ್ಕೆ ಹಣೆಯ ಮೇಲೆ ಕುಂಕುಮದ ನೆಟ್ಟನೆಯ ಗೀಟು ಹಾಕಿಕೊಳ್ಳುತ್ತಾರೆ. ಅದರಿಂದ ಇವರಿಗೆ ನಾಮಧಾರಿಯೆಂಬ ಹೆಸರು ಬಂದಿದೆ.

ಸಾಗರದಿಂದ ಪುತ್ತೂರು ಸುಳ್ಯ ಸಂಪಾಜೆವರೆಗಿನ ಪಶ್ಚಿಮ ಘಟ್ಟಗಳ ಪರ್ವತಶ್ರೇಣಿಯಲ್ಲಿರುವ ಒಕ್ಕಲಿಗ ಗೌಡ ನಾಮಧಾರಿಗಳ ಶಿಷ್ಟಾಚಾರ ಸಂಪ್ರದಾಯಗಳು ಬಹಳವಾಗಿವೆ. ಇವರಲ್ಲಿ ಒಂದು ಶಿಸ್ತಿನ ಸಂಘಟನೆಯನ್ನು ನೋಡಬಹುದು. ಕುಲದ ಆಚಾರ ವಿಚಾರಗಳೆಲ್ಲ "ಕಟ್ಟೆಮನೆ"ಯವರ ನಿರ್ದೇಶನಕ್ಕೆ ಒಳಪಟ್ಟಿವೆ. ಲಗ್ನ ಕಾರ್ಯ ಮುಂತಾದ ವಿಶೇಷ ಕಾರ್ಯಗಳೆಲ್ಲವೂ ಬ್ರಾಹ್ಮಣ ಪುರೋಹಿತರಿಂದಲೇ ನಡೆಸುತ್ತಾರೆಯಾದರೂ ಶುದ್ಧಿ, ಸಂಪ್ರೋಕ್ಷಣೆ, ಪುಣ್ಯಾರ್ಚನೆ, ಪಿಂಡಪ್ರದಾನ ಮುಂತಾದ ಕೆಲಸಗಳನ್ನೆಲ್ಲಾ "ಒಷ್ಟಮಂಪ್ಯ – ವೈಷ್ಣವೀಯ"ರುಗಳಿಂದಲೂ ಮಾಡಿಸುತ್ತಾರೆ.

ಇವರ ಮುಖ್ಯ ಹಬ್ಬಹರಿದಿನಗಳೆಂದರೆ, ಹರಿಸೇವೆ ಕೆಂಚರಾಯನ ಸೇವೆ, ಶ್ರಾವಣ ಮಾಸ - ಶ್ರೀರಾಮನವಮಿ - ಶ್ರೀ ಕೃಷ್ಣಾಷ್ಟಮಿಗಳೇ ಆದರೂ ಎಲ್ಲಾ ಹಿಂದೂ ಹಬ್ಬಗಳನ್ನೂ ಆಚರಿಸುತ್ತಾರೆ. ಶೈವರಲ್ಲಿ ಹಿರಿಯರ ಹಬ್ಬ ಆಶ್ವಯುಜ ಶುದ್ಧ ಪಿತೃಪಕ್ಷದಲ್ಲಿ ಬರುವಂತೆ ಇವರೂ ಅದೇ ದಿನಗಳಲ್ಲಿ ಆಚರಿಸುತ್ತಾರೆ. ಆದರೆ ಬಯಲು ಸೀಮೆಯ ನಾಮಧಾರಿಗಳು ಶ್ರಾವಣ ಮಾಸದಲ್ಲಿ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ ಮತ್ತು ಆದಿ ನಪಿತೃಗಳ ಪ್ರೀತ್ಯರ್ಥವಾಗಿ ಮಾಂಸಾಹಾರವನ್ನು ಧಾರಾಳವಾಗಿ ಉಪಯೋಗಿಸುತ್ತಾರೆ. ಮಲೆನಾಡಿನ

ನಾಮಧಾರಿಗಳ ಮನೆಯಲ್ಲಿ ಶ್ರಾವಣ ಮಾಸದಲ್ಲಿ ಮದ್ಯ ಮಾಂಸಗಳು ಮನೆಯ ಒಳಗೇ ಪ್ರವೇಶವಿಲ್ಲ.

ಇವರು ಹರಿಸೇವೆಯನ್ನು ಬಹಳ ವೈಭವದಿಂದ ಆಚರಿಸುತ್ತಾರೆ. ಮೂರು ದಿನಗಳವರೆಗೆ ಉಪವಾಸ ವ್ರತಾಚರಣೆ, ತುಳಸೀಕಟ್ಟೆಯನ್ನು ಚಪ್ಪರ ತಳಿರು ತೋರಣಗಳಿಂದ ಅಲಂಕರಿಸಿ, ರಾತ್ರಿ ಇಡೀ ಗೋವಿಂದ ನಾಮ ಸಂಕೀರ್ತನೆ, ಭಜನೆ, ಹರಿಕಥೆ, ಯಕ್ಷಗಾನ, ಬಯಲಾಟ, ಕೋಲಾಟ, ಅನ್ನ ಸಂತರ್ಪಣೆ ಮುಂತಾಗಿ ಧಾರಾಳ ಸೇವಾಕಾರ್ಯ ನಡೆಸುತ್ತಾರೆ. ಸಾಮಾನ್ಯವಾಗಿ ಹರಿಸೇವೆಯನ್ನು ಮನೆತನದಲ್ಲಿ ನಡೆದು ಬಂದಂತೆ ಒಂದು ಊರಿನಲ್ಲಿ ಒಬ್ಬರು ಅಥವಾ ಕಟ್ಟೇಮನೆಯವರು ನಡೆಸುತ್ತಾರೆ. ಅವರಿಗೆ ಗ್ರಾಮಸ್ಥರೂ ಮತ್ತು ಬಂಧು ಬಳಗದವರೂ ಬಂದು ಸಹಕರಿಸುತ್ತಾರೆ.

ಹರಿಸೇವೆಯು ಕೆಂಚರಾಯನ ಸೇವೆಯಲ್ಲಿ ಮುಕ್ತಾಯವಾಗುತ್ತದೆ. ಸೇವಾವಿವರ ಹೀಗಿದೆ.*

ಹರಿಸೇವೆ ಮುಗಿದ ವಾರನೇ ದಿನ ಮನೆಯಿಂದ ಸ್ವಲ್ಪ ದೂರದಲ್ಲಿ ಅದಕ್ಕಾಗಿ ಮೀಸಲಾಗಿರುವ ಸ್ಥಳದಲ್ಲಿ ನೆಲ ಸ್ವಚ್ಛ ಮಾಡಿ ಸಾರಿಸಿ ನಾಲ್ಕು ಕಂಭಗಳ ಚಪ್ಪರ ಹಾಕಿ ತಳಿರು ತೋರಣ, ಹೂಗಳಿಂದ ಅಲಂಕರಿಸುವುದು. ಚಪ್ಪರದ ಮಧ್ಯೆ ದೊಡ್ಡ ಕುಡಿ ಬಾಳೆಯೆಲೆ ಇಟ್ಟು ಅದರಲ್ಲಿ ಭತ್ತ ರಾಶಿ ಹಾಕಿ, ಅದರ ಮೇಲೆ ತ್ರಿಶೂಲವನ್ನು ನಿಲ್ಲಿಸುವುದು. ಧಾನ್ಯರಾಶಿ ಪಕ್ಕದಲ್ಲಿ ಒಂದು ಖಡ್ಗವನ್ನು ಇಡುವುದು. ಧಾನ್ಯರಾಶಿಯಮುರುಗಡೆ ನೀರು ತುಂಬಿದ ಕಳಸ ಸ್ಥಾಪನೆ ಮಾಡಿ ಅದರಲ್ಲಿಎರಡು ಸೆಕ್ಕಿಗಿಡದ ಕೊನೆ ಇಡುವುದು ಕಳಸ – ತ್ರಿಶೂಲ – ಖಡ್ಗಗಳಿಗೆ ವಿಭೂತಿ – ಗಂಧ – ಅರಿಶಿನ ಕುಂಕುಮ ಹಚ್ಚಿ ಹೂಗಳಿಂದ ಅಲಂಕರಿಸುವುದು. ಕಳಸದ ಪಕ್ಕದಲ್ಲಿ ಕಂಭದೀಪ ಇಟ್ಟು ಹತ್ತಿಸುವುದು. ಅಗಲವಾದ ಬಾಳೇಪಟ್ಟೆ ತಂದು ಒಂದು ಮೊಳ ಉದ್ದದ ಸಮ ಅಳತೆಗೆ ಮೂರು ತುಂಡುಗಳನ್ನು ಕತ್ತರಿಸಿ, ಅವನ್ನು ತ್ರಿಕೋಣಾಕಾರವಾಗಿ ನಾರಿನಿಂದ ಕಟ್ಟಿ ಕಳಸದ ಮುಂದೆ ಇಡುವುದು. ಇದರಲ್ಲಿ ಇರುವ ಹಸೀ ಹಿಟ್ಟಿನ ಎಂಟು - ಹತ್ತು ಕಡುಬುಗಳನ್ನು ಇಡುವುದು.

ಒಂದು ಕುರಿ ಅಥವಾ ಕೋಳಿಯನ್ನು ತಂದು ಚಪ್ಪರದ ಮುಂದೆ ನಿಲ್ಲಿಸಿ ಕಳಸ - ತ್ರಿಶೂಲಗಳಿಗೆ ಹಣ್ಣು ಕಾಯಿ - ಧೂಪಾರತಿ ಮಾಡಿ ಪೂಜಿಸಿ, ಎದುರಿಗೆ ನಿಲ್ಲಿಸಿರುವ ಪ್ರಾಣಿಯ ಕುತ್ತಿಗೆ ಕೊಯ್ದು, ಬಾಳೇಪಟ್ಟೆಯಲ್ಲಿರುವ ಕಡುಬುಗಳ ಮೇಲೆ ಸ್ವಲ್ಪ ನೆತ್ತರು ಬೀಳಿಸುವುದು. ಕೊಯ್ದ ಪ್ರಾಣಿಯನ್ನು ಈಗ ಅಡಿಗೆ ಮನೆಗೆ ಸಾಗಿಸುವುದು.

ಆ ದಿನ ಹಬ್ಬವಾಚರಿಸಲು ಅದುಗೆ ಮಾಡಿರುವ ಎಲ್ಲಾ ಮೀಸಲು* ಪದಾರ್ಥಗಳನ್ನೂ ಸ್ವಲ್ಪ ಸ್ವಲ್ಪ ತಂದು ಕಳಸದ ಮುಂದೆ ಎಲೆ ಹಾಕಿ ಬಡಿಸಿ ಪೂಜೆ ಮಾಡಿ ಭೈರವನಿಗೆ ನೈವೇದ್ಯ ಅರ್ಪಿಸಿದನಂತರ, ಎಲ್ಲರೂ ಮಾತನಾಡದೆ ಮೌನವಾಗಿ ಸ್ವಲ್ಪ ದೂರ ಹೋಗಿ ಹಿಮ್ಮುಖವಾಗಿ ನಿಲ್ಲುತ್ತಾರೆ. ಮತ್ತೆ ಬಂದು ಧೂಪಾರತಿ ಮಾಡಿ ಹಿರಿಯರಾದ ಒಬ್ಬಿಬ್ಬರು ಪ್ರಾರ್ಥನೆ ಮಾಡುತ್ತಾರೆ.

"ಭೈರವೇಶ್ವರಾ ಈಗ ನಡೆಸಿದ ಹರಿಸೇವೆಯಲ್ಲಿ ಏನಾದರೂ ಲೋಪ ದೋಷಗಳಾಗಿದ್ದಲ್ಲಿ, ನಿನಗೆ ಉಪಚಾರವಾಗದಿದ್ದಲ್ಲಿ, ನಮ್ಮನ್ನು ಕ್ಷಮಿಸಿ ನಾಡಿನ ಜನರಿಗೂ, ದನಕರುಗಳಿಗೂ - ಪೈರು ಪಚ್ಚೆಗಳಿಗೂ, ಏನೊಂದೂ ಉಪದ್ರ ಮಾಡದೆ ಕಾಪಾಡಿಕೊಂಡು ಬರುವುದು" ಇದು ಪ್ರಾರ್ಥನೆಯ ಸಾರಾಂಶ.

---

*1) ಕಳಸ ಪ್ರಾಂತ್ಯ ಮರಸಣಿಗೆ ಗ್ರಾಮದ ಕಾ। ಪ್ಲಾಂ। ಪಟೇಲ್ ಬಿ. ನಾಗಪ್ಪಗೌಡರಿಂದ ವಿವರ ಸಂಗ್ರಹಿಸಿದ್ದು.

2) ಪ್ರಳಯರುದ್ರನಾದ ಕಾಲಭೈರವನ ಮುಖ ಅಗ್ನಿಜ್ವಾಲೆಯಂತೆ ಕೆಂಪಗೆ ಪ್ರಜ್ವಲಿಸುವುದರಿಂದ ಕೆಂಪರಾಯ - ಕೆಂಚರಾಯ ಯೆಂಬ ಹೆಸರಿನಿಂದ ಪೂಜಿಸುತ್ತಾರೆ.

ಮೀಸಲು : ಹಬ್ಬದ ದಿನ ಮನೆ ಮಹಿಳೆಯರು ಯಾರಾದರೊಬ್ಬರು ಮೊದಲು ಸ್ನಾನ ಮಾಡಿ, ಮಡಿಯುಟ್ಟು, ಉಪವಾಸವಿದ್ದು ಪೂಜೆಗಾಗಿಯೇ ಪ್ರತ್ಯೇಕ ಒಲೆಯಲ್ಲಿ ತಯಾರಿಸಿದ ಅಡುಗೆ ಪದಾರ್ಥಗಳು.

ಇದರಿಂದ ನಾಮಧಾರಿಗಳು ಮೊದಲು ಕಾಲಭೈರವನ ಒಕ್ಕಲಾಗಿದ್ದು ಕ್ರಮೇಣ ವೈಷ್ಣವರಾದರೂ, ಪೂರ್ವಾಶ್ರಮದ ಕುಲದೈವದ ಮೇಲಿನ ಭಕ್ತಿಭಾವನೆಗಳು ಅಳಿಯುಲ್ಲಿಲ್ಲ. ಪ್ರತಿಯಾಗಿ ಹರಿಸೇವೆಯಿಂದ ಕುಪಿತನಾದ ಪ್ರಳಯರುದ್ರನು ಮತ್ತೆ ಲೋಕಕ್ಕೆ ಏನು ಕೇಡು ಮಾಡುವನೋ ಎಂಬ ಭಯದಿಂದ, ವರ್ಷದ ಆ ಒಂದು ದಿನದಲ್ಲಿ ಭೈರವನ ಪೂಜೆ ನಡೆಸುತ್ತಾ ಬಂದಿದ್ದಾರೆ.

ಪ್ರತಿಯೊಂದು ನಾಮಧಾರಿ ಕುಟುಂಬವೂ "ಶನಿವಾರ"ದ ಆಚರಣೆಯನ್ನು ನಿಯಮದಂತೆ ಕಟ್ಟುನಿಟ್ಟಾಗಿ ಆಚರಿಸುತ್ತಾರೆ ಮತ್ತು ಕುಲದೇವರಾದ ತಿರುಪತಿ ವೆಂಕಟರಮಣ ಸ್ವಾಮಿಯನ್ನು ಮನೆಯಲ್ಲಿಯೇ ಪ್ರತ್ಯೇಕವಾದ ದೇವರ ಕೋಣೆಯಲ್ಲಿ ಇಟ್ಟು ಪ್ರತಿ ದಿನವೂ ಪೂಜೆ ಮಾಡುತ್ತಾರೆ.

ಮಲೆನಾಡಿನ ಘಟ್ಟದ ಪ್ರಾಂತ್ಯದಲ್ಲಿ ಶ್ರೀ ವೈಷ್ಣವ ಪಂಥ ಇಷ್ಟು ಆಳವಾಗಿ ಬೇರೂರಲು ಕಾರಣವಾದರೂ ಏನುಯೆಂಬುದಾಗಿ ಅಭ್ಯಾಸಕ್ಕೆ ತೊಡಗಿದಾಗ ಈ ಕೆಲವು ಅಂಶಗಳು ಬೆಳಕಿಗೆ ಬಂದವು.

ನಾಥ್ ಪಂಥ್ - ಅವಧೂತಯೋಗಿಗಳಿಗೆ ಕಾಪಾಲಿ ಕಾಳಮುಖಿ - ಜೋಗಿ ಮುಂತಾದ ಶಿಷ್ಯವರ್ಗದವರು ಮತಪ್ರಚಾರಕ್ಕೆ ಪಣತೊಟ್ಟಿದ್ದಂತೆ ಶ್ರೀ ವೈಷ್ಣವ ಪಂಥದ ಪ್ರಚಾರಕ್ಕೂ ವೈಷ್ಣವ ಹೆಬ್ಬಾರರು, ಓಷ್ಟಮಯ್ಯಗಳು, ಹರಿದಾಸರು (ದೊಂಬಿದಾಸರು) ಮುಂತಾದವರು ಶಿಷ್ಯರಾಗಿದ್ದರು. ಇವರುಗಳಲ್ಲಿ ವೈಷ್ಣವ ಹೆಬ್ಬಾರರುಗಳು, ಹೊಯ್ಸಳ ರಾಜರ ಆಶ್ರಯದಿಂದ ಪ್ರಬಲರಾಗಿ ಮತ ಪ್ರಚಾರದಲ್ಲಿ ವಿಶೇಷ ಆಸಕ್ತಿ ಹೊಂದಿದವರಾಗಿದ್ದರು.

*ವೈಷ್ಣವ ಹೆಬ್ಬಾರರ ಪೂರ್ವೀಕರು, ಶ್ರೀರಂಗ ಮತ್ತು ಕಾಂಜೀವರಂ, ಕಡೆಯಿಂದ ವಲಸೆ ಬಂದು ಮೈಸೂರು ದೇಶದ ಕಡಬ (ತುಮಕೂರು ಜಿಲ್ಲೆ) 2ಗ್ರಾಮ (ಹಾಸನ ಜಿಲ್ಲೆ),3 ಶ್ರೀರಂಗಪಟ್ಟಣ, 4ಮೋಳೂರು (ಬೆಂಗಳೂರು ಜಿಲ್ಲೆ) ಮತ್ತು 5ಬೇಲೂರು, ಈ ಐದು ಕಡೆಗಳಲ್ಲಿ ನೆಲೆಸಿದರು. ಇದರಿಂದ ಇವರನ್ನು ಪಂಚಗ್ರಾಮಿಗಳೆಂದು ಕರೆದು ಶ್ರೀ ವೈಷ್ಣವರಲ್ಲಿ ಉಪಪಂಗಡವಾಗಿದ್ದಾರೆ. ಇವರೂ ಮತ್ತು ಇವರ ವಂಶೀಯರ ಪ್ರಚಾರದಿಂದ ಅನೇಕ ಶೈವಧರ್ಮದ ಕುಟುಂಬಗಳು ವೈಷ್ಣವ ಧರ್ಮಕ್ಕೆ ಮತಾಂತರ ಹೊಂದಿದರು.

ಈ ವಂಶದಲ್ಲಿ ಮೂವರು ಹೆಬ್ಬಾರರು, ಹೊಯ್ಸಳ ಚಕ್ರವರ್ತಿಗಳಿಂದ‡ ಗುತ್ತಿಗೆ ಪಡೆದು, ಪಶ್ಚಿಮ ಘಟ್ಟದ ಮಲೆ ಪ್ರಾಂತ್ಯವಾದ ಗಂಗಾಮೂಲ, ಕಳಸ, ನೆರಿಯಗಳನ್ನು ಆಳುತ್ತಿದ್ದರು§ ಕಳಸದ ಶಾಸನ ನಂ. 28 (1515ನೇ ಇಸ್ವಿ)

ಪಂದರೀ ಸೇನೆ ಬೋವರ ಮಕ್ಕಳು ಸೂರಪ್ಪ ಸೇನೆ ಬೋವರಿಗೆ ನೂಜಿನ ಗ್ರಾಮವನ್ನು ಕ್ರಯದಾನ ಬರೆದ ಶಾಸನ....ಶ್ರೀ ಕೃಷ್ಣದೇವರಾಯರು ವಿದ್ಯಾನಗರಿಯೊಳು ಸಿಂಹಾಸನಾರೂಢರಾಗಿ ರಾಜ್ಯವನ್ನಾಳುವ ಕಾಲದೊಳು ಕಳಸದ ಸಾವಿರಗ್ರಾಮ ಮೂವರು ಹೆಬ್ಬಾರರುಗಳು....ಹೊಸ ಕೇರಿಯ ವೀರಪ್ಪ ಹೆಬ್ಬಾರ್ರು, ಗುಳಿಕೇರಿಯ ಈಚಂಣ್ಣ ಹೆಬ್ಬಾರವರು, ಗಂಗೆಯ ದೇವರಸ ಹೆಬ್ಬಾರವರು....ಇದೇ ಶಾಸನದಲ್ಲಿ ಇವರ ಆಡಳಿತಕ್ಕೆ ಒಳಪಟ್ಟಿದ್ದ ನೂಜಿನ ಗ್ರಾಮದ ಬತುರ್ಗಡಿಗಳನ್ನು ಹೇಳಿದೆ....ನೂಜಿನ ಗ್ರಾಮವನು ನಿಮಗೆ ಕ್ರಯದಾನವಾಗಿ ಧಾರೆಯ ನೆರೆದು ಕೊಟ್ಟೆವು. ಆಗ್ರಾಮದ ಚತುಸ್ಸೀಮೆಯ

---

§ Gezetter P. 324.

* ಹೊಯ್ಸಳ ಚಕ್ರವರ್ತಿಗಳಿಂದಲೋ ಅಥವಾ ವಿಜಯನಗರದ ಚಕ್ರವರ್ತಿಗಳಿಂದಲೋ ಎಂಬುದು ಇನ್ನೂ ಸ್ಪಷ್ಟವಾಗಿಲ್ಲ.

§ Epigraphia carnataka Vol VI

ವಿವರ ...ಮೂಡಲು ಸಡೆ ಕಲ್ಲು ಹಳ್ಳದಿಂದಂ ಪಡುವಲು ತೆಂಕಲು ಸಂಪಾನಿಯ† ಸಂದಿಂಡ ಬಡಗಲು ಪಡುವಲು ಕೂಡಲಿಯ ಸಂದಿಂದಂ ಬಡಗಲು ಪಡುವಲು ಕೂಡಲಿಯ ಸಂದಿಂದಂ ಮೂಡಲು ಬಡಗಲು ನಿಡುವಿಗೆಯ ಹೊಳೆಯಿಂದ ತೆಂಕಲು....

**ಶಾಸನ** 62 (1524ನೆ ಇಸ್ವಿ)

....ಕಳಸನಾಡಿನ ಪಾರುಪತ್ಯಗಾರರಾಗಿ ಸಾವಿರ ಸೀಮೆಯ ಮುಖ್ಯಸ್ಥರಾದ ಮೂವರ ಸಮ್ಮುಖದಲ್ಲಿ....

ಈ ಶಾಸನಗಳ ಆಧಾರದಿಂದ ಮೂವರು ಹೆಬ್ಬಾರರುಗಳು ಮಲೆ ಪ್ರಾಂತ್ಯದಲ್ಲಿ ಅಧಿಕಾರ ನಡೆಸುತ್ತಿದ್ದರೆಂಬುದೂ, ಇವರ ಆಡಳಿತೆಗೆ ಒಳಪಟ್ಟಿದ್ದ ಮಲೆಪ್ರಾಂತ್ಯ ಶೃಂಗೇರಿ ಬಳಿ ಗಂಗಾಮೂಲದಿಂದ ಕಳಸ, ನಿಡಿಗಲ್, ಸುಳ್ಯ ಸಂಪಾಜೆಯವರೆಗೆ ವಿಸ್ತರಿಸಿತ್ತೆಂದೂ ವ್ಯಕ್ತಪಡುತ್ತದೆ. ಈ ವಂಶದ ಹೆಬ್ಬಾರರು ಈಗಲೂ, ಸೆರಿಯ, ಕಳಸ ಮತ್ತು ಗಂಗಾಮೂಲದಲ್ಲಿ ಇದ್ದಾರೆ.

ಈ ಶಾಸನಗಳು ಹುಟ್ಟುವ ಮೊದಲೇ ಈ ಮಲೆ ಪ್ರಾಂತ್ಯದಲ್ಲಿ ಒಕ್ಕಲಿಗಗೌಡ ಜನಾಂಗದವರು ವಾಸವಾಗಿದ್ದರು ಎಂಬುದಕ್ಕೆ ಕಳಸದ ಇನ್ನೊಂದು ಶಾಸನವನ್ನು ಉದಹರಿಸಬಹುದು.

**ಶಾಸನ** (1246ನೆ ಇಸ್ವಿ)

"ಕಾರ್ಕಳದಲ್ಲಿ ಜಕ್ಕಲ ಮಹಾದೇವಿಯು ರಾಜ್ಯ ಭಾರ ಮಾಡುತ್ತಿದ್ದಾಗ ಕಳಸದ ಕಳಸೇಶ್ವರ ಸ್ವಾಮಿಯ ಸೇವೆಗೆಂದು, ಮಿಗುದಂಡ ಕೋಟಿಗವುಂಡನು ಬಿಟ್ಟ ದತ್ತಿ....

ಇದರಿಂದ ವೈಷ್ಣವ ಹೆಬ್ಬಾರರ ಆಡಳಿತಕ್ಕೆ ಒಳಪಡುವ ಮುಂಚೆಯೇ "ಗೌಡ" ಜನಾಂಗದವರು ಈ ಮಲೆ ಪ್ರಾಂತ್ಯದಲ್ಲಿ ವಾಸವಾಗಿದ್ದರು, ಮತ್ತು ಸಂಪತ್ತಿಶಾಲಿಗಳಾಗಿಯೂ, ಸುಸಂಸ್ಕೃತರಾಗಿಯೂ ಇದ್ದರು ಯೆಂದು ನಿರ್ಧರಿಸಬಹುದು.

ದಕ್ಷಿಣ ಕೊಡಗಿನ ನಾಮಧಾರಿ ಗೌಡ ಸಮಾಜದವರು, ಕೊಡಗಿನ ಅರಸರ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ – ಸಂಪಾಜೆ ಕಡೆಯಿಂದ ವಲಸೆ ಬಂದವರುಯೆಂಬುದಾಗಿ ಕೊಡಗಿನ ಇತಿಹಾಸದಿಂದ ತಿಳಿದು ಬಂದಿದೆ.

† ಸಂಪಾನಿ = ಸಂಪಾಜೆ, ನಿಡುವಿಗೆಯ ಹೊಳೆ = ನಿಡಿಗಲ್ ಹೊಳೆ ಸೇತ್ರಾವತಿ.

## ಗ್ರಂಥಋಣ


1. ಮೈಸೂರು ಗೆಜೆಟಿಯರ್—ಮಿ|| ಲೂಯಿಸ್ ರೈಸ್
2. Gangas of Talkad – ಪ್ರೊ|| ಎಂ. ವಿ. ಕೃಷ್ಣರಾವ್
3. Early History of the Deccan —ಆರ್. ಜಿ. ಭಂಡಾರ್‌ಕರ್
4. ಕದರೀ ಮಂಜುನಾಥ ಮಹಾತ್ಮೆ —ಮಂಗಳೂರು ಕದ್ರಿ ಮಠ
5. ಆದಿಚುಂಚನಗಿರಿ
6. ಶಿವಗಂಗೆ
7. ಭಾರತೀಯ ಸಂಸ್ಕೃತಿಯ ಉಗಮ (ಲೇಖನ) —ಶ್ರೀ ಮಿರ್ಜಿ ಅಣ್ಣಾರಾಯರು
8. ಪ್ರವಾಸಿ ಕಂಡ ಇಂಡಿಯ —ಹೆಚ್. ಎಲ್. ನಾಗೇಗೌಡ

# ಗೌಡ ಸಂಸ್ಕೃತಿಯ ಅವಲೋಕನ

ಲೇಖಕರು : **ಶ್ರೀ ಪೇರಿಯನ ಪೂವಯ್ಯನವರು,** ಸಂಪಿಗೆ ಕಾಡು ಎಸ್ಟೇಟ್, ಚೆಟ್ಟಳ್ಳಿ

ಶ್ರೀಮಾನ್ ಪೇರಿಯನ ಪೂವಯ್ಯನವರು ಚೇರಳ ಮಂಗಲ ಗ್ರಾಮದಲ್ಲಿ ಹುಟ್ಟಿ ಮಡಿಕೇರಿಯ ಸೆಂಟ್ರಲ್ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದನಂತರ ಆದರ್ಶ ಕೃಷಿಗಾರರೂ, ತೋಟಗಾರರೂ ಆಗಿ ಊರಿನವರಿಗೆ ಒಬ್ಬ ಮಾದರಿಯಾಗಿದ್ದಾರೆ. ಇವರು ಕೊಡಗು ಗೌಡ ವಿದ್ಯಾ ಸಂಘದ ಕಾರ್ಯದರ್ಶಿಯಾಗಿ ಹಲವಾರು ವರ್ಷ ದುಡಿದಿದ್ದಾರೆ. ಇವರು ಕಾರ್ಯದರ್ಶಿಯಾಗಿದ್ದಾಗ ದಿವಂಗತ ಶ್ರೀ ನಿಡ್ಯಮಲೆ ಮುದ್ದಪ್ಪ ಬಿ.ಎ.ಬಿ.ಎಲ್. (ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಜಡ್ಜ್) ಅಧ್ಯಕ್ಷರಾಗಿ ವಿದ್ಯಾಸಂಘದ ಊರ್ಜಿತಕ್ಕೆ ಶ್ರಮಪಟ್ಟು ದುಡಿದಿದ್ದಾರೆ. ಇವರ ಪರಿಶ್ರಮದಿಂದಾಗಿ ಸಂಘವೂ ಮತ್ತು ಮಡಿಕೇರಿಯ ಗೌಡ ವಿದ್ಯಾರ್ಥಿ ಭವನವು ಹೆಚ್ಚಿನ ರೀತಿಯಲ್ಲಿ ಅಭಿವೃದ್ಧಿಯಾಯಿತು. ಶ್ರೀಮಾನ್ ಪೇರಿಯನ ಪೂವಯ್ಯನವರು ಸರಳ ಸ್ವಭಾವದವರಾಗಿ ನಿಷ್ಠಾವಂತ ವ್ಯಕ್ತಿಯಾಗಿ ನಮ್ಮ ಜನರ ವಿದ್ಯಾಭ್ಯಾಸದ ಅಭಿವೃದ್ಧಿಗೆ ಮಾತ್ರವಲ್ಲದೆ ತಮ್ಮ ಊರಿನ, ಮಾಧ್ಯಮಿಕ ಹಾಗೂ ಪ್ರೌಢ ಶಾಲೆಗಳ ಸ್ಥಾಪನೆಗೆ ಕಾರಣಕರ್ತರಾಗಿದ್ದಾರೆ. ಮೈಸೂರಿನಲ್ಲಿರುವ ಕೊಡಗು ಗೌಡ ವಿದ್ಯಾಸಂಘದ ವಿದ್ಯಾರ್ಥಿ ಭವನದ ಕಟ್ಟಡದ ನಿವೇಶನಕ್ಕಾಗಿಯೂ ಉದಾರವಾಗಿ ದಾನ ಮಾಡಿದ್ದಾರೆ. ಶ್ರೀ ಪೂವಯ್ಯನವರಂತಹ ನಿಷ್ಠಾವಂತ ಮಹನೀಯರು ತುಂಬಾ ಜನರು ಸಮಾಜದ ಕಾರ್ಯಕ್ಕೆ ಮುಂದೆ ಬರಲೆಂದು ಹಾರೈಕೆ.

—ಸಂ ]

ನಾನು ಬರೆಯಲು ಪ್ರಾರಂಭಿಸಿರುವ ವಿಷಯವು ಭಾರತ ದೇಶದ ಒಂದು ಉಚ್ಚ ಮಟ್ಟದ ಜನರ ಜೀವನ ಕಥೆಯಾಗಿದೆ. ಈ ಬಗ್ಗೆ ಬರೆಯಬೇಕೆಂದು ಹಲವಾರು ವರ್ಷಗಳಿಂದಲೇ ಒಂದು ಹಂಬಲವಿತ್ತು, ಅಥವ ವಿಷಯ ಪರಿತವರ್‍ಯಾರಾದರೂ ಬರೆಯಬಹುದೇನೊ ಎಂದು ಕಾಯುತ್ತಿದ್ದೆನು. ಇದುವರೆಗೂ ಕಾಣಸಿಗದಿದ್ದುದರಿಂದ ನಿರಾಶನಾಗಿ, ಏನಾದರೊಂದು ಶೋಧನೆ ಮಾಡುವ ಎಂದು - ಹಾರೈಸಿರುವೆನು. ಈ ಬಗ್ಗೆ ಕೆಲವಾರು ವರುಷಗಳಿಂದ ಕೆಲವು ಆಧಾರಗಳನ್ನು ಸಂಪಾದಿಸಿ, ಕಳೆದುಕೊಂಡೆನು, ಈಗ ಅವುಗಳನ್ನು ಓದಿದ ನೆನಪಿನಿಂದಿದ್ದುದನ್ನು ಬರೆಯುತ್ತಿರುವೆನು.

ಈ ಲೇಖನವನ್ನು ಬರೆಯಲು ಪ್ರೋತ್ಸಾಹಿಸಿದ ಬೆಂಗಳೂರಿನ ಗೌಡ ಸಮಾಜದ ಅಧ್ಯಕ್ಷರಾಗಿದ್ದ ಶ್ರೀಮಾನ್ ಪೂಜಾರಿರ ಪೊಣ್ಣಪ್ಪ, ಎಂ.ಎ. ಡಿ.ಪಿ.ಎಂ. ಆರ್.ರವರು ಗೌ॥ ಕಾರ್ಯದರ್ಶಿಗಳಾಗಿದ್ದ ಚಿ॥ ದಂಬೆಕೋಡಿ ಆನಂದ ಬಿ.ಕಾಂ., ಸಿ.ಎ. ರವರಿಗೂ, ಮತ್ತು ಪ್ರಕಟಣೆಗೆ ಅವಕಾಶ ಮಾಡಿಕೊಟ್ಟ ಗೌಡ ಸಂಸ್ಕೃತಿಯ ಸಂಪಾದಕ ಮಂಡಳಿಯವರಿಗೂ, ಋಣಿಯಾಗಿರುವೆನು.

ನಮ್ಮ ಗೌಡ ಜನರು ಭಾರತದ, ಅದರಲ್ಲೂ ಮುಖ್ಯವಾಗಿ ದಕ್ಷಿಣ ಭಾರತದ ಹಲವಾರು ದೇಶಗಳಲ್ಲಿ ಹರಡಿದೆ? ಎಂದು ಕಂಡು ಬಂದಿದೆ. ಹೆಚ್ಚಾಗಿ, ಕೊಡಗು, ಮೈಸೂರು ಮಂಡ್ಯ, ಹಾಸನ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಉತ್ತರ ಕನ್ನಡ ವಗೈರೆ ಕಡೆಗಳಲ್ಲಿ ಗೌಡ ಒಕ್ಕಲಿಗರೆಂದೂ, ತಮಿಳುನಾಡಿನ ಕೊಯಮುತ್ತೂರು,ದೇವಗಿರಿಯ ಕಡೆಗೌಡರೆಂದೂ, ಆಂಧ್ರದ, ಮಧ್ಯಪ್ರದೇಶದ ಕೆಲವು ಜಿಲ್ಲೆಗಳಲ್ಲಿ ರೆಡ್ಡಿ ಜನಾಂಗವೆಂದು ನೆಲೆಸಿರುವರೆಂದೂ, ಸಮೀಕ್ಷೆಯಿಂದ ತಿಳಿಯಬಹುದು. ಹೀಗೆ ನೆಲಸಿದವರಲ್ಲಿ 1966ರ ಜನಗಣತಿಯಂತೆ ಕೊಡಗಿನಲ್ಲಿ 30,000 ಕ್ಕಿಂತಲೂ ಹೆಚ್ಚು ಜನಸಂಖ್ಯೆಯೂ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 3 ಲಕ್ಷಕ್ಕಿಂತಲೂ ಹೆಚ್ಚು ಜನಸಂಖ್ಯೆಯೂ, ಒಟ್ಟು ಹಳೇ ಮೈಸೂರಿನ ಭಾಗಗಳಲ್ಲಿ 15-20 ಲಕ್ಷಕ್ಕಿಂತಲೂ ಹೆಚ್ಚಿಗೆ ಇರಬಹುದೆಂದು ಕಾಣುತ್ತೆ. ಇಷ್ಟು ದೊಡ್ಡ ಜನಾಂಗದವರ ಪೂರ್ವೇತಿಹಾಸವು ಮಸುಕು ಮಸುಕಾಗಿಯೇ, ಇದೆ 1968ರಲ್ಲಿ ಬೆಂಗಳೂರು ಗೌಡ ಸಮಾಜದವರು ಪ್ರಕಟಿಸಿದ "ಗೌಡ ಸಂಸ್ಕೃತಿ" ಎಂಬ ಸಂಚಿಕೆಯಲ್ಲಿ ಕೊಡಗಿನ ನವಕಾಲದ ಚರಿತ್ರೆಯನ್ನು ಶ್ರೀಮಾನ್ ಡಿ. ಎನ್. ಕೃಷ್ಣಯ್ಯ, ಎಂ. ಎ. ಬಿ.ಇಡಿ, ಯವರ ಲೇಖನವನ್ನು 5ರಿಂದ 13ರ ಪುಟದ ವರೆಗೆ ಪ್ರಕಟಿಸಿ, ಕೊಡಗಿಗೆ ಬಂದು ನೆಲಸಿದ ಕಾಲ ಕಾರಣವನ್ನು ಕೊಟ್ಟು ತುಂಬ ಸಹಾಯ ಮಾಡಿರುತ್ತಾರೆ. ಅವರು 7ನೇ ಪುಟದಲ್ಲಿ "ಗೌಡರು" ಎಂದರೆ ಭೂಮಿಗೆ ಒಡೆಯರು, ಊರಿಗೆ ಮುಖ್ಯಸ್ಥರು ಎಂಬ ವಿವರಣೆಯನ್ನು ನೀಡಿರುವರು, ಕೆಲವು ಮಟ್ಟಿಗೆ ಇದು ಒಪ್ಪುವಂತಾದರೂ, ನನಗೆ ಇದು ಸಮಾಧಾನವಾಗುವುದಿಲ್ಲ. ಇಷ್ಟೊಂದು ದೊಡ್ಡ ಜನಾಂಗ ಭೂಮಿಯ ಒಡೆಯರು ಯಾ ಊರಿನ ಮುಖ್ಯಸ್ತರಾಗಿರಲು ಸಾಧ್ಯವಿಲ್ಲ. ಕೊಡಗಿಗೇನೋ 1700ರಿಂದ 1800ರ ಇಸವಿಯೊಳಗೆ ಯಾ ನಂತರ ಮಲೆನಾಡಿನ ಪಾಳುಭೂಮಿಯನ್ನು ರೂಪಿಸಲು ದೊಡ್ಡ ವೀರರಾಜನು ಸುಳ್ಯ, ಪುತ್ತೂರು ಇಕ್ಕೇರಿ ಸಂಸ್ಥಾನಗಳಿಂದ ಬರಮಾಡಿ ಜಮ್ಮು ಜಹಗೀರು ಉಂಬಳಿ ಕೊಡಿಸಿರಬಹುದು. ಇದು ಸಾಧಾರಣವೇ ಈಗಲಾದರೂ ಯೋಗ್ಯವಾದ ಪಾಳುಭೂಮಿಗಳಲ್ಲಿ ಜನರು ನೆಲಸುತ್ತಾ ಇರುವರು.

ಆದರೆ ಇವರು ಹುಟ್ಟು ಕೃಷಿಕರೊ, ಯಾ ಆಸದ್ವೃತ್ತಿಯಾಗಿ ಕೃಷಿಯನ್ನವಲಂಭಿಸಿದರೊ ಎಂಬುದನ್ನು ವಿವೇಚಿಸಬೇಕಾಗಿದೆ. ಈ ಜನಾಂಗದವರಿಗೆ ವ್ಯಾಪಾರ, ಉದ್ಯೋಗ ಅಷ್ಟಾಗಿ ಒಡಿಸುವುದಿಲ್ಲವೆಂದು ಕಂಡುಬರುತ್ತಿದೆ. ಇದರಲ್ಲಿ ಪರಾವಲಂಬನೆಯಿರುತ್ತದೆ, ಕೃಷಿಯಾದರೂ – ಸ್ವಾವಲಂಬನೆಯಾಗಿರುತ್ತದೆ. ಹೀಗೆ ಸ್ವಾವಲಂಬನೆಯು ಅತಿಯಾಗಿ ಕಂಡುಬರುವುದರಿಂದ, ಈ ಜನಾಂಗವು ಸ್ವತಂತ್ರವಾಗಿ ರಾಜ್ಯಾಡಳಿತ ನಡಿಸಿರಬಹುದೆಂದು ಊಹಿಸಲವಕಾಶವಾಗುತ್ತದೆ. ಇದಕ್ಕೆ ಸಾಕ್ಷ್ಯವಾಗಿ ಈ ಜನರ ಲಗ್ನ ಕಾರ್ಯಗಳು ಇತರ ಹಿಂದುಗಳಂತೆ ಕಂಕಣ, ಪಟ್ಟ, ಬಾಸಿಂಗ, ದಾರೆ, ಹಸೆಮಣೆ ರಾಮು, ಕೃಷ್ಣರ, ಮೇಲಿನ ಶೋಭಾನೆಗಳು, ಉಚ್ಛ ಪದ್ಧತಿಗಳೂ ಕಂಡುಬರುತ್ತಿದೆ. ಇದೆಲ್ಲವನ್ನೂ ಗಮನಿಸುವಾಗ ಒಂದು ಕಾಲದಲ್ಲಿ ಒಳ್ಳೆ ವೈಭವದಲ್ಲಿ ಬಾಳಿ ಬದುಕಿದ ಜನಾಂಗವೆಂದು ತರ್ಕಿಸಬಹುದಾಗಿದೆ.

ನನ್ನ ತರ್ಕದಲ್ಲಿ ಈ ಗೌಡ ಜನಾಂಗವು ಕೊಡಗಿಗೂ, ದಕ್ಷಿಣ ಕನ್ನಡಕ್ಕೂ, ಚಿಕ್ಕಮಗಳೂರು, ಹಾಸನ ಮೈಸೂರು, ನೀಲಗಿರಿ, ಕೊಯಮುತ್ತೂರಿನಲ್ಲಿ ನೆಲಸುವ ಮೊದಲು ಬೇರೆ ಕಡೆಗಳಿಂದ ಬಂದರೆಂಬ ಭಾವನೆಯಿದೆ. ಇದಕ್ಕಿಂತ ಮೊದಲು 1300ರಿಂದ 1600ರ ವರೆಗೆ ವಿಜಯನಗರದ ಸಾಮ್ರಾಜ್ಯದಲ್ಲಿ ನೆಲಸಿದ್ದರೆಂದೂ, ತಾಳಿಕೋಟೆ ಯುದ್ಧದ ನಂತರ ಮುಸಲ್ಮಾನರ ಭಯದಿಂದ ಮೇಲೆ ಬರೆದ ಊರುಗಳಿಗೆ ಚದರಿದರೆಂದೂ ನಂತರ ಕೆಲವು

ಪಾಳೆಯಗಾರರಾಗಿ ರಾಜ್ಯವಾಳುತ್ತಿದ್ದರೆಂದೂ ಪ್ರತೀತಿ ಇದೆ, ಇವರ ವಂಶಸ್ಥರು ಕೆಲವರು ಈಗಲೂ ಚಿಕ್ಕಮಗಳೂರು, ಶಿವಮೊಗ್ಗ ಮೊದಲಾದೆಡೆಗಳಲ್ಲಿ ದೊಡ್ಡ ಜಮೀನ್ದಾರರಾಗಿರುವರು. ಈಗಲೂ ಈ ಜನರಲ್ಲಿ ಹೆಚ್ಚಿನ ಸ್ತ್ರೀ, ಪುರುಷರು ಬಲಿಷ್ಠರಾಗಿ, ಒಳ್ಳೆ ಲಕ್ಷಣವಂತರಾಗಿ ಸತ್ಯ, ನ್ಯಾಯವಂತರಾಗಿ ಬಾಳುವೆ ನಡೆಸುವರು, ಇವರ ಕುಲದೇವರು ಶ್ರೀ ವೆಂಕಟರಮಣ ಸ್ವಾಮಿಯಾಗಿರುವುದು ವಿಜಯನಗರದಲ್ಲಿದ್ದ ಇನ್ನೊಂದು ಕುರುಹಾಗಿದೆ. ಯಾಕೆಂದರೆ ಚಿತ್ತೂರಿನಲ್ಲಿರುವ ತಿರುಪತಿಯು ಅರಸರ ಕುಲದೈವವಾಗಿತ್ತು. ಬಹು ಕಾಲ ನಮ್ಮ ಜನರೂ ಅಲ್ಲಿ ನೆಲಸಿದ್ದುದರಿಂದ ನಮಗೂ ಕುಲದೈವವಾಯಿತು.

ಇಷ್ಟು ಹೇಳಿದರೂ ನನಗೆ ಸಮಾಧಾನವಾಗುವುದಿಲ್ಲ. ನನ್ನ ಶೋಧನೆ ಅದಕ್ಕೂ ಹಿಂದೆ ಹೋಗಬಯಸುತ್ತದೆ "ಗೌಡರು" ಎಂದರೆ "ಭೂಮಿಗೆ ಒಡೆಯರು" ಎಂದು ಶ್ರೀ ಡಿ. ಎಸ್. ಕೃಷ್ಣಯ್ಯನವರು ತರ್ಕಿಸಿರುವುದು ಒಂದು ರೀತಿಯಲ್ಲಿ ಒಪ್ಪಬಹುದು. ಹಾಗೆ ಒಡೆಯರಾಗಿ ಎಲ್ಲಿದ್ದರೆಂದು ನಾವು ಆಲೋಚಿಸಬೇಕಾಗಿದೆ. ವಿಜಯನಗರದ ರಾಜಪರಂಪರೆಯಲ್ಲಿ "ತಾಳುವ" ಅಥವ "ತುಳು" ವಂಶದವರು ಸ್ವಲ್ಪ ಕಾಲ ರಾಜ್ಯವಾಳಿದರೆಂದೂ, ಅವರು ಗೌಡ ಜನರೆಂಬ ಭಾವನೆಗಳು ಅನೇಕರಲ್ಲುಂಟು. ಇದರ ನಿಜಾಂಶವನ್ನು ವಿದ್ಯಾವಂತ ಚರಿತ್ರೆ ಶೋಧಕರಿಗೆ ಬಿಡುತ್ತೇನೆ. ನನ್ನ ಮಟ್ಟಿಗೆ ನಾವು ವಿಜಯನಗರದ ರಾಜ್ಯಭಾರದ ಕಾಲದ ಸ್ವಲ್ಪ ಹಿಂದೆ ಹೋಗುವ ಎನ್ನಿಸುತ್ತಿದೆ. ಸುಮಾರು ಕ್ರಿ. ಶ. 1207ರಲ್ಲಿ ಗೌಡ ಜನರು ಗೌಡ ದೇಶದವರಾಗಿದ್ದರು. ಆಗ ಭಾರತದ ಪ್ರಾಂತ್ಯಗಳನ್ನು ಅಂಗ, ವಂಗ, ಕಳಿಂಗ, ಕಾಂಭೋಜ, ಗೌಡ, ಗೂರ್ಜರ ವಗೈರೆ ಚಪ್ಪನ್ನೈವತ್ತಾರು ದೇಶಗಳೆಂದು ಕರೆಯುತ್ತಿರುವುದು ಪುರಾಣ, ಕಥೆ ಓದಿದವರಿಗೆ ನೆನಪಿರಬಹುದು. ಈ ಗೌಡದೇಶವೆಂಬುದು ಬಂಗಾಳದಲ್ಲಿತ್ತೆಂದು "ಅಲ್ಲ - ಹೊ - ಅಕ್ಬರ್" ಎಂಬ ಪುಸ್ತಕದಿಂದ ತಿಳಿಯಬಂದಿದೆ. ಕ್ರಿ. ಶ. 1207ರಲ್ಲಿ ರಾಜಾ - ನಾರಾಯಣಗೌಡ"ನೆಂಬವನು ರಾಜ್ಯಭಾರ ಮಾಡುತ್ತಿದ್ದನೆಂದೂ ದೆಹಲಿಯ ಮುಸಲ್ಮಾನ ರಾಜನಿಂದ ಈತನು ಕೊಲ್ಲಲ್ಪಟ್ಟನೆಂದೂ, ನಂತರ ಅವರ ಭಯದಿಂದ ಅನೇಕರು ದಕ್ಷಿಣಕ್ಕೆ ಸರಿದರೆಂದೂ ನಂಬಬಹುದು. ಗೌಡದೇಶವಾವುದೆಂದರೆ ಬಹುಶಃ ಈಗಿನ ಬಿಹಾರ್ ಉತ್ತರ ಪ್ರದೇಶದ ಭಾಗಗಳೆಂದು ಹೇಳುತ್ತಾರೆ. ಬಂಗಾಳದಲ್ಲಿ ಈಗಲೂ ಇರುವ ಜನರ ಆಚಾರ, ವಿಚಾರ, ಲಗ್ನ ವಗೈರೆಗಳು ಬಹು ಮಟ್ಟಿಗೆ ಈ ಕಡೆಯ ಗೌಡ ಜನರ ಕ್ರಮಕ್ಕೆ ಹೋಲುತ್ತದೆ ಎಂದು ಸೈನ್ಯಕ್ಕೆ ಹೋದ ಕೆಲವು ಮಂದಿ ಅಭಿಪ್ರಾಯಪಡುತ್ತಾರೆ. ಗೌಡ ದೇಶವೆಂದು ಅಲ್ಲಿಗೆ ಹೆಸರು ಬರಲು ಇನ್ನೊಂದು ಕಾರಣವನ್ನು ಒಬ್ಬ ಮಹನೀಯರು ಹೇಳಿದ್ದರು. ಆ ದೇಶಕ್ಕೆ "ಗೂಡ್ ದೇಶ" ಅಂದರೆ "ಬೆಲ್ಲ ಮಾಡುವ" ದೇಶವೆಂದು ಹೆಸರಿತ್ತೆಂದೂ, ಈಗಲೂ ಆ ಕಡೆ ಕಬ್ಬಿನ ವ್ಯವಸಾಯ ಹೆಚ್ಚಾಗಿದೆಯೆಂದೂ, ಕಾಲಕ್ರಮೇಣ "ಗೂಡ್" ಎಂಬುದರ ಬದಲಾಗಿ "ಗೌಡ" ಎಂದು ಬದಲಾಯಿತೆಂದು ಹೇಳುವರು. ಆ ದೇಶದಿಂದ ದಕ್ಷಿಣಕ್ಕೆ ಬಂದರೆಂಬುದಕ್ಕೆ ಇನ್ನೊಂದು ನಂಬುಗೆ ಇದೆ. ದಕ್ಷಿಣ ಕನ್ನಡದಲ್ಲಿ "ದೈವದ ಕೋಲ ಕಟ್ಟುವಾಗ" ದೈವ ಬಂದು ಮೊದಲು "ಎಂಕಳು ಉತ್ತರ ಸೀಮೆಡೊತ್ತು ಘಟ್ಟ-ಜತ್ತ್ ಬತ್ತ್‌ನಗಳ್" ಎಂಬ ಭೂತ ಕಟ್ಟು ಅಥವ "ಪಾಡ್ದಾನ" ಹೇಳುತ್ತದೆಯಂತೆ. ಇದರಿಂದಿಲ್ಲಿ ಗೌಡ ಜನರ ಮೂಲದ ರೂಪರೇಷೆಯಾಗುತ್ತದೆಯಲ್ಲವೆ ?

ಹೀಗೆ ನೋಡಿದಲ್ಲಿ ಗೌಡಜನರು, ಅನಾದಿ ಜನರೆಂದೂ, ಧೀರ, ಉದಾತ್ತ ಜನಾಂಗದವರೆಂದೂ, ಸ್ವಾತಂತ್ರ್ಯಾಭಿಲಾಷಿ ಜನರೆಂದೂ ಭಾವನೆಯಾಗುತ್ತದೆ ಅಲ್ಲವೆ ?

ಇದಿಷ್ಟರಿಂದ ಸಮಾಧಾನ ಹೊಂದಿದರೆ ಸಾಲದು. 20-30 ವರ್ಷಗಳಿಂದ ನಮ್ಮ ಜನರಲ್ಲಿ ಇತರ ಸಹೋದರ ಜನರಲ್ಲಿರುವಷ್ಟು ವಿವಿಧ ಕ್ಷೇತ್ರಗಳಲ್ಲಿ ವಿದ್ಯಾವಂತರಾಗದಿದ್ದರೂ, ಹೆಚ್ಚು ಸಂಖ್ಯೆಯಲ್ಲಿ ಸ್ತ್ರೀ ಪುರುಷರು ವಿದ್ಯಾವಂತರಾಗಿ ಜೀವನದ ಹಲವಾರು ರಂಗದಲ್ಲಿರುವರು. ಉತ್ತಮ ಜೀವನದ ಹೊಯ್ದಾಟದೊಂದಿಗೆ ಜನರ ಚರಿತ್ರೆಯ ಶೋಧನೆಯಲ್ಲಿ ಸ್ವಲ್ಪ ಆಸಕ್ತಿ ತಳೆದು, ಮುಂದಿನ ಪೀಳಿಗೆಗೆ ಅಭಿಮಾನ ಉಂಟಾಗುವಂತೆ ಶ್ರಮಿಸಬೇಕು. ಉತ್ತಮ ಜೀವನಕ್ಕೆ ಹಲವು ಬಗೆಯ ಚಿಕ್ಕ ದೊಡ್ಡ

ಕೈಗಾರಿಕೆ ವ್ಯಾಪಾರದಲ್ಲಿ ತೊಡಗಬೇಕೆಂದು ಬಯಸುತ್ತೇನೆ.

ನಮ್ಮ ಕುಲದೇವರಾದ ಶ್ರೀ ವೆಂಕಟೇಶ್ವರನು ಎಲ್ಲೆಡೆ ಯಲ್ಲೂ ನೆಲೆಸಿರುವ ಜನಾಂಗದವರಿಗೆ ಸದ್ಬುದ್ಧಿಯನ್ನು ಅನುಗ್ರಹಿಸಿ ಉತ್ತಮ ಮಟ್ಟಕ್ಕೊಯ್ಯಲೆಂದು ಪ್ರಾರ್ಥಿಸಿ, ಈ ಪುಟ್ಟ ಲೇಖನವನ್ನು ಮುಕ್ತಾಯಗೊಳಿಸುತ್ತೇನೆ.

—o—

ಶಾಶ್ವತ ಪದವಿಯನ್ನು ಪಡೆದು ನಿರ್ಮಮತೆಯನ್ನು ಪ್ರಾಪ್ತಿ ಮಾಡಿಕೊಂಡು ಜನ್ಮ ಸಾರ್ಥಕ್ಯಕ್ಕೆ ಮನಮಾಡುವುದು ಮಾನವನ ಪ್ರಥಮ ಕರ್ತವ್ಯವಾಗಿದೆ.

o o o o o o

ದಿನಗಳು ಓಡುತ್ತಿವೆ. ಸಮಯ ಮತ್ತು ಸಮುದ್ರತರಂಗ ಯಾರನ್ನೂ ಕಾಯುವುದಿಲ್ಲ. ದೇಹದಲ್ಲಿ ಶಕ್ತಿ ಇದೆ. ನಾಲಿಗೆ ಇದೆ. ಕಿವಿ ಕೇಳುತ್ತಿದೆ ಎನ್ನುವ ಸಂದರ್ಭದಲ್ಲಿಯೇ ಗುರುಕೃಪೆಯಿಂದ ಶಾಶ್ವತ ಸಂಪತ್ತನ್ನು ಸಂಪಾದಿಸು.

o o o o o o

ಸುಮ್ಮನೆ ಕಾಗೆಯಂತೆ ಗೂಗೆಯಂತೆ ಎಲ್ಲೆಲ್ಲೋ ತಿಂದು ಎಲ್ಲ ಕಡೆಯ ವಾತಾವರಣವನ್ನು ಅಶುದ್ಧಿಗೈಯಬಹುದಾದ ಕಾರ್ಯವನ್ನು ನಡೆಸುವುದಕ್ಕಿಂತ ನಿನ್ನ ಜೀವನವನ್ನು ಪರಮಾತ್ಮನಿಗೆ ಮುಡಿಪಾಗಿಟ್ಟು, ಅಂತರ್ಮುಖಿಯಾಗಿ ಶಾಶ್ವತ ಧನವನ್ನು (ಮುಕ್ತಿ) ಸಂಪಾದಿಸು.

# ಗೌಡರ ಪೂರ್ವ ಪರಿಚಯ

ಲೇಖಕರು :— **ಶ್ರೀ ಪೂಜಾರಿರ ನೊಣ್ಣಪ್ಪ. ಎಂ. ಎ., ಡಿ.ಪಿ.ಎಂ.ಆರ್., ಬಿ.ಎಡ್., ಬಿ.ಯಲ್.,**

---

### ೧ ಗೌಡ ಯಾರು ?

ಹಿಂದೂ ದೇಶಕ್ಕೆ 'ದ್ರಾವಿಡರು' ಹೊರಗಿನಿಂದ ಬಂದವರೆಂದು ಯೂರೋಪಿಯನ್ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಎಲ್ಲಿಂದ ಬಂದರು ಎಂಬ ಬಗ್ಗೆ ಇನ್ನೂ ಐಕ್ಯಮತ್ಯವಿಲ್ಲ. ಹಾಗಿದ್ದರೂ ಕಳೆದ ಕೆಲವು ವರ್ಷಗಳಿಂದ ದ್ರಾವಿಡ ಜನಾಂಗಕ್ಕೂ ಭೂಮಧ್ಯ ಪ್ರದೇಶ ಸಮುದ್ರದ ನೆರೆಯ ಜನಾಂಗಕ್ಕೂ ಬಹಳ ಸಾಮ್ಯವಿದೆ ಎಂದೂ, ಅತ್ತ ಕಡೆಯಿಂದ ಹಿಂದೂ ದೇಶಕ್ಕೆ ಬಂದ ಒಂದು ಶಾಖೆಯವರೆಂದು ಅನೇಕ ವಿದ್ವಾಂಸರು ಪ್ರತಿಪಾದಿಸುತ್ತಾರೆ. ಯುರೋಪಿನ ಸಂಶೋಧಕರು ಹೇಳುವ ದ್ರಾವಿಡ ಜನಾಂಗದವರಲ್ಲಿ ಹಟ್ಟಿ ವಂಶವೂ ಒಂದು. ಹಟ್ಟಿಕಾರ ಪಂಗಡಕ್ಕೆ ವೆಳ್ಳರು, ನಂದಿಧ್ವಜರು ಮೂಲ ಪುರುಷರು. ವೆಳ್ಳರಿಂದ ತಮಿಳು ವೆಳ್ಳರಲ್ಲಿ ಕೆಲವರು ತೆಲಗರಲ್ಲಿ ಸೇರಿ ವೆಳಂರಾದರು. ನಂದಿಧ್ವಜರಲ್ಲಿ ಕುರು (೦)ವರು ಮತ್ತು ತುರುವರು, ಕುಡುವರು–ತುರುವ ವೃಕ್ಷಕ್ಕೆ ಸೇರಿದವರಲ್ಲಿ ಗೌಳ (ಗೌಡರು) ಎಂಬುದಾಗಿ ವಿಂಗಡಿಸಿದ್ದಾರೆ. ತುರುವರಿಗೆ ಋಗ್ವೇದದಲಿ 'ತುರ್ವ' ರೆಂದು ಒಂದೆಡೆ ಹೇಳಿದೆ ಎಂದು ಬಲ್ಲವರು ಹೇಳುತ್ತಾರೆ. ಈ ತುರ್ವರು ಅಥವಾ ತುರ್ವಶರು ಪುರಾಣಗಳಲ್ಲಿ ತರ್ವಸುಗಳೆಂದು ವರ್ಣಿಸಿದ್ದಾರೆಂದು ಹೇಳುತ್ತಾರೆ. 'ವಸು' ಎಂದರೆ ಧನ. ಹಾಗಾದರೆ 'ತರ್ವಿನ' ವಸು ಎಂದರೆ ಧನವುಳ್ಳ ಜನಾಂಗದವರೆಂದು ಅರ್ಥ.

ಯದು – ತರ್ವಕರು ಹಿಂದೂ ದೇಶಕ್ಕೆ ಬಹಳ ದೂರದಿಂದ ಸಮುದ್ರ ಮಾರ್ಗವಾಗಿ ಬಂದರೆಂದು ಶ್ರೀ ರಾಮಪ್ರಸಾದ ಚಂದಾರವರು ತಮ್ಮ ಗ್ರಂಥದಲ್ಲಿ ಪ್ರತಿಪಾದಿಸುತ್ತಾರೆ. ಅವರು ಮೊದಲು ಸಿಂಧೂ ತೀರವನ್ನು ನೆಲೆವೀಡಾಗಿ ಮಾಡಿ ವೇದಗಳ ಕಾಲಕ್ಕಿಂತ ಮೊದಲೇ ಸರಿದು ಮಹಾಭಾರತ ಕಾಲಕ್ಕೆ ಗಂಗಾ ಯಮುನಾ ನಾಡಿಗೆ ಬಂದರೆನ್ನುತ್ತಾರೆ. ಇನ್ನೊಂದು ಶಾಖೆಯು ಸೌರಾಷ್ಟ್ರಕ್ಕೂ ಹೋಗಿರಬೇಕು. ಅಲ್ಲಿಂದ ಪಶ್ಚಿಮ ಕರಾವಳಿಯ ಕಡೆಗೆ ಬಂದು ಅಲ್ಲಿಂದ ಈಗಿನ ಮಹರಾಷ್ಟ್ರ ಬೆಳಗಾಂ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಧಾರವಾಡ ಬಳ್ಳಾರಿ ಜಿಲ್ಲೆಗಳಲ್ಲಿ ನೆಲಸಿರಬೇಕೆಂಬ ಊಹನೆಗಳಿವೆ. ತುರ್ವಶರು ದಕ್ಷಿಣಕ್ಕೆ ಸೇರಿದವರೆಂದು ಪುರಾಣಗಳು ಹೇಳುತ್ತವೆ. ಗಂಗಾತೀರದಿಂದ ಬಂದ ಹಟ್ಟಿಕಾರರೇ ಗಂಗರಾಗಿರಬೇಕು. ಇವರೇ ಗಂಗಡಿಕಾರರ ಮೂಲಪುರುಷರು. ಗಂಗರಂತೆ ಕಾಪುರಡ್ಡಿಗಳು ಚಾಲುಕ್ಯರ ಮೂಲ ಪುರುಷರು, ಅಗಸ್ತ್ಯ ಋಷಿಯು ಮದುವೆಯಾದ ಲೋಪಮುದ್ರೆಯು ವಿದರ್ಭ (ಹಟ್ಟಿಕಾರರ) ನಾಡಿನವಳಂತೆ.

ಈ ಹಟ್ಟಿಕಾರರಲ್ಲಿ ಒಂದು ಶಾಖೆಯವರು ಗೋವಳರಾಗಿ "ಗೋ" (ಪ್ರಥ್ವಿ) ಪಾಲಕರೆಂದು ಹೇಳುತ್ತಾರೆ.

ದನಗಾರಿಕೆ ಯುಗದಲ್ಲಿ "ಗೋ"ಪನು ಭೂಪನಾದನು. ಅಲ್ಲಿಂದ ವಸ್ತ್ರಯುಗವು ಪ್ರಾರಂಭವಾಗಿ ಜಾಡ, ಚೇರ, ಜೋಳ, ಚಾಲುಕ್ಯರಾದರೆಂದು ಹೇಳುತ್ತಾರೆ. ಕಾಲ ಕ್ರಮೇಣದಲ್ಲಿ ಒಕ್ಕಲುತನದ ವ್ಯಾಪಾರೋದ್ಯಮಗಳಿಂದ ಧನದ ಅಭಿವೃದ್ಧಿ ಎಂಬುದನ್ನು ಮರೆತು ರಾಜರಲ್ಲಿ ಬಾಹು ಬಲದಿಂದ ಧನ ಸಂಪಾದನೆ ಮಾಡುವ ರೂಢಿಯು ತಲೆ ದೋರಿತು. ಗೋಪರೂ (ಗೌಡರೂ) ಪಟ್ಟಕಾರರೂ ಭುಜಬಲಶಾಲಿಗಳಾದ ಕ್ಷತ್ರಿಯರಾದರು. ರಾಜನ್ಯರಿಗೆ ಕ್ಷತ್ರಿಯರೆಂಬ ಹೆಸರು ಮುಂದೆ ಬಂತು. ರಾಷ್ಟ್ರಕೂಟರ ಚಿನ್ಹವು ನೇಗಿಲು ಎಂಬುದಾಗಿ ರಾವ್‌ಬಹದೂರ್ ಹಯವದನ ರಾಯರು ಕಂಡು ಹಿಡಿದಿದ್ದಾರೆ. ರಾಷ್ಟ್ರ ಕೂಟರು ನಮ್ಮ ನಾಡಗೌಡರೆಂದೂ ಪಾಟೀಲರೆಂದೂ ಹೇಳುತ್ತಾರೆ. ಪಟ್ಟೆಲ ಎಂದರೆ ಹಟ್ಟಿಕಾರರು, ಗೋವ ಳರು, ಗೌಡರು. ಆದುದರಿಂದ ಪಾಟೀಲರೆಂದರೂ ಗೌಳ, ಗೌಡರೇ.

ಪ್ರೊ|| ಪಿ. ಗುರುರಾಜಭಟ್ಟರ ತರ್ಕದಂತೆ ದಕ್ಷಿಣ ಕನ್ನಡ ಜಿಲ್ಲೆಯು "ತುಳುನಾಡು" ಎಂಬ ಹೆಸರು ಬರುವು ದಕ್ಕೆ ತುರುಕಾರರ ನಾಡು, ತುರುಗಳೇ ಪ್ರಧಾನರಾದ ನಾಡು ತುರುನಾಡು. "ತುಳುನಾಡು" ತರುವಿನ ಪರ್ಯಾಯ ಪದದಿಂದ ಬಂತೆಂದು ಊಹಿಸುತ್ತಾರೆ. ತುರುಗಳನ್ನು ಸಾಕುವವರು, ಅವಗಳನ್ನು ಹೊಂದಿದವರು ತುರುಕಾರರು (ತುರುವರು). ಈ ತುರುಕಾರರು (ತುರುವರು) ಅವರೇ ತುಳುವರೆಂದು ಹೆಸರು ಪಡೆದರು ಎಂದು ಬರೆಯುತ್ತಾರೆ. ಈ ದನಕಾರರು ಇರುವ ಊರಿಗೆ ಹಳ್ಳಿಗೆ "ಪಾಡಿ" ಎಂಬು ದಾಗಿ ಕರೆದರೆಂದೂ ಅದೇ ರೀತಿ ದಕ್ಷಿಣ ಕನ್ನಡ ಜಿಲ್ಲೆ ಯಲ್ಲಿ ಪಾಡಿ ಎಂಬುದಾಗಿ ಅಂತ್ಯವಾಗುವ ಹಲವಾರು ಊರುಗಳು ಇವೆ ಎಂದು ಹೇಳುತ್ತಾರೆ. ಉದಾಹರಣೆಗೆ ಕೆದಂಬಾಡಿ, ಬೆಳ್ಳಿವಾಡಿ, ಕಾಸ್ಪಾಡಿ, ಮುಡಪ್ಪಾಡಿ, ದೋಲ್ಪಾಡಿ, ಚೊಕ್ಕಾಡಿ ಎಂಬ ಹೆಸರುಗಳು ಹಾಗೆ ಬಂದವೆಂದು ಊಹಿಸಲಾಗಿದೆ. ಗೌಡರಲ್ಲಿ ಈ ರೀತಿಯ ಮನೆತನದ ಹೆಸರು ಈಗಲೂ ಇವೆ.

ಕಲ್ಯಾಣ ಚಾಲುಕ್ಯರ ಶಾಸನಗಳಲ್ಲೊಂದಾದ ಎರಡನೆ ಜಗದೇಕ ಮಲ್ಲನ ಋಷ್ಯಶೃಂಗದ (ಶಿರಕಂಗಿ ಸೌದತ್ತಿ ತಾಲೋಕು) ಬೆಳಗಾವ್ ಜಿಲ್ಲೆ ಕ್ರಿ.ಶ.1148ರ ಶಾಸನದಲ್ಲಿ ಅಲ್ಲಿಯ ಊರಿನ ಗಾವುಂಡರು (ಗೌಡರು) ಭೂದಾನ ಮಾಡಿದ ದಾಖಲೆ ಇದೆ ಎಂದು ಹೇಳುತ್ತಾರೆ. ಈ ಗವುಂಡರಲ್ಲಿ (ಗೌಡರಲ್ಲಿ) ಕೆಲವರು ತೊಳಪ ಕುಲಕ್ಕೆ ಸೇರಿದವರೆಂದು ನಮೂದಿಸಲ್ಪಟ್ಟಿದೆ ಎಂದು ಹೇಳುತ್ತಾರೆ. ಈ ಕುಲದವರ ಹೆಸರು ವಿಜಯನಗರದ ಶಾಸನಗಳಲ್ಲಿ ಅಲ್ಲಲ್ಲಿ ಪಶ್ಚಿಮ ಕರಾವಳಿಯ ಉತ್ತರ ಮತ್ತು ದಕ್ಷಿಣ ಕ್ಷೇತ್ರದಲ್ಲಿ ಕಂಡುಬರುತ್ತದೆಂದು ಹೇಳುತ್ತಾರೆ. ತೋಳ ಹರ ಯಾ(ತೋಳರ) ತುಳುವರ ಮೂಲವೂ ಬೆಳಗಾಮಿನ ತೊಳ ಹರ ಮೂಲವೂ ಬೆಳಗಾಮಿನ ತೊಳಹರ ಕುಟುಂ ಬಕ್ಕೆ ಸೇರಿದವರೆಂದು ಅನುಮಾನಿಸಲಾಗಿದೆ. ಕೊಡಗು ರಾಜರು ಕೊಡಗಿನಲ್ಲಿ ನೆಲೆಸಿದ ಗೌಡರಿಗೆ ಕೊಟ್ಟ ನಿರೂಪ ದಲ್ಲಿ 'ತುಳುವ' ಎಂಬುದಾಗಿ ನಮೂದಿಸಲಾಗಿದೆ. ಕೊಡಗು ರಾಜರು ಹಿಂದೆ ದಕ್ಷಿಣ ಜಿಲ್ಲೆಯನ್ನು 'ತುಳು ನಾಡು' ಎಂದು ಕರೆಯುತ್ತಿದ್ದುದರಿಂದ ಅಲ್ಲಿಂದ ಬಂದ ಗೌಡರನ್ನು 'ತುಳುವ' ಎಂದು ಕರೆದಿದ್ದಾರೆ. ತುಳು ನಾಡಿನಿಂದ ಬಂದವರೆಲ್ಲರನ್ನೂ ತುಳುವ ಎಂಬುದಾಗಿ ಕರೆಯಲಿಲ್ಲ. ಬರೀ ಗೌಡರನ್ನು ಕರೆಯುವುದಕ್ಕೆ ಕಾರಣ ವೇನೆಂಬುದು ಪ್ರಶ್ನೆಯಾಗಿದೆ.

ಈ 'ಗೌಡರು' ತುಳು ನಾಡಿನಿಂದ ಬಂದದ್ದಕ್ಕೆ ತುಳುವರಾದರೋ ಅಥವಾ ಪ್ರೊ|| ಪಿ. ಗುರುರಾಜ ಭಟ್ಟರು ಹೇಳುವ ರೀತಿಯಲ್ಲಿ ಇವರಿಗೆ ತುಳುವ ಎಂಬ ಹೆಸರು ಬಂದಿತೋ ಎಂಬುದಾಗಿ ಅನುಮಾನಿಸಬೇಕಾ ಗಿದೆ. ದಕ್ಷಿಣ ಕನ್ನಡ ಮತ್ತು ಕೊಡಗಿನಲ್ಲಿ ವಾಸವಾಗಿ ಈ "ಗೌಡರು" ತುಳುವ ಕುಲಕ್ಕೆ ಸೇರಿದ್ದರೆ ಇವರಲ್ಲಿ ಹೆಚ್ಚಿನ ಜನರು ಈಗಲೂ ಮಾತಾಡುತ್ತಿರುವ ಭಾಷೆ ಹಳೆ ಗನ್ನಡವಾಗಿರುವಾಗ ಇವರು ತುಳು ಭಾಷೆಯನ್ನೇ ಮಾತಾಡಬೇಕಿತ್ತು. ಆದರೆ ಅದು ಹಾಗಿಲ್ಲ. ಇನ್ನೊಂದು ಚರ್ಚಾಸ್ಪದ ಸಂಗತಿ ಎಂದರೆ ವಿಜಯನಗರದ ಕೃಷ್ಣ ದೇವರಾಯನು ತುಳುವ ವಂಶಕ್ಕೆ ಸೇರಿದವನಾದರೂ ಅವನು ಕನ್ನಡ ಭಾಷೆಯಾಡುತ್ತಿದ್ದನೆಂದು ಚರಿತ್ರೆಯಲ್ಲಿ ಬರುತ್ತದೆ. ಹಾಗಿರುವಾಗ ಭಾಷೆಗೂ ಕುಲಕ್ಕೂ ಯಾವ ಸಂಬಂಧವಿಲ್ಲವೆಂದಾಯಿತು.

ನಮ್ಮಲ್ಲಿ ಕೆಲವು ಹಿರಿಯರು ದಕ್ಷಿಣ ಕನ್ನಡ ಮತ್ತು ಕೊಡಗಿನ "ಗೌಡರು" ಐಗೂರು ಸೀಮೆಯಿಂದ ಬಂದವ

ಕೆಂದು ಹೇಳಿಕೊಳ್ಳುತ್ತಾರೆ. ಐಗೂರು ಹಾಸನ ಜಿಲ್ಲೆಯಲ್ಲಿದೆ. ಅಲ್ಲಿನ ಜನರು ಮಾತಾಡುವ ಕನ್ನಡ ಭಾಷೆಗೂ ಕೊಡಗಿನಲ್ಲಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ "ಗೌಡರು" ಮಾತಾಡುವ ಕನ್ನಡಕ್ಕೂ ಯಾವ ರೀತಿಯಲ್ಲಿಯೂ ಹೋಲಿಕೆ ಇಲ್ಲ. ಹಾಗಿರುವಾಗ ಇವರು ಇಕ್ಕೇರಿ ವಂಶದ ಕಾಲದಲ್ಲಿ ಐಗೂರಿನ, ಸುತ್ತಮುತ್ತಲಿರುವ ಸ್ಥಳಕ್ಕೆ ಬೇರೆಕಡೆಯಿಂದ ಬಂದು ನೆಲಸಿದ ಕೆಲವು ಸಮುಯದಲ್ಲಿ ದಕ್ಷಿಣ ಕನ್ನಡಕ್ಕೆ ಹೋಗಿರಬೇಕೆಂದು ಅರ್ಥವಾಗುತ್ತದೆ. 1148ರ ಕಲ್ಯಾಣ ಚಾಲುಕ್ಯರ ಶಾಸನ ಮತ್ತು ವಿಜಯನಗರದ ಉತ್ತರ ದಕ್ಷಿಣ ಕರಾವಳಿಯ ಶಾಸನಗಳಲ್ಲಿ ಬರುವ ತೊಳಹಾರ, ತೊಳಪ ತುಳವರ ಗೌಡರಾದರೆ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೊಡಗಿನಲ್ಲಿ ವಾಸವಾಗಿರುವ "ಗೌಡರು" ದಕ್ಷಿಣ ಮತ್ತು ಉತ್ತರ ಕರಾವಳಿ ಮತ್ತು ಬೆಳಗಾಂ ಜಿಲ್ಲೆಯಲ್ಲಿ ವಾಸವಾಗಿದ್ದಿರಬಹುದೆಂದು ಅನುಮಾನಿಸಬಹುದು. ಈ ವಿಷಯದಲ್ಲಿ ದಕ್ಷಿಣ ಕನ್ನಡ ಉತ್ತರ ಕನ್ನಡ ಶಾಸನಗಳನ್ನು ಸರಿಯಾಗಿ ಆಳವಾಗಿ ಪರಿಶೋಧನೆ ನಡೆಸಿದರೆ ನಮಗೆ ಅರಿವಾಗಬಹುದು. ಏನೇ ಆದರೂ ಐಗೂರು ಇವರ ಮೂಲಸ್ಥಾನವಲ್ಲವೆನ್ನುವುದು ಖಚಿತ.

ಒಂದು ವಿಷಯ ಮಾತ್ರ ಖಂಡಿತವಾಗಿ ಹೇಳಬಹುದು. ಅದೇನೆಂದರೆ ಈ ಜನರಿಗೆ ವಿಜಯನಗರ ಪತನವಾದನಂತರ ದಕ್ಷಿಣ ಕನ್ನಡದಲ್ಲಿಯೂ ಕೊಡಗಿನಲ್ಲಿಯೂ ನೆಲೆಸುವವರೆಗೆ ಒಂದೇ ಕಡೆ ನೆಲೆ ನಿಲ್ಲಲು ಸರಿಯಾದ ಸೌಲಭ್ಯವಿರಲಿಲ್ಲವೆಂದು ಮನವರಿಕೆಯಾಗುತ್ತದೆ. ಈ ಗೌಡರು ತುಳುವ ಸಂತತಿಯಲ್ಲದಿದ್ದರೆ ಕೊಡಗು ರಾಜನ ಕಾಲದಲ್ಲಿ ಕೊಟ್ಟ ನಿರೂಪದ "ತುಳುವ" ಎಂಬ ಪದವು ಇವರ ವಿಷಯದಲ್ಲಿ ತಪ್ಪು ಭಾವನೆಯಿಂದ ನಮೂದಿಸಲ್ಪಟ್ಟಿದೆ ಎಂದು ನನ್ನ ಭಾವನೆ.

ಸತ್ಯಸಂಗತಿ ಏನೇ ಇದ್ದರೂ ಈ ಗೌಡ ಜನಾಂಗದವರು ಈಗ ಕೆಲವು ದಶಕಗಳ ಹಿಂದೆ ಇದ್ದ ಬಡಸ್ಥಿಕೆ ಮತ್ತು ಹಿಂದುಳಿದಿರುವಿಕೆಗೆ ಭಾರತದ ಅನೇಕ ಪಂಗಡಗಳಿಗೆ ಉಂಟಾದ ಪರಕೀಯರ ಧಾಳಿಯು ತೊಂದರೆಯೂ ಇವರಿಗೆ ತಟ್ಟಿ ಇವರ ಅವನತಿಗೆ ಕಾರಣವಾಗಿದೆ ಎಂದು ಹೇಳಬಹುದು. ಒಂದು ಊರಿನಿಂದ ಇನ್ನೊಂದು ಊರಿಗೆ ವಲಸೆ ಬರುವುದಕ್ಕೆ ವಿಜಯನಗರದ ಸಾಮ್ರಾಜ್ಯ ಪತನದ ಮಹಮದೀಯರ ಧಾಳಿಯೂ ಕಾರಣವಾಗಿದೆ ಎಂದು ತೋರುತ್ತದೆ. ಒಂದು ಊರಿನಿಂದ ಇನ್ನೊಂದು ಊರಿಗೆ ವಲಸೆ ಹೋಗಿ ಅಲ್ಲಿ ನೆಲೆನಿಂತ ಜನರೊಡನೆಯೂ ಅಲ್ಲಿನ ಪ್ರಾಕೃತಿಕ ಸನ್ನಿವೇಶಗಳಿಗೆ ಹೊಂದಿಕೊಂಡು ತಮ್ಮ ಆರ್ಥಿಕ ಜೀವನವನ್ನು ಅಭಿವೃದ್ಧಿಗೊಳಿಸಿಕೊಂಡು ಬರುವುದು ಅಷ್ಟೊಂದು ಸುಲಭವಲ್ಲವಾದರೂ ಪ್ರಾಚೀನ ಕಾಲದ ಭಾಷೆ ಮತ್ತು ಸಂಸ್ಕೃತಿಯನ್ನು ಇಂದಿಗೂ ಉಳಿಸಿಕೊಂಡು ಬಂದಿರುವುದು ಒಂದೂ ಸಂಸ್ಕೃತಿಯ ಅಂಗವಾಗಿರುವ ಈ ಜನರ ವಿಶಿಷ್ಟತೆಯನ್ನು ತೋರಿಸುತ್ತದೆ.

ಇವರು ಈಗ ನೆಲೆಸಿರುವ ಸ್ಥಳಕ್ಕಿಂತ, ಮೊದಲಿದ್ದ ಸ್ಥಳದಲ್ಲಿ ಸುವ್ಯವಸ್ಥಿತ ಮತ್ತು ಉನ್ನತ ಮಟ್ಟದ ಸಂಸ್ಕೃತಿಯನ್ನು ಹೊಂದಿದ್ದರೆನ್ನುವುದಕ್ಕೆ ಗೌಡರ ಮದುವೆ ಹಬ್ಬಗಳಲ್ಲಿ ಹೇಳುವ ಸೋಬಾನೆಗಳಿಂದ ನಮಗೆ ತಿಳಿದುಬರುತ್ತದೆ. ಸೋಬಾನೆಗಳು ಕನ್ನಡ ನಾಡಿನಲ್ಲಿ ಜನಪದ ಗೀತೆಯ ವರ್ಗಕ್ಕೆ ಸೇರಿದವು. ಇವು ಒಂದು ಜನಾಂಗದ ಒಂದು ಸಂಸ್ಕೃತಿಯ ಹೃದಯದಿಂದ ಮೂಡಿಬಂದ ಸಾರಸ್ವತ ಸಂಪತ್ತು. ಸೋಬಾನೆಗಳು ನಾಗರೀಕತೆಯಿಂದ ವಿರೂಪಗೊಳ್ಳದೆ ತನ್ನ ಸಹಜ ಸೊಬಗನ್ನು ಉಳಿಸಿಕೊಂಡು ಕಳಕಳಿಸುತ್ತಿರುವ ಕುಸುಮ ಸಂಚಯ– ಹೃದಯದಿಂದ ಮೂಡಿಬಂದು ನೇರವಾಗಿ ಹೃದಯವನ್ನು ಪ್ರವೇಶಿಸುವ, ಹೃದಯವನ್ನು ತನ್ನದಾಗಿರಿಸುವ ಶಕ್ತಿ ಈ ಜಾನಪದ ಗೀತೆಗಳಲ್ಲಿದ್ದಂತೆ ಮತ್ತಾವ ಸಾಹಿತ್ಯ ಪ್ರಕಾರಕ್ಕೂ ಇಲ್ಲ. ನಮ್ಮ ಸೋಬಾನೆಗಳು ನಮ್ಮ ಜನರ ಪ್ರಾಚೀನ ರೀತಿ ನೀತಿ, ಕುಲಧರ್ಮಕ್ಕನುಸಾರವಾಗಿ ಬಹು ಹಿಂದಿನಿಂದಲೂ ಈಗಲೂ ಹಾಡುತ್ತಿರುವ ಗೀತೆಗಳು. ಸೋಬಾನೆಗಳು ಗೌಡರ ಪ್ರತಿಯೊಂದೂ ಮಂಗಳ ಕಾರ್ಯಗಳಲ್ಲಿ ಹಾಡುವ ಗೀತೆಗಳು. ಈ ಹಾಡುಗಳನ್ನು ಒಂದೊಂದಾಗಿ ಹಾಡುತ್ತಾ ಹೋದರೆ ನಮ್ಮ ಸಂಸ್ಕೃತಿಯ ಪರಂಪರೆಯ ಅರಿವು ನಮಗಾಗುವುದು. ಮಗುವಿನ ಜನನದಿಂದ ಹಿಡಿದು ಬದುಕಿನ ಎಲ್ಲಾ ಹಂತಗಳಲ್ಲೂ ನಮ್ಮಲ್ಲಿ ಹಾಡುವ ಹಾಡುಗಳಿವೆ.

ಹಿಂದೂ ಸಮಾಜದ ವೈಭವಯುತವಾದ ಮದುವೆ ಸಂಪ್ರದಾಯಗಳು ನಮ್ಮಲ್ಲಿ ಕಂಡುಬರುತ್ತವೆ. ಹೆಣ್ಣಿಗೆ

ಮದುವೆಯಲ್ಲಿ ಶೃಂಗರಿಸುವಾಗ ಮುತ್ತಿನ ಚೆಂಡು ಮೂವತ್ತು ನವಲಕ್ಕಿ ಹವಳದ ಚೆಂಡು ಹದಿನಾರು ನವ ಲಕ್ಕಿ, ಹಿಂಗಡಗ ಮುಂಗಡಗವೆಂಬ ಎಂಟು ಕಡಗ, ಅರಳೋಲೆ ಹಸ್ತದ ಕಡಗ ಮುಂತಾದವುಗಳ ಹೆಸರನ್ನು ಹೇಳುತ್ತಾರೆ. ಹೆಣ್ಣಿಗೆ ತೊಡಿಸುವ ಬಟ್ಟೆಬರೆಗಳಾದರೋ ಹನ್ನೆರಡು ವರಹದ ಪಟ್ಟೆಸ್ಯಾಲೆ, ಬೊಟ್ಟು ಕುಚ್ಚದ ರವಕೆ–ಇವುಗಳಿಂದ ಶೃಂಗರಿಸಬೇಕೆಂದು ಕೇಳಿಕೊಳ್ಳು ತ್ತಾಳೆ ಮಾವನಾಗುವವನನ್ನು ಗಂಡಿನ ತಂಗಿ. ಇವುಗಳ ಉದಾಹರಣೆಯಿಂದ ಹಿಂದಿನ ಕಾಲದಲ್ಲಿ ಐಶ್ವರ್ಯದಿಂದ ಬಾಳಿ ಬದುಕಿದ ಜನಾಂಗವೆಂದು ಕಂಡುಬರುತ್ತದೆ. ಉಡುಪು ಆಭರಣಗಳನ್ನು ಒದಗಿಸಲು ಶಕ್ತಿ ಇಲ್ಲದವರು ಸಾಲವಾಗಿಯಾದರೂ 'ಎರವಿನ' ಆಭರಣಗಳನ್ನು ತೊಡಿ ಸುವ ಪದ್ಧತಿ ಈಗಲೂ ಇದೆ.

ಇದು ಬರೆ ಹಾಡುಗಾರಿಕೆಯಲ್ಲಿಯೇ ಇಲ್ಲದೆ ಆಚ ರಣೆಯಲ್ಲಿತ್ತೆಂಬುದಕ್ಕೆ ಶ್ರೀ ತ್ರಿವಿಕ್ರಮರು ಕೊಟ್ಟಿರುವ ಆಭರಣಗಳ ಪಟ್ಟಿಯಿಂದ ಖಚಿತವಾಗುತ್ತದೆ. ವಿಜಯ ನಗರದ ಸಾಮ್ರಾಜ್ಯದ ಕಾಲದಲ್ಲಿ ಶ್ರೀಮಂತರು ಮಾತ್ರ ವಲ್ಲದೆ ಸಾಮಾನ್ಯ ಜನರು ಆಭರಣಗಳನ್ನು ತೊಡು ತ್ತಿದ್ದರು. ಗಂಡಸರು ಮುತ್ತು ರತ್ನಗಳಿಂದ ಕೆತ್ತಲ್ಪಟ್ಟ ಕಿವಿಯುಂಗುರಗಳ ರತ್ನದ ಹಾರಗಳನ್ನು ಧರಿಸುತ್ತಿದ್ದರು. ಹೆಂಗಸರು ವಜ್ರದ ಬೆಂಡೋಲೆ, ಮುತ್ತಿನ ಮೂಗುತಿ, ರತ್ನ ಮುತ್ತು ಚಿನ್ನದ ಹಾರ, ಮುತ್ತು ರತ್ನಗಳಿಂದ ಕೆತ್ತ ಲ್ಪಟ್ಟ ಚಿನ್ನದ ಬಳೆ ಮುಂತಾದ ಆಭರಣಗಳನ್ನು ಹಾಕಿ ಕೊಳ್ಳುತ್ತಿದ್ದರು. ಆಗ ಮುಖ್ಯವಾಗಿ ಹೆಚ್ಚು ಬಳಕೆ ಯಲ್ಲಿದ್ದ ಆಭರಣಗಳೆಂದರೆ ಮಾಂಗಲ್ಯ, ಮೂಗುತಿ, ತಾಯತ ಮುತ್ತಿನ ಪದಕಹಾರ, ಮೋಹನ ಸರ, ಕಟ್ಟಣಿ ಮುತ್ತಿನ ವಾಲೆ, ಬೆರಳುಂಗರ, ಪೆಂಡೆಯ ಮಣಿದಾಮ ಅಥವಾ ಡಾಬು, ದುಂಡು ಮುತ್ತಿನ ಕೊರಳ ಹಾರ, ಚಿನ್ನದ ಸರ, ಕಂಕಣ, ತೋಳ ಬಳೆಗಳು, ದುಂಡು ಹವಳದ ಕೈಕಟ್ಟು, ಮುದ್ರಿಕೆ, ಹೊಸ ಕುಂದಣ ಚಳ ತುಂಬು, ಜಡೆ ಭಂಗಾರ, ಹೊಂಗ್ಯಾದಿಗೆ, ಬಂಗಾರದ ಹರಳಿನ ಕಟ್ಟಿ, ಮುತ್ತಿನ ಮೂಗುತಿ, ಕೆತ್ತಿದ ವಾಲೆ, ಇತ್ತೆರ ಬುಗುಡಿ, ನೆತ್ತಿಗೆ, ಅರಳೆಲೆ, ಚಿತ್ರದ ರ್‍ಯಾಗಟೆ, ಹಸ್ತ ಕಡಗ, ಚೂಡ್ಯವಂಕಿ, ರತ್ನದ ಪದಕ ಮುಂತಾದವು ಗಳಿದ್ದವೆಂದು ತಿಳಿದುಬರುತ್ತವೆ.

ಇದು ಅಲ್ಲದೆ ಎಣ್ಣೆ ಅರಿಸಿನ ಶಾಸ್ತ್ರಕ್ಕೆ ಕೂರಿಸು ವಾಗ ಯಾವ ಮರದ ಮಣೆಯನ್ನಿಟ್ಟಿರಬೇಕು. ಹಸೆ ಯನ್ನು ಹೇಗೆ ಬರೆಯಬೇಕು ಎಂಬುದನ್ನು ತಿಳಿಸುತ್ತವೆ. "ಸೋದರದ ಹಿರಿಭಾವ ಬರುತ್ತಾರೆ ಅವರು ಬರುವಾಗ ಚೆನ್ನಾಗಿ ಕಾಣಬೇಕು. ಚೆನ್ನಾಗಿ ಕಾಣುವಂತೆ ಸುಂದರ ವಾಗಿ ಬರೆಯಬೇಕು. ಸೂರ್ಯದೇವರ ಅಕ್ಕ ಬರು ತ್ತಾರೆಂದು ಚೌಕಟ್ಟಾಗಿ ಬರೆಯಿರಿ, ಆ ಬಣ್ಣ ಬರೆಯಿರಿ ಈ ಬಣ್ಣ ಬರೆಯಿರಿ ಸೂರ್ಯದೇವರ ಬಣ್ಣ ಚಂದ್ರ ದೇವರ ಬಣ್ಣ ಬರೆಯಿರೆಂದು" ಕೇಳಿಕೊಳ್ಳುತ್ತಾರೆ.

ಮದುಮಕ್ಕಳು ಕೂರುವ ಹಸೆಯು ಬಹಳ ಅಲಂಕೃತ ವಾಗಿರಬೇಕೆಂದೂ ಆಶೆ, ಬರೆದ ಹಸೆ ಎಲ್ಲರೂ ಒಪ್ಪಬೇ ಕೆಂಬ ಆಶೆ. ಚಿತ್ರಕಲೆಗಳಿಗೂ ಶಿಲ್ಪಕಲೆಗಳಿಗೂ ತವರು ಮನೆ ಎಂದೆನಿಸಿದ ಭಾರತೀಯ ಸಂಸ್ಕೃತಿಯ ಅಂಗವಾಗಿ ರುವ ಗೌಡರಲ್ಲಿ ಇಂತಹ ಆಚಾರಶೀಲವಾದ ಪದ್ಧತಿಗಳಿ ರುವುದರಲ್ಲಿ ಅತಿಶಯೋಕ್ತಿಯ ಮಾತಾಗಲಾರದು.

### ೨ ದೇವತಾರಾಧನೆ

ವೆಂಕಟರಮಣಸ್ವಾಮಿ ಕುಲದೇವರಾದರೂ ಸಬ್ಬಮ್ಮದೇವರಿಗೆ ಮದುವೆಗಳಲ್ಲಿ ಹರಕ್ಕೆ ಹಣ ಕಟ್ಟು ವುದು ಮದುವೆಗಳಲ್ಲಿ ಗಂಗಪೂಜೆ ಮಾಡುವುದು, ಕಾಳಿ, ಚಾಮುಂಡಿ ವಿಷ್ಣುಮೂರ್ತಿ ಮುಂತಾದ ಮೂರ್ತಿ ಪೂಜೆಯೂ ಈ ಗೌಡರಲ್ಲಿ ಹಿಂದಿನಿಂದಲೂ ನಡೆದು ಕೊಂಡು ಬಂದುದರ ಹಿನ್ನೆಲೆಯನ್ನು ಸ್ವಲ್ಪ ವಿಚಾರಿಸ ಬೇಕಾಗಿದೆ.

ಮಹಾಮಾತಾ (Mother Goddess) ಸಂಪ್ರದಾಯವು ಪುರಾತನ ಜನಾಂಗದ ಮೂಲದೈವತ. ಭಾರತದಲ್ಲಿ ಮಾತ್ರವಲ್ಲ ಭಾರತದ ಹೊರಗೂ ಆದಿಜನನಿಯ ಆರಾಧನೆ ಇದ್ದಿತು. ಇದಕ್ಕೆ ಕಾರಣ ಮಾನವ ಸಮಾಜವು ಮಾತೃಪ್ರಧಾನ ಕುಟುಂಬ ಸಂಸ್ಥೆಯ ಹಂತದಲ್ಲಿ ಕಂಡುಬರುವುದೇ ಕಾರಣ. ಇದು ಸಿಂಧೂನದಿ ದಂಡೆಯ ಮೇಲಿರುವ ಹರಪ್ಪಾ ಮತ್ತು ಮೊಹೆಂಜದಾರೋ ಸಂಸ್ಕೃತಿಯಲ್ಲಿರುವುದನ್ನು ಇತಿಹಾಸ ಕಾರರು ಒಪ್ಪುತ್ತಾರೆ. ಈಗಲೂ ಮಹಾಮಾತೆಯನ್ನು ಪೂಜಿಸುವ ಸಂಪ್ರದಾಯ ನಮ್ಮಲ್ಲಿದೆ. ಆದುದರಿಂದಲೇ

ನಾವು ಸಬ್ಬಮ್ಮದೇವರಿಗೆ ಮದುವೆಗಳಲ್ಲಿ ಹರಕೆ ಹಣ ಕಟ್ಟುವುದು. ಸಬ್ಬಮ್ಮ ಎಂದರೆ ಸರ್ವಾಂಬೆ ಅಥವಾ ಮಹಾ ಮಾತೆ ಎಂದರ್ಥ. ಇದೂ ಅಲ್ಲದೆ ಕಾಲವನ್ನು ದೇವರೆಂದು ಇದರ ಭಿನ್ನ ಉಚ್ಚಾರಣೆಗಳು ಆಗಿರುವ ಶಕ್ಯತೆ ಇವೆ. ಮಲ್ಲಯ್ಯ, ಮಲ್ಲಪ್ಪ, ಕಲ್ಲಪ್ಪ, ಕಲ್ಲಪ್ಪ, ಕಾಳಪ್ಪ, ಕಾಳಮ್ಮ, ಹೀಗೆ ಕಾಲ (ದೇವ) ಕಾಲಿ (ದೇವಿ) ಆಗಿರುವುದು ಕಾಣುತ್ತದೆ. ಗೋವಳರಿಗೆ ಸಂಬಂಧಿಸಿದ ದೇವರು ಕಲ್ಲೇಶ್ವರ. ಹಾಲಿನ ದೇವರು, ಹಾಲಿನಲ್ಲಿ ಹುಟ್ಟಿದ ದೇವರು. ಕಲ್ಲೇಶ್ವರ ದೇವತಾ ಕಲ್ಪನೆಯು ವೇದಪೂರ್ವ ಕಾಲವೆಂದು ಹೇಳುವುದಕ್ಕೆ ಅಡ್ಡಿ ಇಲ್ಲವೆನ್ನಬಹುದು. ಹಾಲಿನೊಡನೆ ನಿಕಟ ಸಂಬಂಧ ವಿರುವ ವೃಷಭ. ವೃಷಭ ಈಶ್ವರನ ವಾಹನ. ಶಿವನು ಕಲ್ಲೇಶ್ವರ. ಹಾಲಿನ ದೇವರು ಹಾಲಿನಲ್ಲಿ ಹುಟ್ಟಿದ ದೇವರು. ಈರ್-ನೀರ್-ಆಲ್-ಪಾಲ್ ಇವು ಅಲ್ಲ-ಕಲ್ಲ ದೇವತೆಯ ಮೂಲಸ್ವರೂಪ ದರ್ಶನ ಮಾಡಿಸುವ ಪದಗಳು. ವೀರಪ್ಪ, ವೀರಭದ್ರಪ್ಪ, ಈರಪ್ಪ ಹೆಸರುಗಳು. ಗಿರಿರಾಜನ ಮಗಳು ಗಿರಿದೇವಿ ಆಗಬೇಕು ಆದುದರಿಂದ ಗಿರಿಯಪ್ಪ, ಗಿರಿಯಮ್ಮ. ಶಿವನು ಗೋವಳರ ದೇವತೆ. ಗೋರಸವೇ ಹಾಲು ಹಾಲಿಗೆ ಸಂಬಂಧಿಸಿದವರು ಇವರು ಕುರುಬರೂ ಇರಬಹುದು ದನಕಾರರೂ ಇರಬಹುದು. ಏನೇ ಆದರೂ ಹಾಲಿನ ಸಂಬಂಧವುಳ್ಳವರು. ಶೈವ ಸಂಸ್ಕೃತಿಯು ಆರ್ಯರಲ್ಲದ ದ್ರಾವಿಡ ಸಂಪ್ರದಾಯ. ಇವರು ಮೂರ್ತಿ ಪೂಜಕರೆಂದು ತಿಳಿದುಬರುತ್ತದೆ. ಹೀಗಿರುವಾಗ ಗೌಡರು ಬಹು ಪೂರ್ವಕಾಲದಲ್ಲಿ ಶಿವಪೂಜಕರೇ ಆಗಿರಬೇಕು. ಅದಕ್ಕೆ ಅವರ ಮದುವೆಗಳಲ್ಲಿರುವ ಗಂಗೆ ಪೂಜೆಯೇ ಉದಾಹರಣೆ.

ವೈಷ್ಣವ ಧರ್ಮಪ್ರತಾಪ ಬೆಳೆದನಂತರ ಅಂದರೆ ಕ್ರಿ. ಶ. ಹತ್ತನೆಯ ಶತಮಾನದಿಂದೀಚೆಗೆ ಇವರು ವೈಷ್ಣವ ಮತಾವಲಂಬಿಗಳಾಗಿರಬೇಕು. ವಿಷ್ಣುವಿನ ಆರಾಧನೆಯು ದಕ್ಷಿಣ ಭಾರತದಲ್ಲಿ ಬೆಳೆದುಬಂದದ್ದು ಶ್ರೀ ರಾಮಾನುಜಾಚಾರ್ಯರ ಕಾಲದಿಂದ ಈಚೆಗೆ 1300 ರಿಂದ 1550 ರವರೆಗೆ ವೈಷ್ಣವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹವಿತ್ತು. ವಿಜಯನಗರದ ಅರಸರು ವೈಷ್ಣವ ಮತಾವಲಂಬಿಗಳು.

ಕೃಷ್ಣದೇವರಾಯನಿಗೆ ತನ್ನ ಕುಲದೇವರಾದ ತಿರುಪತಿ ವೆಂಕಟೇಶ್ವರ ಸ್ವಾಮಿಯಲ್ಲಿ ಅಪಾರ ಭಕ್ತಿ ಇತ್ತು. ತಿರುಪತಿ ದೇವಸ್ಥಾನದ ಮುಂದೆ ತನ್ನ ಮತ್ತು ತನ್ನಿಬ್ಬರು ರಾಣಿಯರು, ತಿರುಮಲೆ ದೇವಿ ಮತ್ತು ಚಿನ್ನಾ ದೇವಿಯರ ತಾಮ್ರದ ಪ್ರತಿಮೆಗಳನ್ನು ಕೆತ್ತಿಸಿದ್ದಾನೆ. ಅದಲ್ಲದೆ ಯಥೇಚ್ಛವಾಗಿ ದಾನ ಧರ್ಮಗಳನ್ನು ಮಾಡಿದ್ದಾನೆ. ಆದುದರಿಂದ ಶಿವಪೂಜೆ ಮಾಡುತ್ತಿದ್ದ ಗೌಡರೂ ಸಹ 1300ರಿಂದ 1550 ರೊಳಗೆ ವೈಷ್ಣವ ಮತಾವಲಂಬಿಗಳಾಗಿ ಇವರ ಕುಲದೇವತೆಯೂ ಶ್ರೀ ವೆಂಕಟರಮಣನಾಗಿರುವುದಕ್ಕೆ ಕಾರಣವಾಗಿರಬೇಕು. ವಿಜಯನಗರ ಪತನವಾದನಂತರ ಇವರು ಪಶ್ಚಿಮದ ಕಡೆಗೆ ಬಂದಾಗ ಇಕ್ಕೇರಿ ವಂಶದ ರಾಜರ ಆಶ್ರಯವನ್ನು ಪಡೆದು ಐಗೂರು ಬಳಿ ಇರುವ ಊರುಗಳಲ್ಲಿ ನೆಲಸಿದಾಗ ಶೃಂಗೇರಿ ಜಗದ್ಗುರು ಶ್ರೀ ಶಂಕರಾಚಾರ್ಯರ ಉಪದೇಶದಂತೆ "ಸಬ್ಬಮ್ಮ" ದೇವರ ಪೂಜೆ ಮಾಡುವಂತೆ ಉಪದೇಶ ಮಾಡಿರಬೇಕು ಹಾಗೆ ಉಪದೇಶ ಮಾಡಿದುದರಿಂದ ಮದುವೆಗಳಲ್ಲಿ "ಸಬ್ಬಮ್ಮ" ದೇವರಿಗೆ ಹರಿಕೆ ಹಣ ಕಟ್ಟುವ ಪದ್ಧತಿ ಬಂದಿದೆ. ನಂತರ ದಕ್ಷಿಣ ಕನ್ನಡಜಿಲ್ಲೆಗೆ ಬಂದಾಗ ಅಲ್ಲಿನ ಕೆಲವು ದೇವತೆಗಳಾದ ಧರ್ಮದ ದೈವ, ವಿಷ್ಣುಮೂರ್ತಿ ಮುಂತಾದ ದೇವತೆಗಳನ್ನೂ ಕೊಡಗಿನಲ್ಲಿ ಅಲ್ಲಲ್ಲಿ ಇರುವ ಗ್ರಾಮದೇವತೆಗಳ ಆರಾಧನೆಯನ್ನೂ ಮಾಡತೊಡಗಿದರು. ಆದರೆ ಇಂದಿಗೂ ಇವರ ಕುಲದೈವ ಶ್ರೀ ವೆಂಕಟರಮಣ ಸ್ವಾಮಿಯ ಮುಡುಪನ್ನು ಇಟ್ಟು ವರ್ಷಕ್ಕೊಂದಾವರ್ತಿಯಾಗಲೀ ಎರಡು ವರ್ಷಕ್ಕೊಂದಾವರ್ತಿಯಾಗಲೀ ಹರಿಸೇವೆಯನ್ನು ಮಾಡುತ್ತಾರೆ. ಹೀಗೆ ಗೌಡರ ಸಂಸ್ಕೃತಿಯು ಒಂದೇ ಸ್ಥಳದ ಸಂಸ್ಕೃತಿಯಾಗಿರದೆ ಹಲವಾರು ಸ್ಥಳದ ಸಂಸ್ಕೃತಿಯ ಮಿಲನದ ಫಲವಾಗಿದೆ ಎಂದು ಹೇಳಬಹುದು.

## REFERENCES


ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ-ಶಂ.ಬಾ.ಜೋಶಿ
ತುಳುನಾಡು-ಪಿ. ಗುರುರಾಜರ ಭಟ್ಟರು.
ಹಾಲುಮತದರ್ಶನ ಶಂ. ಬಾ ಜೋಶಿ.
ಕೃಷ್ಣದೇವರಾಯ-ಶ್ರೀ ತ್ರಿವಿಕ್ರಮ.
ಶೋಭಾನೆಗಳು-
Thurston II 273
Vedic Index Vol I 216 x 252
Marriage and Family in India-K.M. Kapadia

# ಕೊಡಗಿನಲ್ಲಿ ಗೌಡ ಜನಾಂಗದವರು

ಲೇಖಕರು : **ಶ್ರೀ ಡಿ. ಎನ್. ಕೃಷ್ಣಯ್ಯ** ಎಂ.ಎ. ಬಿ.ಇಡಿ.



ಶ್ರೀ ಡಿ. ಎನ್. ಕೃಷ್ಣಯ್ಯ ಎಂ.ಎ.ಬಿ.ಇಡಿ.ರವರು ಕೊಡಗಿನ ಸರಕಾರಿ ಪ್ರೌಢಶಾಲೆ, ನಾಪೋಕ್ಲುವಿನಲ್ಲಿ ಮುಖ್ಯೋಪಾಧ್ಯಾಯರಾಗಿ ನಿವೃತ್ತರಾದವರು. ಅಧ್ಯಾಪಕರಾಗಿ ದುಡಿದ ಇವರು ಇತಿಹಾಸ ಸಂಶೋಧನೆಯಲ್ಲಿ ಅಪರಿಮಿತ ಉತ್ಸಾಹದಿಂದ ದುಡಿದಿದ್ದಾರೆ. ಕೊಡಗಿನ ಚರಿತ್ರೆಯೆಂದರೆ ಶ್ರೀ ಡಿ. ಎನ್. ಕೃಷ್ಣಯ್ಯನವರು, ಶ್ರೀ ಡಿ. ಎನ್. ಕೃಷ್ಣಯ್ಯನವರೆಂದರೆ ಕೊಡಗಿನ ಚರಿತ್ರೆ-ಎಂಬಷ್ಟು ಕೊಡಗಿನ ಇತಿಹಾಸದ ಮೇಲೆ ಪ್ರಭುತ್ವ ಸ್ಥಾಪಿಸಿದ್ದಾರೆ. ಇವರ "ಅಮರ ಸುಳ್ಯದ ಕಾಟಕಾಯಿ" ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸದ ಮೇಲೆ ಹೊಸಬೆಳಕನ್ನು ಚೆಲ್ಲಿದೆ. ಇತ್ತೀಚೆಗೆ ಇವರು "ಸುಂದರ ನಾಡ ಕೊಡಗು" ಎಂಬ ಪ್ರವಾಸಿ ಮಾರ್ಗದರ್ಶನ ಹೊತ್ತಿಗೆಯೊಂದನ್ನು ಪ್ರಕಟಿಸಿದ್ದಾರೆ. ಇವರಿಂದ ಬರೆದು ಪ್ರಕಟಗೊಂಡ ಕೊಡಗಿನ ಇತಿಹಾಸದ ನಾನಾ ಪುಸ್ತಕಗಳು ಹಲವಾರಿವೆ. ಈಗಿವರು ಕೊಡಗಿನ ಸಮಗ್ರ ಇತಿಹಾಸವನ್ನೊಳಗೊಂಡಿರುವ ಪುಸ್ತಕವೊಂದನ್ನು ಬರೆಯುತ್ತಿದ್ದಾರೆ. ಇವರು ಗೌಡ ಜನಾಂಗಕ್ಕೆ ಸೇರಿದವರಲ್ಲದಿದ್ದರೂ ನಮ್ಮ ಮೇಲಿನ ವಿಶ್ವಾಸದಿಂದ ಲೇಖನ ಬರೆದುಕೊಟ್ಟು ಉಪಕರಿಸಿ ಈ ಸಂಚಿಕೆಯ ಮೌಲ್ಯವನ್ನು ಹೆಚ್ಚಿಸಿದ್ದಾರೆ. ಇವರು ಬರೆದು ಪ್ರಕಟಿಸಲಿರುವ ಪುಸ್ತಕಕ್ಕೆ ಎಲ್ಲರೂ ಪ್ರೋತ್ಸಾಹ ನೀಡಬೇಕೆಂದು ಆಶಿಸುತ್ತೇವೆ.

**–ಸಂ.**

ಕೊಡಗಿನಲ್ಲಿ ನೆಲೆಸಿರುವ ಹಲವು ಮತಗಳ ಮತ್ತು ಕೋಮುಗಳ ಜನರಲ್ಲಿ ಗೌಡರೂ ಒಂದು ಮುಖ್ಯಜನಾಂಗ. ಸಾವಿರದ ಒಂಭೈನೂರ ಮೂವತ್ತೊಂದನೆ ವರ್ಷ ಸರಕಾರದವರು ನಡೆಸಿದ ಜನಗಣತಿಯ ಮೇರೆಗೆ ಆ ವರ್ಷ ಕೊಡಗಿನಲ್ಲಿ ಗೌಡಜನಾಂಗದವರ ಸಂಖ್ಯೆಯು 14,016. ಆಗ ಇವರಲ್ಲಿ 7388 ಗಂಡಸರೂ 6628 ಹೆಂಗಸರೂ ಇದ್ದರು. ಜನಗಣತಿಯಲ್ಲಿ ದೇಶದ ವಿವಿಧ ಕೋಮುಗಳ ಜನರ ಸಂಖ್ಯೆಯನ್ನು ತೆಗೆದುಕೊಂಡುದುದು ಕೊನೆಯ ಬಾರಿಗೆ 1931ರ ಜನಗಣತಿಯಲ್ಲೇ. ಅನಂತರದ ಜನಗಣತಿಗಳಲ್ಲಿ ಹಿಂದೂ ಧರ್ಮವನ್ನು ಅವಲಂಬಿಸಿರುವ ಎಲ್ಲಾ ಕೋಮುಗಳ ಜನರ ಸಂಖ್ಯೆಯನ್ನು ಒಟ್ಟಾಗಿ ಕೊಡಲ್ಪಟ್ಟಿದೆ.

ಕೊಡಗಿನ ವಿವಿಧ ಕೋಮುಗಳ ಜನರ ಸಂಖ್ಯೆಯನ್ನು ಪರಿಗಣಿಸಿದರೆ ಗೌಡ ಕೋಮಿನವರು ನಾಲ್ಕನೆಯವರಾಗಿ ಬರುತ್ತಾರೆ. 1931ನೇ ಇಸವಿಯ ಜನಗಣತಿಯಲ್ಲಿ ಕೊಡವರ ಸಂಖ್ಯೆ 41,026 ಆಗಿತ್ತು. ಕೊಡವರ ನಂತರ ಸಂಖ್ಯೆಯಲ್ಲಿ ಅನುಕ್ರಮವಾಗಿ ಹರಿಜನರೂ ಗಿರಿಜನರೂ ಗೌಡ ಜನಾಂಗದವರೂ ಮುಸಲ್ಮಾನರೂ ಬರುವರು. 1931ರಲ್ಲಿ ಕೊಡಗಿನ ಒಟ್ಟು ಜನಸಂಖ್ಯೆಯು 1-63,327 ಆಗಿತ್ತು. 1961ನೇ ಇಸವಿ ಜನಗಣತಿಯಲ್ಲಿ ಕೊಡಗಿನ ಜನಸಂಖ್ಯೆಯು 321,516ಕ್ಕೆ ಏರಿದೆ. 1967ರಲ್ಲಿ ಕೊಡಗಿನ ಜನಸಂಖ್ಯೆಯು ನಾಲ್ಕು ಲಕ್ಷಕ್ಕೆ ತಲುಪಿರಬಹುದೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. 1951ರಲ್ಲಿ ಕೊಡಗಿನ ಜನಸಂಖ್ಯೆಯು 230,405 ಇದ್ದು 1961ಕ್ಕೆ 321,516ಕ್ಕೆ ಏರಿತು. ಈ ಏರಿಕೆಯು 100ಕ್ಕೆ 40.1 ರಷ್ಟು ಆಗುತ್ತದೆ. 1951 ರಿಂದ 1967ರವರೆಗೆ ಕೊಡಗಿನ ಜನಸಂಖ್ಯೆಯು ನಾಲ್ಕು ಲಕ್ಷಕ್ಕೆ ತಲುಪಿರಬಹುದೆಂದು ಊಹಿಸಲಾಗಿದೆ. ಈ ಏರಿಕೆಯು ಪ್ರಮಾಣದಲ್ಲಿ 1967 ರಲ್ಲಿ ಗೌಡ ಜನಾಂಗದವರ ಸಂಖ್ಯೆಯು ಮೂವತ್ತು ಸಾವಿರವನ್ನು ತಲುಪಿರಬಹುದೆಂದು ಊಹಿಸಬಹುದು.

ಕೊಡಗಿನಲ್ಲಿರುವ ಗೌಡ ಜನಾಂಗದವರು ಪೂರ್ವದಿಂದಲೂ ಇಲ್ಲಿ ನೆಲೆಸಿದವರೇ ಅಥವಾ ಹೊರಜಿಲ್ಲೆಗಳಿಂದ ಕಾಲಕ್ರಮೇಣ ಇಲ್ಲಿಗೆ ಬಂದು ನೆಲೆಸಿದವರೇ ಎಂದು ಚಾರಿತ್ರಿಕವಾಗಿ ಪರಿಶೀಲಿಸಿದರೆ ಅವರು ಈಗ್ಗೆ ಮುನ್ನೂರು ವರ್ಷಗಳಿಂದೀಚೆಗೆ ಕೊಡಗಿಗೆ ಬಂದು ನೆಲಸಿದಂತೆ ತೋರುತ್ತದೆ. ಕೊಡಗಿನಲ್ಲಿ ಈಗ ನೆಲೆಸಿರುವ ವಿವಿಧ ಕೋಮುಗಳ ಜನರಲ್ಲಿ ಕೊಡಗು ಭಾಷೆಯನ್ನು ಮಾತನಾಡುವ ಹರಿಜನರು ಮಾತ್ರ ಕೊಡಗಿನ ಮೂಲನಿವಾಸಿಗಳೆಂದು ಮಾನವ ಕುಲ ಶಾಸ್ತ್ರಜ್ಞರೂ ಚರಿತ್ರಕಾರರೂ ಅಭಿಪ್ರಾಯ ಪಡುತ್ತಾರೆ. ಕೊಡಗಿನ ಉಳಿದ ಎಲ್ಲಾ ಜನರು ಬೇರೆ ಬೇರೆ ಕಾಲಗಳಲ್ಲಿ ಕೊಡಗನ್ನು ಪ್ರವೇಶಿಸಿ ಇಲ್ಲಿ ನೆಲೆಸಿರುವರೆಂಬುದು ಕೊಡಗಿನ ಚರಿತ್ರೆಯಿಂದ ತಿಳಿದುಬರುತ್ತದೆ. ಕೊಡಗಿನಲ್ಲಿ ಮುಖ್ಯ ಜನಾಂಗವಾದ ಕೊಡಗರ ಉಲ್ಲೇಖವು 1174ನೇ ಇಸವಿಯ ಹೊಯ್ಸಳರ ಶಾಸನದಲ್ಲಿ ಮೊದಲನೆಯ ಬಾರಿಗೆ ಕಂಡುಬರುತ್ತದೆ. ಈ ಶಾಸನದಲ್ಲಿ ಎಲ್ಲಾ ನಾಡ ಕೊಡಗರು ಹೊಯ್ಸಳ ಸೇನಾಧಿಪತಿ ಬೆಟ್ಟರಸನೊಡನೆ ಯುದ್ಧ ಮಾಡಲು ಚಂಗಾಳ್ವ ಪೆಮ್ಮವೀರಪ್ಪನಿಗೆ ಸಹಾಯ ಮಾಡಿದರೆಂದು ಬರೆದಿದೆ. ಆ ಶಾಸನದಲ್ಲಿ 'ಎಲ್ಲಾ ನಾಡ ಕೊಡಗರು' ಎಂದು ಬರೆದಿರುವಾಗ ಕೊಡಗರು ಈ ಶಾಸನದ ಸಮಯಕ್ಕಿಂತ ಕೆಲವು ಶತಮಾನಗಳ ಹಿಂದೆ ಉತ್ತರದಿಂದ ಬಂದು ನೆಲೆಸಿದಂತೆ ತೋರುತ್ತದೆ. ಕೊಡಗಿನ ಹಿಂದಿನ ಇತರ ಶಾಸನಗಳಲ್ಲಿ ಬರುವ ಹೆಸರುಗಳು ಧರ್ಮಶೆಟ್ಟಿ, ವಲ್ಲಭಶೆಟ್ಟಿ ಹುಲ್ಲಗೌಡ, ಸಿದ್ದೇಗೌಡ, ಲಿಂಗೇಗೌಡ, ಈರಮ್ಮ ಎಂಬುದಾಗಿರುವುದರಿಂದ ಈ ಜನರು ಜೈನಶೆಟ್ಟಿಗಳು ಮತ್ತು ಮೈಸೂರು ಕಡೆಯ ಲಿಂಗಾಯಿತ ಗೌಡರು ಎಂದು ಊಹಿಸಬಹುದು; ಏಕೆಂದರೆ ಕೊಡಗಿನಲ್ಲಿ ಸುಮಾರು 1400 ರವರೆಗೆ ಆಳಿದ ಅರಸರು ಮತ್ತು ನಾಯಕರು ಮೊದಲು ಜೈನರಾಗಿದ್ದರು, ಆ ನಂತರ ಲಿಂಗಾಯಿತರಾದರು.

ಕೊಡಗಿನಲ್ಲಿರುವ ಗೌಡ ಜನಾಂಗದವರು ಹಿಂದೂಗಳಾಗಿದ್ದು ವೆಂಕಟರಮಣ ದೇವರನ್ನು ತಮ್ಮ ಕುಲದೇವತೆಯೆಂದು ಪೂಜಿಸುವುದರಿಂದ ಇವರು ಶಾಸನಗಳುಲ್ಲ ಹೇಳಿರುವ ಯಾವ ಜನಾಂಗಕ್ಕೂ ಸೇರಿರುವುದಿಲ್ಲ. ಕೊಡಗಿನಲ್ಲಿ ಗೌಡ ಜನಾಂಗದವರನ್ನೇ ತುಳು ಗೌಡರೆಂದೂ ಕರೆಯುವುದು ವಾಡಿಕೆಯಾಗಿದೆ. ಇದಕ್ಕೆ ಕಾರಣ ಇವರ ಪೂರ್ವಿಕರು ಈಗ್ಯೆ ಮುನ್ನೂರು ವರ್ಷಗಳಿಂದೀಚೆಗೆ ಕೊಡಗಿಗೆ ಪಶ್ಚಿಮ ಘಟ್ಟಗಳ ಕೆಳಗಿನ ತುಳು ನಾಡೆಂದು ಕರೆಯಲ್ಪಡುವ ದಕ್ಷಿಣ ಕನ್ನಡ ಜಿಲ್ಲೆಯಿಂದ ಕೊಡಗಿಗೆ ಬಂದು ನೆಲಸಿದ್ದೇ ಆಗಿದೆ.

ಕೊಡಗಿಗೆ ಗೌಡ ಜನಾಂಗದವರು ತುಳು ನಾಡೆಂದು ಕರೆಯಲ್ಪಡುವ ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದು ನೆಲೆಸಲು ಕಾರಣವೇನು ? ಗೌಡ ಜನಾಂಗದವರ ಮೂಲಸ್ಥಾನವು ದಕ್ಷಿಣ ಕನ್ನಡ ಜಿಲ್ಲೆಯೇ ಅಥವಾ ಅಲ್ಲಿಗಾದರೂ ಅವರು ಬೇರೆ ಜಿಲ್ಲೆಗಳಿಂದ ಬಂದವರೇ ಎಂದು ಪರಿಶೀಲಿಸುವುದರಿಂದ ಗೌಡ ಜನಾಂಗದ ಮೇಲೆ ಹೆಚ್ಚು ಬೆಳಕನ್ನು ಚೆಲ್ಲಿದಂತಾಗುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯನ್ನು ಕ್ರಿಸ್ತಶಕದ ಆದಿ ಶತಮಾನಗಳಲ್ಲಿ ತೌಳವ ಎಂದು ಕರೆಯುತ್ತಿದ್ದರು ಎಂದು ಚರಿತ್ರೆಯಲ್ಲಿ ಉಲ್ಲೇಖವಿದೆ. ಈ ಪದದಿಂದಲೇ ತುಳು

ನಾಡು ಎಂಬ ಹೆಸರು ಈಗಿನ ದಕ್ಷಿಣ ಕನ್ನಡ ಜಿಲ್ಲೆಗೆ ಬಂತು. ಆದಿಯಲ್ಲಿ ಕೊರಗರು ತುಳುನಾಡನ್ನು ಆಳುತ್ತಿದ್ದರೆಂದು ಚರಿತ್ರೆಯಲ್ಲಿ ಹೇಳಿದೆ. ಈ ಕೊರಗರು ತುಳು ಮಾತನ್ನಾಡುತ್ತಿದ್ದುದರಿಂದ ಅವರಾಳುತ್ತಿದ್ದ ನಾಡಿಗೆ ತುಳು ನಾಡೆಂದು ಹೆಸರು ಬಂತು. ಆ ಸಮಯದಲ್ಲಿ ಘಟ್ಟಗಳಿಗೆ ಮುಟ್ಟಿಕೊಂಡಿದ್ದ ತುಳು ನಾಡಿನ ಪೂರ್ವ ಸರಹದ್ದಿನ ಸೀಮೆಯು ಆ ದಟ್ಟವಾದ ಅರಣ್ಯಗಳಿಂದ ತುಂಬಿಕೊಂಡಿದ್ದುದರಿಂದ ತುಳು ನಾಡಿನ ಆ ಸೀಮೆಯಲ್ಲಿ ಜನವಸತಿಯಿದ್ದಂತೆ ತೋರುವುದಿಲ್ಲ. ಜಿಲ್ಲೆಯಲ್ಲಿ ಜನಸಂಖ್ಯೆಯೂ ಕಮ್ಮಿಯಿದ್ದುದರಿಂದ ಇದ್ದ ಜನರು ಫಲವತ್ತಾದ ಪಶ್ಚಿಮದ ಕರಾವಳಿಯ ಪ್ರದೇಶದಲ್ಲೇ ಹೆಚ್ಚಾಗಿ ನೆಲೆಸಿದ್ದರು. ಕೆಲವು ಶತಮಾನಗಳ ನಂತರ ಜೈನರು ದಕ್ಷಿಣ ಕನ್ನಡದ ಹೆಚ್ಚಿನ ಭಾಗವನ್ನು ಆಳತೊಡಗಿದರು. ಇವರು ಮೊದಲು ಕನ್ನಡಿಗರಾಗಿದ್ದರೂ ತುಳು ನಾಡಿನಲ್ಲಿ ತುಳುವನ್ನು ತಮ್ಮ ಮನೆ ಮಾತಾಗಿ ಮಾಡಿಕೊಂಡರು. ದಕ್ಷಿಣ ಕನ್ನಡದ ಜೈನಅರಸರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ಮೇಲೆ ಅದರ ಮಾಂಡಲಿಕರಾಗಿಯೂ ಅದರ ಪತನದ ನಂತರ ಪ್ರಬಲರಾದ ಇಕ್ಕೇರಿಯ ನಾಯಕರ ಆಶ್ರಿತ ರಾಜರಾಗಿಯೂ ಇದ್ದರು. ಇಕ್ಕೇರಿ ನಾಯಕರು ದಕ್ಷಿಣ ಕನ್ನಡದ ಘಟ್ಟ ಸರಹದ್ದಿನ ಪ್ರದೇಶವನ್ನು ತಾವೇ ಸ್ವತಃ ಆಳುತ್ತಿದ್ದಂತೆ ತೋರುತ್ತದೆ.

ಇಕ್ಕೇರಿ ನಾಯಕರು ದಕ್ಷಿಣ ಕನ್ನಡ ಜಿಲ್ಲೆಯ ಅಧಿರಾಜನಾದಮೇಲೆ ತಮ್ಮ ಇಕ್ಕೇರಿ ಸಂಸ್ಥಾನದಿಂದ ಗೌಡ ಜನಾಂಗದವರನ್ನು ದಕ್ಷಿಣ ಕನ್ನಡ ಘಟ್ಟದ ಸರಹದ್ದು ಪ್ರದೇಶಕ್ಕೆ ತಂದು ಅಲ್ಲಿ ಭೂಮಿ ಕೊಟ್ಟು ನಿಲ್ಲಿಸಿದರೆಂಬ ಹೇಳಿಕೆಯಿದೆ. ಇದೇ ಸಮಯದಲ್ಲಿ ಅಲ್ಲಿಗೆ ಇಕ್ಕೇರಿಯಿಂದ ಹವ್ಯಕ ಬ್ರಾಹ್ಮಣರನ್ನು ತಂದಂತೆ ಕಾಣುತ್ತದೆ, ಹವ್ಯಕ ಬ್ರಾಹ್ಮಣರು ಈಗಿನ ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಿಂದ ಈ ಮೊದಲೇ ಕರಾವಳಿಯ ತಾಲ್ಲೂಕುಗಳಿಗೆ ಬಂದು ನೆಲೆಸಿದ್ದರು. ಗೌಡ ಜನಾಂಗದವರೂ ಹವ್ಯಕ ಬ್ರಾಹ್ಮಣರೂ ಭತ್ತದ ಗದ್ದೆ ಮತ್ತು ತೋಟದ ವ್ಯವಸಾಯಗಳಲ್ಲಿ ಬಹಳ ನುರಿತವರಾಗಿದ್ದುದರಿಂದ ಅವರನ್ನು ದಕ್ಷಿಣ ಕನ್ನಡ ಜಿಲ್ಲೆಯ ಜನವಿರಳ ಘಟ್ಟದ ಸರಹದ್ದಿನ ಪ್ರದೇಶದಲ್ಲಿ ನೆಲೆಸಲು ಇಕ್ಕೇರಿ ನಾಯಕರು ಪ್ರೋತ್ಸಾಹಿಸಿರಬೇಕು. ಗೌಡರು ಎಂದರೆ ಭೂಮಿಗೆ ಒಡೆಯರು. ಊರಿಗೆ ಮುಖ್ಯಸ್ಥರು ಎಂದರ್ಥ. ಗೌಡ ಜನಾಂಗದವರೆಲ್ಲರೂ ಭೂಮಾಲಿಕರಾಗಿದ್ದುದರಿಂದ ಅವರಿಗೆ ಗೌಡರೆಂಬ ಹೆಸರು ಬಂದಿರಬೇಕು.

ದಕ್ಷಿಣಕನ್ನಡದ ನಿವಾಸಿಗಳಾದ ಹವ್ಯಕಬ್ರಾಹ್ಮಣರೂ ಕೋಟ ಬ್ರಾಹ್ಮಣರೂ ಹಳಗನ್ನಡವನ್ನು ಮನೆಯಲ್ಲಿ ಮಾತನಾಡುತ್ತಾರೆ. ಗೌಡ ಜನರು ಕನ್ನಡದ ಒಂದು ರೂಪಾಂತರ ಮಾತನ್ನು ಮನೆಯಲ್ಲಿ ಆಡುತ್ತಾರೆ. ಉಳಿದ ಜನರೆಲ್ಲರೂ ತುಳು, ಕೊಂಕಣಿ, ಮರಾಠಿ, ಹಿಂದುಸ್ಥಾನಿ, ತುಳು, ಕನ್ನಡ ಮಿಶ್ರವಾದ ಮಲೆಯಾಳವನ್ನು ಮನೆಮಾತಾಗಿ ಆಡುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೌಡ ಜನಾಂಗದವರು ನೆಲೆಸಿರುವುದು ಮುಖ್ಯವಾಗಿ ಸುಳ್ಯ, ಪುತ್ತೂರು ತಾಲ್ಲೂಕುಗಳಲ್ಲೇ ಆಗಿದೆ. ಆ ತಾಲ್ಲೂಕುಗಳಿಂದ ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಮತ್ತು ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಇವರು ಕೊಡಗಿಗೆ ಬಂದು ನೆಲೆಸಿರುವುದು ಹಳೆಯ ದಾಖಲೆಗಳಿಂದ ತಿಳಿದುಬರುತ್ತದೆ.

ದಕ್ಷಿಣಕನ್ನಡ ಜಿಲ್ಲೆಯ ಈಗಿನ ಪುತ್ತೂರು ಸುಳ್ಯ ತಾಲೂಕುಗಳಿಂದ ಕೊಡಗಿಗೆ ಗೌಡ ಜನಾಂಗದವರು ಬಂದು ಇಲ್ಲಿ ನೆಲೆಸುವಂತೆ ಮಾಡಿದವನು ಕೊಡಗಿನ ಹಾಲೇರಿ ಅರಸರಲ್ಲಿ ಪ್ರಖ್ಯಾತನಾದ ದೊಡ್ಡ ವೀರ ರಾಜೇಂದ್ರ ಒಡೆಯನು. ಇದರ ಹಿನ್ನೆಲೆಯು ಹೀಗಿದೆ. ಈಗಿನ ಸುಳ್ಯ ಮತ್ತು ಅಮರ ಮಾಗಣೆಗಳು ಸುಮಾರು 1700ರಲ್ಲಿ ಕೊಡಗಿನ ಆಗಿನ ರಾಜ ದೊಡ್ಡವೀರಪ್ಪ ಒಡೆಯನಿಗೆ ಇಕ್ಕೇರಿಯ ಸೋಮಶೇಖರ ನಾಯಕರಿಂದ ಕೊಡಲ್ಪಟ್ಟವು. ಈ ಎರಡು ಮಾಗಣೆಗಳು ಆ ಸಮಯದಿಂದ 1775ರವರೆಗೆ ಕೊಡಗು ರಾಜರ ಸ್ವಾಧೀನದಲ್ಲಿದ್ದವು. ಈ ಸಮಯದಲ್ಲಿ ಅಮರ ಸುಳ್ಯದ ಜನರೆಲ್ಲರೂ ಕೊಡಗು ರಾಜರ ಪ್ರಜೆಗಳಿಗೆ ಘಟ್ಟದ ಮೇಲೆ ನೆಲೆಸಲು ಪ್ರೋತ್ಸಾಹವಾಗಲೀ, ಒತ್ತಾಯವಾಗಲೀ ರಾಜರ ಕಡೆಯಿಂದ ಇರಲಿಲ್ಲ. 1775ರಲ್ಲಿ ಮೈಸೂರಿನ ಹೈದರನ

ಖಾನನು ಅಮರಸುಳ್ಯ ಪಾಗಣೆಗಳನ್ನು ಕೊಡಗು ರಾಜರಿಂದ ಕಿತ್ತುಕೊಂಡನು ಮತ್ತು 1780 ರಲ್ಲಿ ಕೊಡಗಿನ ರಾಜಕುಮಾರ ವೀರರಾಜೇಂದ್ರ ಒಡೆಯನನ್ನು ಸೆರೆಯಲ್ಲಿ ಇಟ್ಟು ಕೊಡಗನ್ನೂ ತನ್ನ ಸ್ವಾಧೀನ ಮಾಡಿಕೊಂಡನು.

ಹೈದರಲ್ಲಿಯ ಮರಣಾನಂತರ ಅವನ ಉತ್ತರಾಧಿಕಾರಿಯಾಗಿದ್ದ ಟಿಪ್ಪುಸುಲ್ತಾನನ ಆಳ್ವಿಕೆಯನ್ನು ವಿರೋಧಿಸಿ ಕೊಡಗರು ಅನೇಕ ಭಾರಿ ಕೊಡಗಿನಲ್ಲಿ ದಂಗೆಯೆದ್ದರು. ಇದರಿಂದ ಟಿಪ್ಪುಸುಲ್ತಾನನು ಕೊಡಗಿನ ಜನರ ಮೇಲೆ ಸಿಟ್ಟಾಗಿ 1785ರಲ್ಲಿ ತಾನೇ ಕೊಡಗಿಗೆ ದೊಡ್ಡ ದಂಡು ತೆಗೆದುಕೊಂಡು ಬಂದು ಕೊಡಗಿನ ಜನರನ್ನೆಲ್ಲಾ ಬಲಾತ್ಕಾರದಿಂದ ಹಿಡಿಸಿ ಭಾಗ ಮಂಡಲದ ಹತ್ತಿರದ ದೇವಟುಪರಂಬಿನಲ್ಲಿ ಸೇರಿಸಿ ಅಲ್ಲಿಂದ ಅವರನ್ನು ಶ್ರೀರಂಗಪಟ್ಟಣಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಮುಸಲ್ಮಾನರನ್ನಾಗಿ ಮತಾಂತರಿಸಿದನು; ಆ ನಂತರ ಅವರಲ್ಲಿ ದೃಢಕಾಯರಾದ ಗಂಡಸರನ್ನು ಅವರ ಹೆಂಗಸರು ಮಕ್ಕಳ ಸಹಿತ ಶ್ರೀರಂಗಪಟ್ಟಣದಲ್ಲಿ ಇಟ್ಟು ಕೊಂಡು ಉಳಿದವರನ್ನು ತನ್ನ ರಾಜ್ಯದ ವಿವಿಧ ಭಾಗಗಳಿಗೆ ಕಳುಹಿಸಿದನು. ಹೀಗೆ ಟಿಪ್ಪುಸುಲ್ತಾನನು ಕೊಡಗಿನಿಂದ ತೆಗೆದುಕೊಂಡು ಹೋದ ಜನರ ಸಂಖ್ಯೆ 80 ಸಾವಿರವೆಂದು ಟಿಪ್ಪುಸುಲ್ತಾನನ ಚರಿತ್ರಕಾರ ಮಿರ್‌ಹುಸೇನ್ ಆಲಿ ಕಿರ್ಮಾನಿಯು ಬರೆಯುತ್ತಾನೆ.

ಇಷ್ಟು ದೊಡ್ಡ ಸಂಖ್ಯೆಯ ಜನರು ಕೊಡಗಿನಿಂದ ಮೈಸೂರಿಗೆ ತೆಗೆದುಕೊಂಡು ಹೋಗಲ್ಪಟ್ಟ ಮೇಲೆ ಇಲ್ಲಿನ ಭೂಮಿಗಳಲ್ಲಿ ಹೆಚ್ಚಿನವು ವ್ಯವಸಾಯ ಮಾಡುವವರಿಲ್ಲದೆ ಪಾಳು ಬಿದ್ದವು. ಈ ಸ್ಥಿತಿಯು 1788ನೇ ಡಿಸೆಂಬರ್ ತಿಂಗಳಲ್ಲಿ ದೊಡ್ಡ ವೀರರಾಜೇಂದ್ರನು ಪೆರಿಯಾಪಟ್ಟಣದ ಕೋಟೆಯಿಂದ ತಪ್ಪಿಸಿಕೊಂಡು ಕೊಡಗಿಗೆ ಬರುವಾಗ ಇತ್ತು. ದೊಡ್ಡ ವೀರರಾಜೇಂದ್ರ ಒಡೆಯ ಕೊಡಗಿಗೆ ಬಂದು ಎರಡು ವರ್ಷಗಳಲ್ಲಿ ಪುಲಿಕಾಡುಗಳನ್ನು ಸೇರಿದ್ದ ಕೊಡಗು ಜನರನ್ನು ಒಟ್ಟು ಸೇರಿಸಿ ಅವರ ಸಹಾಯದಿಂದ ಸುಲ್ತಾನನ ಜನರನ್ನು ಓಡಿಸಿ ಕೊಡಗನ್ನು ತನ್ನ ಸ್ವಾಧೀನ ಪಡಿಸಿಕೊಂಡನು. ಇದಾದನಂತರ ಇಂಗ್ಲೀಷರಿಗೂ ಟಿಪ್ಪುಸುಲ್ತಾನನಿಗೂ ನಡೆದ 1792 ಮತ್ತು 1799ನೇ ಇಸವಿಯ ಯುದ್ಧಗಳಲ್ಲಿ ವೀರರಾಜೇಂದ್ರ ಒಡೆಯನು ಇಂಗ್ಲೀಷರಿಗೆ ನಾನಾ ವಿಧಗಳ ಸಹಾಯವನ್ನು ಮಾಡಿದನು. 1792ರ ನಂತರ ಇಂಗ್ಲೀಷರ ಮಧ್ಯಸ್ಥಿಕೆಯಿಂದ ಅಮರ ಸುಳ್ಯ ಮಾಗಣೆಗಳು ವೀರರಾಜೇಂದ್ರನ ವಶಕ್ಕೆ ಬಂದವು. ಆಗ ವೀರ ರಾಜೇಂದ್ರನು ಅಮರ ಸುಳ್ಯಗಳಲ್ಲಿದ್ದ ಗೌಡ ಜನಾಂಗದವರನ್ನು ಕೊಡಗಿಗೆ ಬಂದು ಇಲ್ಲಿ ಪಾಳು ಬಿದ್ದಿದ್ದ ಭೂಮಿಗಳಲ್ಲಿ ನೆಲೆಸುವಂತೆ ಒತ್ತಾಯಿಸಿದನು. ಇಷ್ಟು ಮಾತ್ರವಲ್ಲದೆ ಇಂಗ್ಲೀಷರಿಗೂ ಸುಲ್ತಾನನಿಗೂ ನಡೆದ ಕೊನೆಯ ಯುದ್ಧದ ದಿವಸಗಳಲ್ಲಿ ವೀರ ರಾಜೇಂದ್ರ ಒಡೆಯನು ಇಂಗ್ಲೀಷರ ಸಹಾಯಾರ್ಥವಾಗಿ ಟಿಪ್ಪುಸುಲ್ತಾನನಿಗೆ ಸೇರಿದ ದಕ್ಷಿಣ ಕನ್ನಡ ಸೀಮೆಗಳನ್ನೂ ಹಾಸನ ಜಿಲ್ಲೆಯ ಮಂಜರಾಬಾದು ಅರ್ಕಲಗೋಡು ಸೀಮೆಗಳನ್ನು ಹಿಡಿದುಕೊಂಡಿದ್ದನು. ಈ ಸೀಮೆಗಳಲ್ಲಿ ಪ್ರತಿ ಹಳ್ಳಿಯಿಂದ ಗಂಡಸರು ಹೆಂಗಸರು ಮಕ್ಕಳು ಸೇರಿ ಹದಿನೈದು ಜನರಂತೆ ಕೊಡಗಿನಲ್ಲಿ ಬಂದು ನೆಲಸಲು ಅವರನ್ನು ಬಲತ್ಕಾರವಾಗಿ ಹಿಡಿದು ತರಲು ದೊಡ್ಡ ವೀರರಾಜೇಂದ್ರ ಒಡೆಯನು ಆಯಾಯ ಪ್ರದೇಶಗಳಿಗೆ ದಂಡು ತೆಗೆದುಕೊಂಡು ಹೋಗಿದ್ದ ಅಧಿಕಾರಿಗಳಿಗೆ ಅಪ್ಪಣೆ ಮಾಡಿದ್ದನು. ಹೀಗೆ ಕೊಡಗಿನ ಹೊರಪ್ರದೇಶಗಳಿಂದ ಕೊಡಗಿಗೆ ತರಲ್ಪಟ್ಟ ಜನರಲ್ಲಿ ದಕ್ಷಿಣ ಕನ್ನಡದ ಗೌಡ ಜನರೂ ಇದ್ದರು. ಹೊರಪ್ರದೇಶಗಳಿಂದ ತರಲ್ಪಟ್ಟ ಎಲ್ಲಾ ಜನರಿಗೆ ದೊಡ್ಡ ವೀರರಾಜೇಂದ್ರ ಒಡೆಯನು ಭೂಮಿಯನ್ನು ಜಮ್ಮ ಮತ್ತು ಉಂಬಳಿಯಾಗಿ ಕೊಟ್ಟನು. ಕೊಡಗಿನಲ್ಲಿ ಗೌಡ ಜನರು ದಕ್ಷಿಣ ಕನ್ನಡ ಜಿಲ್ಲೆಯ ಗಡಿಗೆ ಮುಟ್ಟಿಕೊಂಡಿರುವ ಭಾಗಮಂಡಲ ನಾಡು, ನಾಪೊಕ್ಲುನಾಡು, ಮಡಿಕೇರಿ ನಾಡುಗಳಲ್ಲಿ ಹೆಚ್ಚಾಗಿ ನೆಲೆಸಿರುವುದು ಕಂಡುಬರುತ್ತದೆ. ಕೆಲವು ಗೌಡ ಕುಟುಂಬಗಳು ವೀರಾಜಪೇಟೆ ನಾಡಿನ ಪಶ್ಚಿಮ ಭಾಗದಲ್ಲಿಯೂ ಇವೆ. ಭಾಗಮಂಡಲನಾಡು ನಾಪೊಕ್ಲುನಾಡು ಮತ್ತು ಮಡಿಕೇರಿ ನಾಡುಗಳಲ್ಲಿ ಗೌಡ ಜನಾಂಗದವರು ಹೆಚ್ಚಾಗಿ ನೆಲೆಸಿರುವುದಕ್ಕೆ ಎರಡು ಕಾರಣಗಳು ಕಂಡುಬರುತ್ತವೆ. ಒಂದು-ಈ ನಾಡುಗಳಿಂದಲೇ ಕೊಡಗರನ್ನು ಟಿಪ್ಪುಸುಲ್ತಾನನು ಹೆಚ್ಚಿನ ಸಂಖ್ಯೆಯಲ್ಲಿ ಶ್ರೀರಂಗಪಟ್ಟಣಕ್ಕೆ ತೆಗೆದುಕೊಂಡು ಹೋಗಿದ್ದನು ಎರಡನೇಯದಾಗಿ ದಕ್ಷಿಣ ಕನ್ನಡ ಜಿಲ್ಲೆಯಿಂದ ಕೊಡಗಿಗೆ ಬಂದ ಅಥವಾ ತರಲ್ಪಟ್ಟ ಗೌಡ ಜನರು ತೊಡಿಕಾನ ಮಾರ್ಗವಾಗಿ ಘಟ್ಟ ಹತ್ತಿ ಕೊಡಗಿಗೆ ಬಂದಾಗ ಅವರು ಮೊದಲು

ಬಂದದ್ದು ಭಾಗಮಂಡಲ ನಾಡಿಗೆ. ಅಲ್ಲಿಂದ ಅವರು ನಾಪೊಕ್ಲು ನಾಡಿಗೂ ಇತರ ನಾಡುಗಳಿಗೂ ಹೋಗಿ ಅಲ್ಲಿ ಪಾಳು ಬಿದ್ದಿದ್ದ ಭೂಮಿಗಳಲ್ಲಿ ನಿಂತರು. ಸಂಪಾಜೆ ಕಣಿವೆ ಮಾರ್ಗವಾಗಿ ಬಂದವರು ಹೆಚ್ಚಾಗಿ ಮಡಿಕೇರಿ ನಾಡಿನಲ್ಲಿ ನೆಲೆಸಿದರು. ಹೀಗೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಕೊಡಗಿಗೆ ಬಂದು ನೆಲೆಸಿದ ಗೌಡ ಜನಾಂಗದವರು 1799ರಿಂದ 1808ರವರೆಗೆ ಹೆಚ್ಚಾಗಿ ನೆಲೆಸಿದರು. ಅವರು ನೆಲೆನಿಂತ ಭೂಮಿಗಳನ್ನು ಅವರಿಗೆ ಜಮ್ಮ ಅಥವ ಉಂಬಳಿಯಾಗಿ, ವೀರರಾಜೇಂದ್ರ ಒಡೆಯನು 1800ರಲ್ಲಿ ಕೊಟ್ಟನು. ಹಾಗೆ ಅವರಿಗೆ ಭೂಮಿ ಕೊಟ್ಟ ಸಂಬಂಧದ ನಿರೂಪಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿರುವೆನು.

ಮಹಾರಾಜ ವೀರರಾಜೇಂದ್ರ ಒಡೆಯರ ಸಂಸ್ಥಾನ ಕೊಡಗು. ಬೆಂಗನಾಡ ಶೆಟ್ಟಿವಮಾನಿ ನಾಟ ಪೈಕಿ ಕುಂದ ಚ್ಚೇರಿ ಗ್ರಾಮದಲ್ಲು ಇರುವ ಸುಳ್ಯದ ಸೀಮೆ ಕೆದಂಪಾಡಿ ತುಳುವರ ಸಂಣಗೆ ಅಪ್ಪಣೆ ದಯಪಾಲಿಸಿದ ಸನದು ಬುದ್ದಿ ನಿರೂಪ ಅದಾಗಿ–ಯಾಗ ನಿನಗೆ ಹೊಸ್ತಾಗಿ ಗಟ್ಟಿ ಜಂಮಕ್ಕೆ ಅಪ್ಪಣೆ ಕೊಡಿಶಿಯಿರುವುದು–ಯಿಾನಾಡುಯಿದೆ ಗ್ರಾಮದಲ್ಲಿ ಕುಳ ನಷ್ಟವಾದ ಜೆಪ್ಪಿ ಮುಕ್ಕಾಟೆ ಭೂಮಿ ಪ್ರಾಕುಕೇಳಿ ಭಟ್ಟಿ 300.... ಯಿದಕ್ಕೆ ಸೇರಿದ ಮನೆ ದಳ ತೋಟ ತುಡಿಕೆ ಮುಂತಾಗಿ ಅರಮನೆ ತರದಿಂದ ನಿನಗೆ ಗಟ್ಟಿ ಜಂಮಕ್ಕೆ ಕೊಡಿಯಿಸಿರುವುದರಿಂದ ಈ ಭೂಮಿಯನ್ನು ನಿನ್ನ ಪುತ್ರ ಪೌತ್ರ ಪಾರಂಪರ್ಯವಾಗಿ ಅನುಭವಿಸಿಕೊಂಡು ಈ ಭೂಮಿಯಿಂದ ಅರ ಮನೆಗೆ ಬರತಕ್ಕ ಉಂಬಳಿಗಾಣಿಕೆಯನ್ನು ಕಾಲಕಾಲಂ ಪ್ರತಿಯಲ್ಲು ಅರಮನೆಗೆ ಒಪ್ಪಿಸುತ್ತಾ ಸ್ವಾಮಿಕಾರ್ಯ ಮುಖ್ಯವಾಗಿ ನಡೆಸಿಕೊಳ್ಳುವುದಾಗಿ ಯೆಂಬ ಸನದು ನಿರೂಪಕ್ಕೆ ಅಪ್ಪಣೆ ಪ್ರಕಾರ ಕಲಿಸಂದ 4907ನೇ ಕ್ರೋಧ ಸಂ| ಮಾರ್ಗಶಿರ ತಾರೀಖು 21ನೇ ಮಂಗಳ ವಾರ ಬರದಾಂತಾ ಕಾಸಾ ರಹಸ್ಯದ ಕಳು. ಕಲಿ 4907ನೇ ಸಂವತ್ಸರ ಮಾರ್ಗಶಿರವೆಂದರೆ ಕ್ರಿಸ್ತಶಕ 1805ನೇ ಇಸವಿ ಡಿಸೆಂಬರ್ ತಿಂಗಳಾಗುತ್ತದೆ.

ಇದೇ ರೀತಿ ದೊಡ್ಡ ವೀರರಾಜೇಂದ್ರ ವಡೆಯನು ಈ ಕೆಳಗಿನ ಗೌಡ ಜನರಿಗೆ ಕೊಡಗಿನಲ್ಲಿ ಭೂಮಿಯನ್ನು ಜಂಮವಾಗಿ ಕೊಟ್ಟಿದ್ದು ಕಂಡುಬರುತ್ತದೆ.

2 ಕುಂದಚ್ಚೇರಿ ಗ್ರಾಮದಲ್ಲು ದಬ್ಬಡಕರ ತುಳುವ ಚಿಟ್ಟನ ಬೆಳಿಯಗೆ ಕುಳ ನಷ್ಟವಾದ ಬೆಳಂಚಂಡ ಭೂಮಿ ಪ್ರಾಕ ಕೇಳಿ ಭಟ್ಟಿ 300.

3 ಸುಳ್ಯದ ಸೀಮೆ ಬೆಳಕಜೆ ಸುಬ್ಬಯಗೆ ಮೂರು ನಾಡು ಕಾಂತೂರು ಗ್ರಾಮದಲ್ಲಿ ಭೂಮಿ.

4 ಮುತ್ತಾರುಮುಡಿ ಗ್ರಾಮದಲ್ಲಿ ಇರುವ ಸುಳ್ಯದ ಸೀಮೆ ಅರಂತೋಡು ಮಾಗಣೆ ಪಾರಮಜಲು ತುಳುವರ ತಿಮ್ಮಪ್ಪಗೆ ಕುಳ ನಷ್ಟವಾಗಿರುವ ಕುಳಕಂಡರ ಭೂಮಿ 250 ಭಟ್ಟಿ, ಬೆಳಂ ಚಟ್ಟಿ ಭೂಮಿ 250 ಭಟ್ಟಿ.

5 ಉಲುಗುಲಿ ಮೂಡಗೇರಿ ನಾಡು ಪಯಕಿ ಅತ್ತೂರು ಗ್ರಾಮದಲ್ಲು ಇರುವ ಸುಳ್ಯದ ಶೀಮೆಪೆರಾಲು ತುಳುವರ ಚಿಟ್ಟನ ಮೋಟಗೆ ಇದೇ ಗ್ರಾಮದಲ್ಲಿ ಕುಳ ನಷ್ಟವಾಗಿರುವ ಬೈ ಚೆಟ್ಟರ ಭೂಮಿ ಭಟ್ಟಿ 300.

ಹೀಗೆ ಉಳುವಾರ ಕೃಷ್ಣನಿಗೆ, ದೇರಜೆ ಸುಬ್ಬುವಿಗೆ ಭೂಮಿ ಕೊಟ್ಟದು ಕಂಡುಬರುತ್ತದೆ. ಇವರಲ್ಲದೆ ಕೊಡಗಿನಲ್ಲಿ ಈಗ ಭೂಮಿ ಮನೆಮಾಡಿಕೊಂಡಿರುವ ಎಲ್ಲಾ, ಗೌಡ ಜನಾಂಗದವರಿಗೆ ಹಾಲೇರಿ ಅರಸರು ಜಮ್ಮ ಭೂಮಿ ಕೊಟ್ಟಿರುವರು.

ದಕ್ಷಿಣ ಕನ್ನಡ ಜಿಲ್ಲೆಯಿಂದ ಕೊಡಗಿಗೆ ಬಂದ ಗೌಡ ಜನರಲ್ಲಿ ಕೆಲವರು ಕೊಡಗಿನಲ್ಲಿಯೂ ದಕ್ಷಿಣ ಕನ್ನಡದ ತಮ್ಮ ಆದಿ ಮನೆಗಳ ಹೆಸರನ್ನೇ ಇಟ್ಟುಕೊಂಡಿರುವರು. ಇನ್ನು ಕೆಲವರು ಇಲ್ಲಿ ಬೇರೆ ಮನೆ ಹೆಸರುಗಳನ್ನು ಇಟ್ಟುಕೊಂಡಿರುವರು. ಇವರಲ್ಲಿ ಅಲ್ಲಿನ ಹೆಸರನ್ನೇ ಇಲ್ಲಿಯೂ ಇಟ್ಟುಕೊಂಡ ಕೆಲವು ಕುಟುಂಬಗಳು ಇವು–ಕೆದಂಬಾಡಿ, ದಂಬೆಕೋಡಿ, ಪಾರೆಮಜಲು, ಪಾಣತಲೆ.

ಕೊಡಗಿನಲ್ಲಿ ಬೇರೆ ಮನೆ ಹೆಸರುಗಳನ್ನು ಇಟ್ಟುಕೊಂಡ ಕೆಲವು ಕುಟುಂಬಗಳು ಈ ಕೆಳಗಿನವು :

| **ದಕ್ಷಿಣ ಕನ್ನಡ ಜಿಲ್ಲೆಯಲ್ಲಿ** | | **ಕೊಡಗಿನಲ್ಲಿ** |
|---|---|---|
| ಕಲ್ಪೋಡ | .... | ಚೆಟ್ಟಿಮಾಡ |

| | | |
|---|---|---|
| ಕೂಜುಗೋಡನ | .... | ಕುಂಬಗೋಡನ |
| ನಿಡ್ಯಮಲೆ | .... | ದರಗನ |
| ಪೈಕನ | .... | ಯಂಕನ |
| ಸಾಂತಡ್ಕ | .... | ಕಾಳೆಯಂಡ್ರ |

ಕೊಡಗಿನ ಕೆಲವು ಗೌಡ ಕುಟುಂಬಗಳು ತಾವು ನಿಂತ ಭೂಮಿಗಳ ಹಿಂದಿನ ಕೊಡವ ಕುಳಗಳ ಹೆಸರನ್ನು ಇಟ್ಟುಕೊಂಡಿವೆ. ಉದಾಹರಣೆಗೆ ದಕ್ಷಿಣ ಕನ್ನಡ ಜಿಲ್ಲೆಯ ಸಾಂತಡ್ಕ ಮನೆಯವರು ಬಿಳಿಗೇರಿಯಲ್ಲಿ ಕಾಳೆಯಂಡ್ರವೆಂತಲೂ ಬೇಂಗುನಾಡಿನಲ್ಲಿ ಪೊಡನೋಳಂಡ್ರ ಎಂತಲೂ ಇಲ್ಲಿ ಹೆಸರನ್ನು ಇಟ್ಟುಕೊಂಡಿರುವರು

ಮೇಲಿನ ಎರಡು ವರ್ಗಗಳ ಕುಟುಂಬಗಳ ಹೆಸರುಗಳನ್ನು ನನ್ನ ತಿಳುವಳಿಕೆಗೆ ಬಂದಷ್ಟನ್ನು ಕೊಟ್ಟಿರುವೆನು. ಆದುದರಿಂದ ಈ ಪಟ್ಟಿಯು ಅಪೂರ್ಣವೆಂದು ಓದುಗರು ತಿಳಿಯಬೇಕು.

ಕೊಡಗಿನಲ್ಲಿ ಗೌಡ ಜನಾಂಗದವರು ಬರುವಾಗ ದೊಡ್ಡ ವೀರರಾಜೇಂದ್ರ ಒಡೆಯನ ಸುಲ್ತಾನನ ಸೀಮೆಯ ಆಕ್ರಮಣಗಳು ಎಲ್ಲಾ ತೀರಿದ್ದವು. ಕೊಡಗಿನ ಸುತ್ತಲಿನ ಜಿಲ್ಲೆಗಳು ನೇರವಾಗಿ ಬ್ರಿಟಿಷರ ಅಧಿಕಾರಕ್ಕೆ ಇಲ್ಲವೇ ಮೇಲಧಿಕಾರಕ್ಕೆ ಒಳಪಟ್ಟದ್ದುವು. ದೊಡ್ಡ ವೀರ ರಾಜೇಂದ್ರನನಂತರ ಕೊಡಗನ್ನು ಆಳಿದ ಲಿಂಗರಾಜೇಂದ್ರ ಒಡೆಯ ಮತ್ತು ಚಿಕ್ಕ ವೀರರಾಜೇಂದ್ರ ಒಡೆಯರ ಆಳ್ವಿಕೆಯಲ್ಲಿ ಯುದ್ಧಗಳು ಜರುಗುವ ಸಾಧ್ಯತೆಯೇ ಇರಲಿಲ್ಲ. ಆದುದರಿಂದ ಗೌಡ ಜನರು ರಾಜರ ದಂಡಾಳುವಾಗಿದ್ದಾರೋ ಇಲ್ಲವೋ ಎಂದು ಖಚಿತವಾಗಿ ಹೇಳಲು ಆಧಾರವಿಲ್ಲ.

1834ರಲ್ಲಿ ಕೊಡಗನ್ನು ಬ್ರಿಟಿಷರು ಹಿಡಿದುಕೊಂಡ ಮೇಲೆ ಕೊಡಗಿನ ಕೊನೆಯ ರಾಜ ಚಿಕ್ಕವೀರ ರಾಜೇಂದ್ರ ಒಡೆಯನನ್ನು ಅವರು ಪದಚ್ಯುತನನ್ನಾಗಿ ಮಾಡಿ ವಾರಣಾಸಿಯಲ್ಲಿಟ್ಟರು. ಆ ನಂತರ 1835ರಲ್ಲಿ ಮತ್ತು 1857ರಲ್ಲಿ ತಾವು ಕೊಡಗಿನ ಸಿಂಹಾಸನಕ್ಕೆ ಹಕ್ಕುದಾರರೆಂದು ಹೇಳಿ ಅನುಕ್ರಮವಾಗಿ ಅಪರಂಪರ ಮತ್ತು ಕಲ್ಯಾಣಸ್ವಾಮಿ ಎಂಬಿಬ್ಬರು ಬ್ರಿಟಿಷರ ವಿರುದ್ಧ ತಮ್ಮ ಹಕ್ಕನ್ನು ಸ್ಥಾಪಿಸಲು ಯತ್ನಿಸಿದರು. ಅಪರಂಪರನ ಪ್ರಯತ್ನವು ಜನರ ಬೆಂಬಲವಿಲ್ಲದೆ ಪ್ರಾರಂಭದಲ್ಲೇ ಚಿವುಟಿಹೋಯಿತು. ಕಲ್ಯಾಣಸ್ವಾಮಿಯು ಕೊಡಗಿನಿಂದ ಬಿಸಲೆಘಟ್ಟದ ಮಾರ್ಗವಾಗಿ ದಕ್ಷಿಣಕನ್ನಡದ ಅಮರಸುಳ್ಯ ಮಾಗಣೆಗೆ ಹೋದನು. ಅಲ್ಲಿಗೆ ಸುಳ್ಯದ ಮುಖ್ಯ ಭೂಮಾಲೀಕನಾಗಿದ್ದ ಕೆದಂಪಾಡಿರಾಮಗೌಡನು ಈತನನ್ನು ಕರೆಸಿದ್ದನು. ಕಲ್ಯಾಣಸ್ವಾಮಿಯ ಒಬ್ಬನೇ ಅಧಿಕಾರಿಯಾಗಿ ಗುಡ್ಡೆಮನೆ (ಬಲಮುರಿ ಗುಡ್ಡೇರ) ಅಪ್ಪಯ್ಯನೆಂಬವನು ಇದ್ದನು. ಕಲ್ಯಾಣಸ್ವಾಮಿಯ ಕಾಟಕಾಯಿ (Insurrection) ಯನ್ನು ಕೊಡಗಿನ ದಿವಾನ ಅಪ್ಪಾರಂಡ ಬೋಪು ಕೊಡಗಿನ ಜನರನ್ನು ಕರೆದುಕೊಂಡು ಸುಳ್ಯ ಬೆಳ್ಳಾರೆಗಳಿಗೆ ಹೋಗಿ ಸುಲಭವಾಗಿ ಅಡಗಿಸಿದನು. ಅಷ್ಟರಲ್ಲಿ ಇಂಗ್ಲೀಷರ ಸೈನ್ಯಗಳೂ ಅಲ್ಲಿಗೆ ಬಂದಿದ್ದವು. ದಿವಾನ್ ಬೋಪುವಿನ ಆಪ್ತ ಸಹಾಯಕರಲ್ಲಿ ಗಾಳಿಬೀಡು ಗ್ರಾಮದ ಕೋಚನ ದೊಡ್ಡಯ್ಯನೂ ಒಬ್ಬನಾಗಿದ್ದನು. ಅಮರಸುಳ್ಯ ಕಾಟಕಾಯಿಯನ್ನು ಅಡಗಿಸಲು ಮುಖ್ಯ ಪಾತ್ರ ವಹಿಸಿದ ಐವತ್ತೈದು ಕೊಡಗಿನ ಮುಖ್ಯಸ್ಥರಿಗೆ ಬ್ರಿಟಿಷ್ ಸರ್ಕಾರದವರು ಮೂರು ತಲೆ ಪರ್ಯಂತ ರಾಜಕೀಯ ವೇತನ (Political Pension)ಗಳನ್ನು ಕೊಟ್ಟರು. ಕೋಚನ ದೊಡ್ಡಯ್ಯನಿಗೂ ರಾಜಕೀಯ ವೇತನವು ದೊರೆತು ಆತನ ಮೊಮ್ಮಗನವರೆಗೆ ನಡೆಯಿತು.

1877ನೇ ಇಸವಿಯಲ್ಲಿ ಕೊಡಗನ್ನು ಮದ್ರಾಸಾಧಿಪತ್ಯಕ್ಕೆ ಸೇರಿಸಬೇಕೆಂಬ ಸೂಚನೆಯನ್ನು ಕಲ್ಕತ್ತದ ಗವರ್ನರ್ ಜನರಲ್ಲರ ಸರ್ಕಾರವು ತಂದಾಗ ಕೊಡಗಿನ ಎಲ್ಲಾ ಮುಖ್ಯಸ್ಥರು ಈ ಸೂಚನೆಯನು ವಿರೋಧಿಸಿ ಆ ಸರ್ಕಾರಕ್ಕೆ ಒಂದು ಮನವಿಯನ್ನು ಅರ್ಪಿಸಿದರು. ಆ ಮನವಿಯಲ್ಲಿ ಕೊಡಗಿನ ಎಲ್ಲಾ ಕೋಮುಗಳ ಮುಖ್ಯಸ್ಥರು ಸಹಿ ಹಾಕಿದ್ದರು. ಈ ಮುಖ್ಯಸ್ಥರಲ್ಲಿ ಗೌಡ ಜನಾಂಗಕ್ಕೆ ಸೇರಿದವರು ಈ ಕೆಳಗಿನವರು : 1 ಬೈರೆಟ್ಟಿರ ರಾಮಪ್ಪಯ್ಯ, 2 ನಿಡ್ಯಮಲೆ ಮುತ್ತಣ್ಣ, 3 ಶಿರಕಜೆ ಪೊನ್ನಪ್ಪ, 4 ಬಳ್ಳಡಕ ದೇವಪ್ಪ, 5 ಕುದುಪಜೆ ದೇರಪ್ಪ ಮತ್ತು 6 ಕೋಚನ ಸಣ್ಣಯ್ಯ.

ಕೊಡಗಿನಲ್ಲಿ ಗೌಡಜನಾಂಗದವರು ಈ ಶತಮಾನದ

ಎರಡನೇ ದಶಕದವರೆಗೂ ವಿದ್ಯೆಯಲ್ಲಿ ಹಿಂದುಳಿದಿದ್ದರು. ಇದಕ್ಕೆ ಕಾರಣ-ಇವರು ಮುಖ್ಯವಾಗಿ ಕೃಷಿಗಾರರಾಗಿದ್ದು ಹಳ್ಳಿಗಳಲ್ಲೇ ವಾಸವಾಗಿದ್ದರು. ಆ ಕಾಲದಲ್ಲಿ ಕೊಡಗಿನಲ್ಲಿ ಎಲ್ಲಾ ಮಟ್ಟಗಳ ಶಾಲೆಗಳು ಕಡಿಮೆ ಇದ್ದವು. ಹೀಗೆ ಗೌಡ ಜನರು ವಿದ್ಯೆಯಲ್ಲಿ ಹಿಂದುಳಿದಿರುವುದನ್ನು ಮೊದಲು ಮನಗಂಡು ಅವರ ವಿದ್ಯಾಭಿವೃದ್ಧಿಗೆ ಶ್ರಮಿಸಿದವರು ದಿವಂಗತ ಶ್ರೀ ಕೆದಂಬಾಡಿ ಸುಬ್ರಾಯನವರು. ಇವರು ತಮ್ಮ ಕೆಲವು ಜಾತಿಬಾಂಧವರ ಸಹಾಯ ತೆಗೆದುಕೊಂಡು ಮಡಿಕೇರಿಯಲ್ಲಿ ಗೌಡ ವಿದ್ಯಾರ್ಥಿಗಳಿಗಾಗಿ ಒಂದು ವಿದ್ಯಾರ್ಥಿಭವನವನ್ನು ಒಂದು ಬಾಡಿಗೆಯ ಕಟ್ಟಡದಲ್ಲಿ ಸುಮಾರು 1920ರಲ್ಲಿ ಏರ್ಪಡಿಸಿದರು. ಇವರು 1924ರಲ್ಲಿ ಚೀಫ್ ಕಮಿಷನರ ಪ್ರಾಂತವಾಗಿದ್ದ ಕೊಡಗಿಗೆ ಸಲಹೆಗಳನ್ನು ಮಾಡುವ ಅಧಿಕಾರವಿದ್ದ ಕೌನ್ಸಿಲ್ ಕೇಂದ್ರ ಸರಕಾರದಿಂದ ಕೊಡಲ್ಪಟ್ಟಾಗ ಅದರ ಹದಿಮೂರು ಮಂದಿ ಚುನಾಯಿತ ಸದಸ್ಯರಲ್ಲಿ ಒಬ್ಬ ಸದಸ್ಯರಾಗಿದ್ದರು. ಇವರ ನಂತರ ಮೊದಲು ವಕೀಲ ವೃತ್ತಿಯನ್ನು ಕೈಗೊಂಡು ಕೊನೆಗೆ ಜಿಲ್ಲಾ ನ್ಯಾಯಾಧೀಶರಾಗಿದ್ದು ಕೀರ್ತಿಶೇಷರಾದ ಶ್ರೀ ನಿಡ್ಯಮಲೆ ಮುದ್ದಪ್ಪನವರು ಕೊಡಗು ಕೌನ್ಸಿಲಿನ ಸದಸ್ಯರಾಗಿ ಹಲವು ವರ್ಷ ದೇಶಸೇವೆ ಮಾಡಿದರು. ಇವರು ಗೌಡ ಜನಾಂಗದ ವಿದ್ಯಾನಿಧಿ, ಗೌಡ ಜನರ ಸಂಘಗಳನ್ನು ಕೊಡಗಿನಲ್ಲಿ ಸ್ಥಾಪಿಸಲು ಮುಂದಾಳಾದರು. ಗೌಡ ವಿದ್ಯಾರ್ಥಿ ಭವನಕ್ಕೆ ಒಂದು ಸ್ವಂತ ಕಟ್ಟಡವನ್ನು ಸರಕಾರದವರ ನೆರವಿನಿಂದ ಮಾಡಿಸಿಕೊಟ್ಟರು. ಇವರ ತಮ್ಮ ದಿ| ಎ. ಸೋಮಣ್ಣನವರು ಭಾರತವು ಪ್ರಜಾಪ್ರಭುತ್ವವಾದ ಮೇಲೆ 1952ನೇ ಸಾರ್ವತ್ರಿಕ ಚುನಾವಣೆಯಲ್ಲಿ ಕೊಡಗು ಮತ್ತು ಪೆರಿಯಾಪಟ್ಟಣ ತಾಲೂಕಿನ ಕೆಲವು ಭಾಗಗಳ ಪ್ರತಿನಿಧಿಯಾಗಿ ಕಾಂಗ್ರೆಸ್ ಅಭ್ಯರ್ಥಿಯಾಗಿ ಲೋಕಸಭೆಗೆ ಆರಿಸಲ್ಪಟ್ಟರು. ಇದೇ ಸಮಯದಲ್ಲಿ ಕೊಡಗಿನ ವಿಧಾನಸಭೆಗೆ ಗೌಡ ಜನಾಂಗದ ಶ್ರೀಗಳಾದ ಕೋರನ ದೇವಯ್ಯ ಮತ್ತು ಪಾಂಡನ ಸುಬ್ಬಯ್ಯನವರು ಜನರಿಂದ ಸಾರ್ವತ್ರಿಕ ಚುನಾವಣೆಯಲ್ಲಿ ಆರಿಸಲ್ಪಟ್ಟರು. ಶ್ರೀ ಕೋರನದೇವಯ್ಯನವರು ಕೊಡಗು ವಿಧಾನ ಸಭೆಯ ಉಪಾಧ್ಯಕ್ಷರಾಗಿಯೂ ವಿಧಾನ ಸಭಾ ಸದಸ್ಯರಿಂದ ಆರಿಸಲ್ಪಟ್ಟರು. 1956ನೇ ನವೆಂಬರ್ ತಿಂಗಳಲ್ಲಿ ಕೊಡಗು ಮೈಸೂರು ರಾಜ್ಯದಲ್ಲಿ ವಿಲೀನವಾಯಿತು. ಮೈಸೂರು ರಾಜ್ಯದ ವಿಧಾನಸಭೆಯಲ್ಲಿ ಕೊಡಗು ಮತ್ತು ಮೈಸೂರು ಜಿಲ್ಲೆಯ ಪೆರಿಯಾಪಟ್ಟಣ ತಾಲೂಕಿನ ಕೆಲವು ಭಾಗಗಳಿಗಾಗಿ ಮೂರು ಸದಸ್ಯ ಸ್ಥಾನಗಳನ್ನು ರಾಜ್ಯ ಘಟನೆಗಳಲ್ಲಿ ಇಡಲಾಗಿತ್ತು. ಈ ಮೂರು ಸ್ಥಾನಗಳಲ್ಲಿ ಕೊಡಗಿನ ಪೂರ್ವಭಾಗದ ನಾಡುಗಳು ಮತ್ತು ಪೆರಿಯಾಪಟ್ಟಣದ ಪಶ್ಚಿಮದ ಹಳ್ಳಿಗಳಿಂದ ಶ್ರೀ ಕೋರನ ದೇವಯ್ಯನವರು ಮೈಸೂರು ವಿಧಾನಸಭೆಗೆ ಆರಿಸಲ್ಪಟ್ಟರು. 1962ನೇ ಇಸವಿಯ ಚುನಾವಣೆಯಲ್ಲೂ ಶ್ರೀ ಕೋರನ ದೇವಯ್ಯನವರು ಮೈಸೂರು ರಾಜ್ಯ ವಿಧಾನ ಸಭಾ ಸದಸ್ಯರಾಗಿ ಆರಿಸಿಬಂದರು. 1967ನೇ ಇಸವಿಯ ಚುನಾವಣೆಗೆ ಮಾತ್ರ ಅವರು ಉಮೇದುವಾರರಾಗಿ ನಿಲ್ಲಲಿಲ್ಲ. ಮಡಿಕೇರಿ ತಾಲೂಕು ಅಭಿವೃದ್ಧಿ ಬೋರ್ಡಿನ ಅಧ್ಯಕ್ಷರಾಗಿ ಶ್ರೀ ಪಾಂಡನ ಸುಬ್ಬಯ್ಯನವರು ಈಗ್ಯೆ ಹಲವು ವರ್ಷಗಳಿಂದ ಇರುವರು.

ಈ ಸಂದರ್ಭಲ್ಲಿ 1921ರಿಂದ 1947ರವರೆಗೆ ಭಾರತದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಅಂಗವಾಗಿ ಕೊಡಗಿನಲ್ಲೂ ಹೂಡಲ್ಪಟ್ಟ ಚಳುವಳಿಯಲ್ಲಿ ಗೌಡಜನರ ಪಾತ್ರವು ಎಷ್ಟು ಮತ್ತು ಯಾವ ರೀತಿಯದು ಎಂದು ತಿಳಿದುಕೊಳ್ಳುವುದು ಸೂಕ್ತವಾಗಬಹುದು. ಕೊಡಗಿನಲ್ಲಿ ಮೊದಲು ಸ್ಥಾಪನೆಯಾದ ಜನತೆಯ ಬೆಂಬಲ ಪಡೆದ ರಾಜಕೀಯ ಸಂಸ್ಥೆಯು 1912ರಲ್ಲಿ ಸ್ಥಾಪಿಸಲ್ಪಟ್ಟು 1927ರವರೆಗೆ ಕೊಡಗಿನ ಏಕೈಕ ರಾಜಕೀಯ ಸಂಸ್ಥೆಯಾಗಿದ್ದಿತು. ಈ ಸಂಸ್ಥೆಯ ಸದಸ್ಯರಾಗಿ ಕೊಡಗಿನ ಹಾಗೂ ಭಾರತದ ಹಿತಕ್ಕಾಗಿ ಅನೇಕ ಮಹನೀಯರು ಈ ಅವಧಿಯಲ್ಲಿ ದುಡಿದರು. ಹೀಗೆ ದುಡಿದ ಮಹನೀಯರಲ್ಲಿ ಗೌಡಜನಾಂಗಕ್ಕೆ ಸೇರಿದವರು : ದಿವಂಗತ ಶ್ರೀಗಳಾದ ಕೆದಂಬಾಡಿ ಸುಬ್ರಾಯನವರು ಮತ್ತು ತೆಕ್ಕಡ ಸುಬ್ಬಯ್ಯನವರು. ತೆಕ್ಕಡ ಸುಬ್ಬಯ್ಯನವರು 1921ರಲ್ಲಿ ಕೊಡಗಿನಲ್ಲಿ ಜನ ಜಾಗ್ರತಿಯನ್ನುಂಟುಮಾಡಲು 'ಕೊಡಗು' ಪತ್ರಿಕೆಯನ್ನು ಹೊರಡಿಸಲು ಪ್ರಾರಂಭಿಸಿದ 'ಕೊಡಗು' ಕಂಪೆನಿಯ ಒಬ್ಬ ಮುಖ್ಯ ಸದಸ್ಯರಾದರು. 1921ರಲ್ಲೂ ಕೊಡಗಿನಲ್ಲಿ ಕಾಂಗ್ರೆಸ್ಸಿನ ಶಾಖೆಯು ಸ್ಥಾಪಿಸಲ್ಪಟ್ಟಿತು. ಕೊಡಗಿನ ಹೊರಪ್ರಾಂತ್ಯಗಳಲ್ಲಿ ಸ್ವಾತಂತ್ರ್ಯ ಚಳುವಳಿಯು ಬಿರುಸಾದ ಹಾಗೆ ಕೊಡಗಿನಲ್ಲಿಯೂ ಇಲ್ಲಿನ

ಕಾಂಗ್ರೆಸ್ ಸಂಸ್ಥೆಯು ಚಳವಳಿಯನ್ನು ನಡೆಸಹತ್ತಿತು. ಇಲ್ಲಿ ಮೊದಲು ರಾಷ್ಟ್ರೀಯ ಧ್ವಜವಂದನೆ, ಸೇಂದಿ ಸಾರಾಯಿ ಅಂಗಡಿಗಳ ಮುಂದೆ ಕುಡಿಯುವವರಿಗೆ ತಡೆ ಮಾಡುವುದು ಸರಕಾರಿ ಆಜ್ಞೆಯನ್ನು ಉಲ್ಲಂಘಿಸುವುದು ಮೊದಲಾದುವು ಕಾಂಗ್ರೆಸಿಗರ ಕಾರ್ಯಕ್ರಮಗಳಾದವು. ಹೀಗೆ ಚಳವಳಿ ಹೂಡಿದ ಸತ್ಯಾಗ್ರಹಿಗಳನ್ನು ಸರಕಾರವು ಬಂಧಿಸಿ ದಂಡ ಮತ್ತು ಸೆರೆ ವಾಸವನ್ನು ವಿಧಿಸಿತು. ಈ ಚಳುವಳಿಯು ನಡೆದುದು 1930–31ರಲ್ಲಿ. ಇದರಲ್ಲಿ ಭಾಗ ವಹಿಸಿದವರಲ್ಲಿ ಗೌಡ ಜನಾಂಗಕ್ಕೆ ಸೇರಿದವರು : ದಿವಂಗತ ಶ್ರೀ ಪೂಜಾರಿರ ರಾಮಪ್ಪನವರು, ಶ್ರೀ ಕೋಚನ ಅಪ್ಪಯ್ಯನವರು.

1933ರ ನಂತರ 1940ರ ವರೆಗೆ ಕಾಂಗ್ರೆಸಿಗರೂ, ಅವರಲ್ಲಿ ಸಹಾನುಭೂತಿಯುಳ್ಳವರೂ, ಗಾಂಧಿಯವರ ಹರಿ ಜನೋದ್ಧಾರ ಕಾರ್ಯಕ್ರಮಗಳಲ್ಲಿ ತೊಡಗಿದವರು, ಇತರ ಮುಂದಾಳುಗಳೊಡನೆ ದಿವಂಗತ ಸಿದ್ಧಮಲೆ ಸೋಮಣ್ಣ ನವರೂ ಭಾಗವಹಿಸಿದರು. 1940ರಲ್ಲಿ ಕಾಂಗ್ರೆಸಿಗೂ ಬ್ರಿಟಿಷ್ ಸರಕಾರಕ್ಕೂ ತಿಕ್ಕಾಟ ಉಂಟಾಗಿ ಮಹಾತ್ಮಾ ಗಾಂಧಿಯವರು 1941ರಲ್ಲಿ ವೈಯಕ್ತಿಕ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಈ ಸಮಯದಲ್ಲಿ ಕೊಡಗಿನಲ್ಲಿ ಸತ್ಯಾ ಗ್ರಹಿ ತರಬೇತಿ ಶಿಬಿರವು ತೆರೆಯಲ್ಪಟ್ಟಿತು. ಈ ಶಿಬಿರ ದಲ್ಲಿ ಇತರ ಸತ್ಯಾಗ್ರಹಿಗಳೊಡನೆ ಶ್ರೀಗಳಾದ ಪೂಜಾರಿರ ರಾಮಪ್ಪ, ಕೋರನ ದೇವಯ್ಯ, ಕೆದಂಬಾಡಿ ಗಣಪತಿ ವ್ಯಕ್ತಿಗತ ಸತ್ಯಾಗ್ರಹದ ಪ್ರತಿಜ್ಞೆ ಕೈಗೊಂಡರು. ಇದರ ನಂತರ ಕಾಂಗ್ರೆಸ್ ಸಂಸ್ಥೆಯು ಹೂಡಿದ ಕ್ವಿಟ್ ಇಂಡಿಯಾ–'ಬ್ರಿಟಿಷರೇ ಭಾರತದಿಂದ ತೊಲಗಿರಿ' ಚಳ ವಳಿಯಲ್ಲಿ ಕೊಡಗಿನಲ್ಲಿ ಕೆಲವು ಕಾಂಗ್ರೆಸ್ ಧುರೀಣರು ಬಂಧಿಸಲ್ಪಟ್ಟು ವಿಚಾರಕ್ಕೊಳಪಟ್ಟು ಸೆರೆಮನೆಗೆ ಕಳುಹಿಸ ಲ್ಪಟ್ಟವರಲ್ಲಿ ಗೌಡ ಕೋಮಿನ ದಿವಂಗತ ದಿ|| ಪೂಜಾರಿರ ರಾಮಪ್ಪನವರೂ ದಿ. ಶ್ರೀ ಪೊರೆಯನ ಮುದ್ದಣ್ಣನವರೂ ಇದ್ದರು. ಕೆದಂಬಾಡಿ ಗಣಪತಿಯವರನ್ನು ಬಂಧಿಸಿ ನಂತರ ಬಿಡುಗಡೆ ಮಾಡಿದರು.

ಇನ್ನೂ ಕೆಲವರು ದಸ್ತಗಿರಿ ಮಾಡಲ್ಪಟ್ಟು ವಿಚಾ ರಣೆಗೊಳಪಡದೆ ಡೆಟೆನ್ಯು (detenue) ಗಳಾಗಿ ವೆಲ್ಲೂರ ದೊಡ್ಡ ಸೆರೆಮನೆಯಲ್ಲಿಡಪಟ್ಟರು. ಹೀಗೆ ಇಡಲ್ಪಟ್ಟವರಲ್ಲಿ ಕೋರನ ದೇವಯ್ಯನವರು ಒಬ್ಬರು.

ಇದೇ ಸಮಯದಲ್ಲಿ ಮಡಿಕೇರಿ, ವಿರಾಜಪೇಟೆ, ಪೊನ್ನಂಪೇಟೆ ಮೊದಲಾದ ಶಾಲೆಗಳ ವಿದ್ಯಾರ್ಥಿಗಳು ಶಾಲೆಗಳಿಂದ ಹೊರಬಂದು ಮೆರವಣಿಗೆಗಳನ್ನು ಮಾಡಿ ಕಾಂಗ್ರೆಸ್ ಧ್ವಜವನ್ನು ಸರಕಾರದ ಆಜ್ಞೆಗೆ ವಿರೋಧ ವಾಗಿ ಹಾರಿಸುತ್ತಿದ್ದರು. ಆದಕ್ಕೋಸ್ಕರ ಸರಕಾರದವರು ಮಡಿಕೇರಿ ಮತ್ತು ವಿರಾಜಪೇಟೆಗಳಲ್ಲಿ ವಿದ್ಯಾರ್ಥಿ ಮುಖಂಡರನ್ನೂ ದಸ್ತಗಿರಿ ಮಾಡಿ ಆಯಾ ಸ್ಥಳಗಳ ಸೆರೆಮನೆಗಳಲ್ಲಿ ಕೆಲದಿನಗಳವರೆಗಿಟ್ಟು ಅನಂತರ ಅವರನ್ನು ಬಿಡುಗಡೆ ಮಾಡಿದರು. ಈ ವಿದ್ಯಾರ್ಥಿ ಮುಖಂಡರಲ್ಲಿ ಮಡಿಕೇರಿ ಪ್ರೌಢಶಾಲೆಯ ಚೆಟ್ಟಿಮಾಡ ಚಿಣ್ಣಪ್ಪನವರು ಒಬ್ಬರು.

ಹೀಗೆ ಗೌಡ ಜನಾಂಗದವರೂ ಭಾರತದ ಸ್ವಾತಂತ್ರ್ಯ ಹೋರಾಟ ಚಳುವಳಿಯ ಅಂಗವಾಗಿ ಕೊಡಗಿನಲ್ಲಿ ನಡೆದ ಚಳುವಳಿಯಲ್ಲೂ ಭಾಗವಹಿಸಿರುವುದು ಕಂಡುಬರುತ್ತದೆ. ಗೌಡ ಜನಾಂಗದವರಲ್ಲಿ ಅಲ್ಪ ಸಂಖ್ಯೆ ಯಲ್ಲಿ ಭಾಗವಹಿಸಿರುವುದಕ್ಕೆ ಕಾರಣ, ಅವರು ಆ ಸಮಯ ದಲ್ಲಿ ವಿದ್ಯೆಯಲ್ಲಿಯೂ ಆರ್ಥಿಕ ಸ್ಥಿತಿಯಲ್ಲಿ ಬಹಳ ಹಿಂದುಳಿದಿದ್ದರು. ವಿದ್ಯಾವಂತರಾದ ಕೆಲವೇ ಕೆಲವು ಮಂದಿ ಸರಕಾರಿ ಉದ್ಯೋಗದಲ್ಲಿ ಅಥವಾ ಭಾರತದ ಸೈನ್ಯ ದಲ್ಲಿ ತಮ್ಮ ಸೇವೆ ಸಲ್ಲಿಸುತ್ತಿದ್ದರು.

1930ರಿಂದ ಇತ್ತೀಚೆಗೆ ಗೌಡ ಜನಾಂಗದ ಬಾಲಕ ಬಾಲಕಿಯರು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಪಡೆ ಯುತ್ತಿದ್ದಾರೆ. ಅವರಲ್ಲಿ ತುಂಬಾ ಪದವೀಧರರು ಇದ್ದು ಅವರು ವಕೀಲರಾಗಿಯೂ, ಉಪಾಧ್ಯಾಯರಾಗಿಯೂ ಡಾಕ್ಟರರಾಗಿಯೊ, ಇಂಜನಿಯರುಗಳಾಗಿಯೂ, ಸರ ಕಾರಿ ನೌಕರರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಭಾರ ತದ ನೆಲ ಜಲ ಮತ್ತು ವಾಯು ಪಡೆಗಳಲ್ಲಿಯೂ ಗೌಡ ಯುವಕರು ಬಹಳ ಮಂದಿ ಇರುವರು. ಅವರಲ್ಲಿ ದೊಡ್ಡ ಪ್ರಮಾಣದ ಯಾಲಕ್ಕಿ ಮತ್ತು ಕಾಫಿ ಬೆಳೆಗಾರರೂ ಇದ್ದಾರೆ.

ದಕ್ಷಿಣ ಕನ್ನಡದ ಮತ್ತು ಕೊಡಗಿನ ಗೌಡ ಜನಾಂಗದವರು ಹದಿನೆಂಟು ಬಳಿ ಅಥವಾ ಬುಡಕಟ್ಟಿಗೆ ಸೇರಿದವರು.

ಸ್ವಾತಂತ್ರ್ಯಕ್ಕಾಗಿ ಬಲಿದಾನಕ್ಕೆ ಸಿದ್ಧಾರಾಗಿದ್ದಾರೆ.



60ರ ಯುವಕ ಶ್ರೀ ಚೆರಿಯ ಮನೆ ಪೊನ್ನಪ್ಪನವರು ಗೋವಾವಿಮೋಚನೆಗೆ ಹೋಗುವ ಸಂದರ್ಭದಲ್ಲಿ ತೆಗೆದ ಚಿತ್ರ.

---

ಗೌಡ ಜನಾಂಗದವರು ಇರುವಲ್ಲೆಲ್ಲಾ ಇಬ್ಬರು ಮುಖ್ಯಸ್ಥರು ಅವರ ಜಾತಿ ಕಟ್ಟಳೆಗಳ ಮೇಲ್ವಿಚಾರಕ್ಕೆ ಇರುತ್ತಾರೆ. ಇವರಲ್ಲಿ ಒಬ್ಬನನ್ನು ಗ್ರಾಮಗೌಡನೆಂದೂ ಇನ್ನೊಬ್ಬನನ್ನು ಗೊತ್ತುಗೌಡನೆಂದೂ ಕರೆಯುತ್ತಾರೆ. ದಕ್ಷಿಣ ಕನ್ನಡದಲ್ಲಿ ಇವರ ಮೇಲೆ ಮಾಗಣೆ ಗೌಡನೆಂಬ ಮುಖ್ಯಸ್ಥನೂ ಆತನ ಮೇಲೆ ಇಡೀ ತಾಲೂಕಿಗೆ ಕಟ್ಟೀ ಮನೆಯವರು ಕಟ್ಟೀಮನೆ ಗೌಡನೆಂಬ ಮುಖ್ಯಸ್ಥನೂ ಇರುವರು. ಕೊಡಗಿನಲ್ಲಿ ಮಾಗಣೆ ಗೌಡನಿಲ್ಲ. ಇತ್ತೀಚೆಗೆ ಎಲ್ಲಾ ಕೋಮುಗಳಲ್ಲಿ ಆಯಾಯ ಜಾತಿ ಕಟ್ಟಳೆಗಳೂ, ಜಾತಿ ಕಟ್ಟಳೆಗಳನ್ನು ವಿಚಾರಿಸುವ ಮುಖ್ಯಸ್ಥರ ಅಧಿಕಾರವು ಕಡಿಮೆಯಾಗಿರುವಂತೆ ಗೌಡ ಜನಾಂಗದಲ್ಲೂ ಇಂಥ ಜಾತಿ ಮುಖ್ಯಸ್ಥರ ಅಧಿಕಾರವು ಕಡಿಮೆಯಾಗಿದೆ.

ಗೌಡ ಜನಾಂಗದವರಲ್ಲಿ ಧಾರೆ ಕ್ರಮದ ವಿವಾಹ ಪದ್ಧತಿಯಿದೆ. ಇವರಲ್ಲಿ ಸ್ತ್ರೀಯರು ಪ್ರಾಯಪ್ರಬುದ್ಧರಾದಮೇಲೆ ವಿವಾಹವಾಗುವರು ಇವರು ಮಿಥುನಮಾಸದಲ್ಲಿ (ಜೂನ್, ಜುಲೈ) ತಮ್ಮ ಪಿತೃಗಳಿಗೆ ಪಿಂಡ ಪೂಜೆಗಳನ್ನು ಅರ್ಪಿಸುವರು. ಇವರಿಗೆ ವೆಂಕಟರಮಣದೇವರು ಕುಲದೇವರು. ಇವರು ಮಾಂಸಾಹಾರಿಗಳು.

ಕೊಡಗಿನಲ್ಲಿರುವ ಗೌಡ ಸ್ತ್ರೀಯರು ಹಿಂದೆ ಕೊಡವ ಹೆಂಗಸರ ಹಾಗೇ ಸೀರೆಯನ್ನು ಉಟ್ಟು ಸೆರಗನ್ನು ಕಟ್ಟುತ್ತಿದ್ದರು. ಆದರೆ ತಮ್ಮ ಸೀರೆ ನೆರಿಗೆಯನ್ನು ಮುಂದೆ ಮಾಡಿ ಉಡುತ್ತಾರೆ. ಆದರೆ ಈಗ ಕೆಲವು ವರ್ಷಗಳಿಂದ ಕೆಲವು ವೃದ್ಧ ಗೌಡಸ್ತ್ರೀಯರನ್ನು ಉಳಿದು ಎಲ್ಲಾ ಗೌಡ ಸ್ತ್ರೀಯರು ಕರ್ನಾಟಕ ರೀತಿಯಲ್ಲಿ (ಮೈಸೂರಿನ ಮಾದರಿ) ತಮ್ಮ ಸೀರೆಯನ್ನು ಉಡುತ್ತಾರೆ. ಕೊಡಗಿನ ಗೌಡ ಜನರಲ್ಲಿ ನಾಪೊಕ್ಲು ಗ್ರಾಮದ ಕೊಂಬನ ಮನೆಯ ಸ್ತ್ರೀಯರು ಕೆಲವು ವರ್ಷಗಳ ಹಿಂದಿನವರೆಗೆ ಕೊಡಗಿನ ಸ್ತ್ರೀಯರ ಮಾದರಿಯಲ್ಲೇ ಸೀರೆಗಳನ್ನು ಉಡುತ್ತಿದ್ದರಂತೆ. ಇದಕ್ಕೆ ಆ ಮನೆಯವರು ಕೊಡುತ್ತಿದ್ದ ವಿವರಣೆಯು ರಾಜರ ಕಾಲದಲ್ಲಿ ಅಲ್ಲಿಗೆ ತರಲ್ಪಟ್ಟ ಗೌಡ ಗಂಡಸರಿಗೆ ರಾಜನು ಕೊಡುವ ಸ್ತ್ರೀಯರನ್ನು ಪತ್ನಿಯರನ್ನಾಗಿ ಕೊಟ್ಟನು. ಆ ಸ್ತ್ರೀಯರು ಉಡುಪನ್ನು ಕೊಡವ ರೀತಿಯಲ್ಲಿಯೇ ಮುಂದುವರಿಸಿದರು. ಆ ಪರಂಪರೆಯನ್ನೇ ಆ ಮನೆಗೆ ಸೇರಿದ ಸ್ತ್ರೀಯರೆಲ್ಲರೂ ಅನುಸರಿಸಿಕೊಂಡು ಬಂದರು ಎಂಬುದೇ ಆಗಿದೆ.

ಗೌಡ ಜನಾಂಗದವರು ಅರೆಭಾಷೆಯೆಂಬ ಗ್ರಾಮ್ಯ ಕನ್ನಡವನ್ನು ಮನೆಯಲ್ಲಿ ಮಾತನಾಡುತ್ತಾರೆ. ಉದಾಹರಣೆಗೆ ಇವರು ಹೋಗುತ್ತೇನೆ, ಬರುತ್ತೇನೆ ಎಂಬುದಕ್ಕೆ ಹೋನೆ, ಬನ್ನೆ ಎಂದು ಹೇಳುವರು. ಆದರೆ ಕೊಡಗಿನ ಜೈನಿರ ಮನೆಯವರೆಂಬ ಒಂದು ಗೌಡ ಕುಟುಂಬದವರು ಇಂದಿಗೂ ಕೊಡಗು ಭಾಷೆಯನ್ನು ಮನೆಯಲ್ಲಿ ಆಡುವರು. ಜೈನಿರ ಮನೆಯು ಕಡಿಯುತ್ತು ನಾಡಿನ ಚಾಲಾವರ ಗ್ರಾಮದಲ್ಲಿದೆ.

ಕೊಡಗಿನ ಗೌಡ ಜನಾಂಗದವರು ಇತ್ತೀಚೆಗೆ ಹಾಸನ ಮತ್ತು ಮೈಸೂರು ಜಿಲ್ಲೆಗಳ ಒಕ್ಕಲಿಗ ಗೌಡ ರೊಡನೆ ವಿವಾಹ ಸಂಬಂಧವನ್ನು ಮಾಡುತ್ತಿರುವರು. ಈ ಕೆಲವು ವಿಷಯುಗಳು ಕೊಡಗಿನ ಗೌಡ ಜನಾಂಗದವರ ವೈಶಿಷ್ಟ್ಯಗಳು.

ಈ ಲೇಖನದಿಂದ, ಹಿಂದೆ ಕೃಷಿಯಲ್ಲಿ ಹೊರತು ಇತರ ಕ್ಷೇತ್ರಗಳಲ್ಲಿ ಹಿಂದುಳಿದಿದ್ದ ಕೊಡಗಿನ ಗೌಡ ಜನಾಂಗದವರು, ಈಗ್ಯೆ ಹಲವು ವರ್ಷಗಳಿಂದ ವಿದ್ಯಾವಂತರಾಗಿ ರಾಜ್ಯದ ಮತ್ತು ರಾಷ್ಟ್ರದ ಎಲ್ಲಾ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಲಿರುವುದು ಸಂತೋಷದ ಸಂಗತಿ. ಅವರು ಇನ್ನೂ ಹೆಚ್ಚಿನ ಪ್ರಗತಿಯನ್ನು ಪಡೆದು ದೇಶದ ಅಭ್ಯುದಯದಲ್ಲಿ ಹೆಚ್ಚಿನ ಸೇವೆ ಸಲ್ಲಿಸಲಿ ಎಂದು ಹಾರೈಸಿ ಈ ಲೇಖನವನ್ನು ಮುಗಿಸುವೆನು.

## REFERENCES.


1 Castes and Tribes found in Coorg–Rev. G. Ritcher 1887
2 The Coorg Census 1931
3 The Coorg Tribes and Castes-L. A. Krishna Iyer 1948
4 Madras District Manuals South Kanara Vol. I of Sturrock I.C.S. 1894
5 ಸ್ವಾತಂತ್ರ್ಯ ಹೋರಾಟ–ಕೊಡಗಿನ ಕಥೆ :- **B. D. Ganapathi**
6 ರಾಜರು ಕೊಟ್ಟ ನಿರೂಪಗಳು 7 ಪತ್ರಿಕೆ ಲೇಖನಗಳು




# ಕೊಡಗು ರಾಜರ ಕಾಲದಲ್ಲಿ ಗೌಡರ ಕಟ್ಟು ಕಟ್ಟಳೆಗಳನ್ನು ತೀರ್ಮಾನಿಸಲು ಭಾಗವಹಿಸಿದ ಮಹನೀಯರು ಮತ್ತು ತೀರ್ಮಾನಗಳು

ಸಂಗ್ರಹಗಾರರು:-ಶ್ರೀಮಾನ್ ಕೆ. ಎಸ್. ಕಾರ್ಯಪ್ಪನವರು ವೀರರಾಜೇಂದ್ರಪೇಟೆ

---

(ಶ್ರೀ ಕೆ. ಎಸ್. ಕಾರ್ಯಪ್ಪನವರು ಗೌಡರ ಸಂಸ್ಕೃತಿ ಬಗ್ಗೆ ಮಾಹಿತಿಯನ್ನು ಪಡೆಯಲು ತುಂಬಾ ಶ್ರಮಿಸಿದ್ದಾರೆ. ಅವರು ಹಲವಾರು ಜನರನ್ನು ಬೇಟಿಮಾಡಿ ಇಂತಹ ವಿಷಯಗಳನ್ನು ಸಂಗ್ರಹಿಸುವುದಕ್ಕೆ ಪ್ರಯತ್ನ ಪಟ್ಟದ್ದು ನಮಗೆ ಪ್ರೋತ್ಸಾಹ ದಾಯಕವಾಗಿದೆ.)

ಶ್ರೀಮುಖ ಸಂವಸರ ಅಶ್ವೀಜ ಶುದ್ಧ ಹದ್ನೈದರಲ್ಲು ಮುತ್ತು ಕಟ್ಟೆಮನೆ ದೇರಣ್ಣ ಗೌಡ ಕೊಡಗು ಜಿಲ್ಲೆ ಪುತ್ತೂರು ತಾಲೋಕು ಪುತ್ತೂರು ಮಾಗಣೆ ಅಬಕಜೆ ಗೌಡ ನೆಡವಾಳಿ ಕುಂಬಗೌಡ, ಬೆಳ್ಳಾರಿ ಮಾಗಣೆ ಮಲ್ಲಜ್ಜನ ದೇರಗೌಡ, ಕೊರತದತ ತಿಮ್ಮೇಯ್ಯಗೌಡ, ಬೊಳದ ಜೆಳ್ಳಿಗೌಡ, ಸರ್ವಕಜೆ ತಿಮ್ಮೆಯ್ಯಗೌಡ, ಕಾಸ್ಪಾಡಿ ತಿಮ್ಮಾಡರು ಈಶ್ವರಗೌಡ, ಗಾಳಿಬೆಪ್ಪದೆರಯ್ಯಗೌಡ ಮುರಕಟದ ಮಲ್ಲಪ್ಪ ಗೌಡ; ಕೂತನ ಮರಿಗೌಡ, ತೆಕ್ಕನರ ಲಿಂಗಗೌಡ, ಬಿರುಗಲು ತಿಮ್ಮಣ್ಣಗೌಡ, ಬೊಳಪದವಾತಿ ಕಜಿ ದೆರಣಗೌಡ, ಕೊಳದ ತಿಮ್ಮಪ್ಪಗೌಡ ಅಮರಸೀಮೆ ಚೊಕ್ಕಾಡಿ ಬೊಳೂರು ಸೋಮಗೌಡ, ಉಮ್ಮಣ್ಣದ ಡೆಣ್ಣ ಗೌಡ,ಕಂದರ್ಪಡಿ ಕೋಬಿಲದ ಮುತ್ತಣ್ಣ ಗೌಡ,ಕೂವಳದ ಕೂಬಗೌಡ, ಮುಂಡೊಡಿ ಚನ್ನಪ್ಪಗೌಡ, ವಾಲ್ಕಜೆ ಚೆನ್ನೆಗೌಡ, ಮಡುಪಾಡಿ ಯೆಂಕಣಗೌಡ, ದೇವದ ಪುಟ್ಯಗೌಡ, ಬೀರೆಕಲ್ಲು ತಮ್ಮಣ್ಣಗೌಡ, ವೊಗುದ ಕುಮ್ಮಣ್ಣಗೌಡ, ಮಲ್ಕಜೆ ಪುಟ್ಟೆಗೌಡ, ಯಾಣೆಕಲ್ಲು ಬಾಳೆಡಿ ತಮ್ಮಣ್ಣ ಗೌಡ, ಉಡಮೊಳಿ ಸುಬ್ಬುಗೌಡ, ಕಡೆಂಬಾಲ ಕೊಟೆಗೌಡ, ಬನ್ನಡ್ಕದ ಸುಬ್ಬೆಯಗೌಡ, ಪೌಪುರೊಣೆ ಬಾಯದಗೌಡ, ಕಡಮಕಲ್ಲು ಕೊಪ್ಪಡ್ಕದ ಸಣ್ಣಗೌಡ, ನೆಚ್ಯಣಕೆ ಗೌಡ ಅಜಪಾರಾರ ಕುಂಬಗೌಡ,ನೂಜಲದ ತಾಳಗೌಡ, ಪೆರಾಜೆ ಗ್ರಾಮದ ವೊಟ್ಟಗೌಡ, ನೆಲ್ಲಡ್ಕದ ಸುಬ್ಬಗೌಡ, ನೂಜಿಲದ ತಾಳದ ಹೊಸೂರು ಮೋಚಗೌಡ, ಸಂಪಾಜೆ ದೇವಜನ ತಿಮ್ಮಗೌಡ,ತಾವುನಾಡು ರಾಮಗೌಡ,ಚೂರ್‌ತಲೆ ದೆರಣ ಗೌಡ, ಚಿರಕಜೆ ಲಿಂಗಗೌಡ, ಬೆಂಗುನಾಡು ಪಟ್ಟಿ ಶಂಕರ ಗೌಡ, ಅತ್ತಿಯಾಡಿ ತಿಮ್ಮಗೌಡ, ಸುಳ್ಳಿ ಕೋಡಿ ಬೊಮ್ಮ ಗೌಡ,ಮೂರ್ನಾಡು ಉಳುವಾರ್‍ರ ದೆವಪ್ಪಗೌಡ, ಕೊಡಕಲ್ಲು ದೇವಣ್ಣ ಗೌಡ ಕುಂಬಡ್ಕದ ಮಲ್ಲಪ್ಪಗೌಡ, ಕಗ್ಗೋಡು ವಿತ್ತು ಪೈಕದ ಕರ್‍ರಿಯಣಗೌಡ, ದೆಸ್ಕೊಡಿ ತಮ್ಮಗೌಡ, ಸುಬೊಜಿ ನಾಡು ಹುದಿಕೇರ್‍ರಿನಾಡು ಬೊಳೂರಂ ತಿಮ್ಮೆಯ್ಯ ಗೌಡ,ನಿಡುಂಪಾಡಿ ದುಗ್ಗಣಗೌಡ, ಹೊರೂರಂ ನೂರೊತ್ಲು ನಾಡು ಕೊಡಕಲ್ಲು ಕುಂಬಗೌಡ, ಹಾಲೇರಿಗಾಡು ಉಪ್ಪು ಗಾಲದ ಪುಟ್ಟಗೌಡ ಸಬ್ಬಜ್ಜನ ತಿಮ್ಮೆಗೌಡ, ಮಡಿಕೇರಿ ನಾಡು ಗುಡ್ಡಜ್ಜನ ಕ್ಣ್ಣಣಗೌಡ ಮತ್ತು ನಾಡು ಕೊಂಪಾಳದ ಪೂಜಾರಿ ತಿಮ್ಮೇಗೌಡ ಮಡಿಕೇರಿ ಪೊರಮಲೆನಾಡು ಯಾಲುಗಾಳು ಸುಜ್ಜಪಾಡಿ ತಿಮ್ಮಯ್ಯಗೌಡ, ನಾಲ್ಕೂರು ಸುಬ್ಬಗೌಡ, ಕಡಿಯತ್ತು ನಾಡು ಕಟ್ಟೆ ಮುತ್ತಣ್ಣಗೌಡ, ಕಾಜಮುಲ್ಲಂ ಅಪ್ಪುಗೌಡ, ಯಡೆ ನಾಲ್ಕುನಾಡು ಯಜು ನೂರು ಚೆನ್ನಪ್ಪಗೌಡ ಅಮತ್ತಿನಾಡು ಪುಟ್ಟೇಗೌಡ

ಮುಂತಾದ ಸಮಸ್ತಗೌಡುಗಳು ಕೂಡಿ ಆಲೋಚನೆಮಾಡಿ ಬರೆಸಿದ ಪಟ್ಟಿ ವಿವರ.

ನಮ್ಮ ಗೌಡುಗಳು ಜಾತಿ ಕುಟ್ಟಕ್ಕೆ ಮಾಯವೆಮಾ ನಳ್ಳ ಸುಭಾಸೊಬಾನ ಮುಂತಾಗಿ ನಡಿಯುಂವಂತಾದಕ್ಕೆ ಇದು ಸಾಕ್ಷಿ ಸಿಂಗೇರ್ರಿ ಮಠದಿಂಥ ಬ್ರಾಮರ ಆಚಾರ ವಿಚಾರ ಆದ ಗೊತ್ರಸ್ತರಾಗಿ ಇದ್ದ ಪಂಡಿತ ರಾಮಯ್ಯನು ನಮ್ಮ ಗೌಡುಗಳ ಜಾತಿಯಲ್ಲಿ ನಡೆಯುವಾಶದಕ್ಕೆ ತಂಟೆ ಮಾಡಿ ಮದುವೆ ಯಾಗುವಂತಾದನ್ನು ನಿಲ್ಲಿಸಿದರಿಂದ ಪ್ರಕೊ ನಮ್ಮ ಜಾತಿ ಕಟ್ಲೆ ಒಳಗೆ ನಡೆದುಬರುವಂತಾದ್ದು ತಲೆ ಬಾಪುರ್ರಿ ಬಾಸಿಂಗ ನಡೆ ಮುಡಿ ವಾದ್ಯ ಹನ್ನೆರಡು ಕಂಬ ಓರಣೆ ಪಯಕತೊರಣ ದಾರೆ ಮಂಟಪ ದಂಡಿಗೆ ಬ್ರಾಹಮ್ಮರ ಕೈದಾರೆ ಮುಂತಾಗಿ ಸಲ್ಲುವಂತಾದ್ದುಯೆಂಬ ದ್ದಾಗಿ ಪಳನೆ ಕೇಳಿದ್ದರಿಂದಲೂ ಪ್ರಕೊರಾಬ್ಯಾದಿಂದ ಗುರುಕಾಣಿಕೆ ಕಟ್ಟೆ ಇಲ್ಲ ಇನ್ನು ಮುಂದೆ ಕಟ್ಟುವದಕ್ಕೂ ಇಲ್ಲ ಎಂಬದಾಗಿ ನಾವು ಹೇಳಿದರಿಂದ ಗುರುಕಾಣಿಕೆ ಕಟ್ಟದ ಮೇಲೆ ಬ್ರಾಮರ್ರದಾರ್ರಿಗೆ ಕೊಡುವದು ಇಲ್ಲ ಎಂಬದಾಗಿ ಸದ್ರಿ ಪಂಡಿತ ರಾಮೈಯ್ಯನು ಮದುವೆ ತಡೆ ಮಾಡಿಸಿದ ಕಾರಣ ಈ ವ್ಯಾಜವು ಮಡಿಕೇರಿ ಅರಮನೆ ದಿರ್ವಾ ಕಚೇರಿಗೆ ಬಂದು ಹೇಳಿ ಕೊಂಡಲ್ಲು ಈ ಬಗ್ಗೆ ಕಾರ್ಯಪ್ಪ ದಿವಾನ್ ಸಹೆಬರ್ರು ಮುದ್ದು ಸ್ವಾಮಿಯವರು ಲಿಂಗ ರಾಜೇಂದ್ರ ಒಡೆಯಿರುರ್ರು ಈ ಅಭಿಪ್ರಾಯವನ್ನು ಅರಿಕೆ ಮಾಡಕೊಂಡಲ್ಲಿ ಕೂಡಿ ಅಪ್ಪಣೆ ದಯಪಾಲಿಸಿದ ಮೆರೆಗೆ ಕಾರ್ಯಪ್ಪ ದಿವಾನರು ಮೊಕಾಂತರ ತಾಕೀತಿ ಇದೆ ವಿವರ ನೀವು ವಿಷ್ಣುದೇವ ಸಕೃಪೆಯುನ್ನು ದಾರ್ಪದ ಅರ ಮನೆ ಮೂಹುರ್ತ ಆಗುವ ಸಮಯದಲ್ಲಿ ದೆಸಮನಾಡು ನಾಡು ಕೂಡುತ್ತದೆ. ವಿಷ್ಯು ವೆಳ್ಯದಲ್ಲು ನಿಮಗೆ ಗುರು ಕಾಣಿಕೆ ಕಟ್ಟತಕ್ಕದ್ದು ಉಂಟು ಇಲ್ಲವೆಂಬದಾಗಿ ಗೊತ್ತು ಮಾಡಿಸಿ ಕೊಟ್ಟೇವು ಪರಿಯಂತ ಬ್ರಹಮರ ದಾರೆ ಬಗ್ಗೆ ಕೊಡಿಯೆಂಬದಾಗಿ ತಾಕೀತಾ ಮಾಡಿದರಿಂದ ಅವರೇಗೂ ನಡೆದು ಬಂತು ಆ ಮೇಲೆ ಹಾಲೇರಿಸಮುಸ್ತಾನದವರು ಅರಮನೆಗೆ ಸ್ವಾಮಿಯವರೂ ಪೂರ್ವದ ಮೇರೆ ನಮ್ಮ ಜಾತಿ ಕಟ್ಟಳೆಗೆ ಪ್ರಕೊ ಇದೇ ಮೇರೆಗೆ ನಡೆದುಬರುವಲ್ಲಿ ಅಡ್ಡ ಬಾರದಂತೆ ನಗರ್ರ ಸಂಸ್ಥಾನದಲ್ಲಿ ದಯಿವಿಟ್ಟು ನಿರೂಪ ಒಂದು ಅಂದು ನಿರೂಪನಾಲ್ಕುನ್ನು ಮಹಾಸ್ವಾಮಿ ಲಿಂಗರಾಜೇಂದ್ರ ವಡೆಯರುರ್ರು ಪಾದಾರವಿಂದಕ್ಕೆ ತಂದು ಒಪ್ಪಿಸಿದರಿಂದ ಈ ನಾಲ್ಕು ನಿರೂಪವನ್ನು ಆಜಮೊಯಿಸಿ ನೋಡಿದಲ್ಲು ಗುರು ಕಾಣಿಕೆ ಕಟ್ಟುವ ಮಾಮೂಲು ಕಾಣುವದಿಲ್ಲ ಎಂಬದಾಗಿ ಅಪ್ಪಣೆ ಆದ ಪ್ರಕಾರ ಕಾರ್ಯಪ್ಪ ದಿವಾನ್ ಸಹೆಬರವರು ನಮ್ಮಯೆಲ್ಲರ ಮೊಕ್ತ ತಾಕೀತಿ ವಿವರಯೆನೆಂದರೆ.

ಅಪ್ಪಣೆ ಅಂದು ನಿಮ್ಮ ಜಾತಿವಳಗೆ ಪ್ರಕು ಯಾವ ನಡೆದು ಬರುತಿತ್ತು ಆ ಮೇರೆ ಈಗಲೂ ನಡೆಕೊಳ್ಳುವಲ್ಲಿ ಅಡ್ಡಿ ಹರ್ಕತ್ ಬಾರದಂತೆ ಬುದ್ದಿ ಅಪ್ಪಣೆ ಆಗಿದೆ ಪ್ರಕು ನಗರ್ರ ಸಮಸ್ತನದ ನಿರೂಪ ಹಾಲೇರಿ ಸಮಸ್ತಾನದ ನಿರೂಪ ಪ್ರಕಾರ ನಡಕೊಳ್ಳುವಲ್ಲಿಯೆಂಬದಾದ ಅಪ್ಪಣೆ ಆಗಿದೆಯೆಂತ ದಿರ್ವಾ ಸಾಹೆಬ್ರು ತಾಕಿತಿ ಮಾಡಿದ ಬುದ್ದಿ ಅಪ್ಪಣೆ ಪ್ರಕಾರ ನಡೆಕೊಳ್ಳುವ ಬಖೆ ಕಟ್ಟು ಕಟ್ಟಳೆ ವಿವರ.

ಮದುವೆ ದಾರೆ ಮಾಡಿ ಬ್ರಾಮರಿಗೆ ಕೊಡತಕ್ಕದ್ದು ಅಕ್ಕಿ ಸೇರು 2 ತೆಂಗಿನಕಾಯಿ 2 ಬಾಳೆಹಣ್ಣು ಚಿಪ್ಪು 1 ವಿಶ್ಯಸೂಡಿ ಅರೆ, ಅಡಿಕೆ 5 ವಿವರ ಚಕ್ರ 2 ದಕ್ಷಣೆ ಬಖೆ ಬೆಳ್ಳಿಹಣ 1 ತೆರುವಿನ ಬಗ್ಗೆ ನಾಣ್ಯವರ 1 ಚಕ್ರ 2 ಮಡ್ಲು ತುಂಬುವದು 7 ತೆಂಗಿನಕಾಯಿ 5 ಅರತಿ 5 ವಿವರ ಮನೆ ಅರ್ಕೆ ಆರತಿ 1 ಬೆಳ್ಳಿಹಣ ಒಂದು ಊರುಗೌಡನ ಅರ್ಕೆ ಆರತ್ತಿಪೊಂದಕ್ಕೆ ಬೆಳ್ಳಿಹಣ 1 ಬಾಕಿ ಆರತ್ತಿ ಮೂರಕ್ಕೆ ಬೆಳ್ಳಿ ಹಣ 2 ಕಾಲು ತೊಳೆದ ಬಗ್ಗೆ ಬೆಳ್ಳಿ ಹಣ 1 ಹಸುರ ವಿಶ್ಯದೆಲೆ ಸೂಡಿ, ಅಡಿಕೆ 5, ಮದುವೆ ಕುರಿ ಎಲೆ ಸೂಡಿ 1 ಅಡಿಕೆ 5 ಕಾಲುಂಗರದ ಎಲೆ ಸೂಡಿ 1 ಅಡಿಕೆ 5 ಆಚ್ಚೆ ಇಳಿಸುವ ಬಗ್ಗೆ ಎಲೆ ಸೂಡಿ ಆರೆ ಅಡಿಕೆ 3 ಮುಗವಳಿ ಎಲೆ ಸೂಡಿ 7 ಅಡಿಕೆ ನೂರು.

### ಬಣ್ಣ ಬಂಗಾರದ ವಿವರ

ಜೂಟ್ಟಾ ಕಂಬಿಸೀರೆ 1 ಬಿಳಿ ರವಕೆ 1 ಮುಸರಗಿನ ಬಿಳಿವಸ್ತ್ರ 1 ಕೊಪ್ಪು ಜೋಡು 1 ಯಸಳು ಜೋಡು 1 ಕಡಗ ಜೋಡು 1 ಪಿಂಬಾಳೆ ಜೋಡು 1 ಚಿನ್ನದ ಮಣಿಸರ 2 ಕಡವ ಹವಳದ ಮಣಿಸರ 1 ತೋಳು ಸರಿಗೆ

1 ನೇವಳದ ಸರಪಣಿ ಜೋಡು 1 ಕಾಲು ಮಿಂಚು ಜೋಡು 1 ಕೈ ಉಂಗುರ ಜೋಡು

ಓಲಗದವರಿಗೆ ರೂಪಾಯಿ 2½ಕೊಂಬಿನವರಿಗೆ ಚಕ್ರ 1 ಬೆಳ್ಳಿ ಹಣ 1 ಅಕ್ಕಿ ಸೇರು 1 ತೆಂಗಿನ ಕಾಯಿ 1 ವಿಳ್ಯದಲೆ 5 ಅಡಿಕೆ 1.

ಮೈ ನೆರದದಕ್ಕೆ ಮಡಿವಾಳನಿಗೆ ಅಕ್ಕಿ ಸೇರು 1 ತೆಂಗಿನ ಕಾಯಿ 1 ವೀಳ್ಯದೆಲೆ 5 ಅಡಿಕೆ 1 ಬೆಳ್ಳಿ ಹಣ 1

ಜನನ ಆದಕ್ಕೆ ಗಂಡು ಹೆತ್ತರೆ ಬೆಳ್ಳಿ ಹಣ 1 ಹೆಣ್ಣು ಹೆತ್ತರೆ ಬೆಳ್ಳಿ ಹಣ ಅರೆ. ಅಕ್ಕಿ ಸೇರು 1 ತೆಂಗಿನಕಾಯಿ 1 ವೀಳ್ಯದೆಲೆ 5 ಅಡಿಕೆ 1.

ಬುಡದಾರೆಗೆ ಚಕ್ರಹತ್ತುವೀಳ್ಯದೆಲೆ ಸೂಡಿ 10 ಅಡಿಕೆ 30 ಬಿಳೀ ಸೀರೆ 1.

ನಾಲ್ಕನೆ ಬಾಳಿಗೆ ಚಕ್ರ 3 ಅಡಿಕೆ 30 ವೀಳ್ಯದೆಲೆ ಸೂಡಿ 3 ಬಿಳೀ ಸೀರೆ ಕೊಟ್ಟು ಮಡಗಿ ಕೊಳ್ಳುದಾಗ ಸದ್ರಿ ತೆರವು ಇಲ್ಲ.

ಮೃತಪಟ್ಟದಕ್ಕೆ ಮೂರು ದಿನಕ್ಕೆ ಬೂದಿ ಮುಚ್ಚಿ ಅನ್ನ ಇಡುವುದು ಪುಣ್ಯಾರ್ಚನೆ ದೇವಾಲಯಲ್ಲು ಆತೀರ್ಥ ತಂದು ಶುದ್ಧ ಮಾಡಿಸುವುದು. ಹನ್ನೊಂದನೇ ದಿನಕ್ಕೆ ದೇವಸ್ಥಾನ ದಿಂದಲೂ, ಪುಣ್ಯಾರ್ಚನೆ ತೀರ್ಥ ತಂದು ಶುದ್ಧಮಾಡಿ ಜಾತಿಯವರಿಗೆ ಊಟ ಕೊಡುವುದು. ಮಡಿವಾಳನಿಗೆ ಅಕ್ಕಿ ಸೇರು 1 ತೆಂಗಿನಕಾಯಿ 1 ವೀಳ್ಯದೆಲೆ 1 ಅಡಿಕೆ 1 ಬಾಳೆಹಣ್ಣು ಚಿಪ್ಪು 1 ಹಜಾಮನಿಗೆ ಅಕ್ಕಿ ಸೇರು 1 ತೆಂಗಿನಕಾಯಿ 1 ವೀಳ್ಯದೆಲೆ 5 ಅಡಿಕೆ 1 ಬಾಳೆ ಹಣ್ಣು ಚಿಪ್ಪು 1. ಜೈನೆ ಮರ ಕಟ್ಟಿದರೆ ಜಾತಿಗೆ ಅಡಿಯಾಳಾಗಿ ಇರಬೇಕು.

ತಂದಂತ ಹೆಣ್ಣಿನ ಊನ, ಕೊರತೆ, ತೊರದು ಬಿಟ್ಟರೆ ಅರಮನೆ ಅಪರಾಧದೊಂದಿಗೆ ಜಾತಿ ಸಹಾ ದಂಡ ಕೊಡ ಬೇಕೆಂತ ಮಾಡಿದೆ.

## ಕೊಡಗು ಗೌಡ ವಿದ್ಯಾ ಸಂಘ ಸ್ಥಾಪನೆಯು ಸೂಕ್ಷ್ಮ ಪರಿಚಯು ಮತ್ತು ಸಂಘದ ಅಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳು

ಈ ಸಂಘಕ್ಕೆ ದಿವಂಗತ ಶ್ರೀಮಾನ್ ಕುಂಬು ಗೌಡ್ನ ಕುಶಾಲಪ್ಪನವರು ಪ್ರಥಮ ಸೋಪಾನವನ್ನಿಟ್ಟವ ರೆಂದೆನ್ನಬಹುದು. ಇವರನ್ನನುಸರಿಸಿ ಗೌಡ ಜನಾಂಗದ ಬಾಲಕ ಬಾಲಕಿಯರಿಗೆ ವಿದ್ಯಾಪ್ರಸಾರವನ್ನುಂಟು ಮಾಡಲು ಮುಂದಾಳುತ್ವ ವಹಿಸಿದ ಮೆ. ಗಳಾದ ಮೂಟೇರ ಅಣ್ಣಯ್ಯನವರು ಮುತ್ತಾರ್ಮುಡಿ ಗ್ರಾಮದ ತೆಕ್ಕಡ ಸುಬ್ಬಯ್ಯನವರು ಕೆದಂಬಾಡಿ ಸೋಮಯ್ಯನವರು ಶಿರಕಜೆ ಪೊನ್ನಪ್ಪನವರು, ಚೆರ್ಯಮನೆ ಕುಶಾಲಪ್ಪನವರು ತೆಕ್ಕಡ ಕಾಳಪ್ಪನವರು, ಕೋಚನ ಸುಬ್ಬಪ್ಪನವರು, ದಂಬೆಕೋಡಿ ಸಂಜಪ್ಪನವರು ಯಂಕನ ತಿಮ್ಮಯ್ಯನವರು,

ಕೋರನ ಮಾದಯ್ಯನವರು ಪೊಡನೋಳಂಡ್ರ ಐಯ್ಯಪ್ಪನವರು ಕರ್ಣಯ್ಯನ ಕರುಂಬಯ್ಯನವರು ಪಟ್ಟಡ ಮಂದಣ್ಣನವರು ಮತ್ತು ಮುನ್ಸಿಪ್ (ನಂತರ ಕೊಡಗಿನ ಡಿಸ್ಟ್ರಿಕ್ಟ್ ನುತ್ತು ಸೆಸ್ಸನ್ಸ್ ಜಡ್ಜರಾದರು) ಎನ್. ಮುದ್ದಪ್ಪ ಬಿ.ಎ. ಬಿಎಲ್.ಮೊದಲಾದ ಅನೇಕ ಸ್ವಜನ ಮಹನೀಯರುಗಳು ಸಂಘದ ಕಾರ್ಯಕಲಾಪಗಳಲ್ಲಿ ಭಾಗ ತೆಗೆದುಕೊಂಡಿರುತ್ತಾರೆ. ಅಲ್ಲದೆ ಜನಾಂಗದ ಪ್ರತಿಯೊಂದು ಕುಟುಂಬ ದಿಂದಲೂ ಅವರವರ ಶಕ್ತ್ಯಾನುಸಾರ ದ್ರವ್ಯ ಸಹಾಯ ಪಡೆದು ಅದರಿಂದ ಮಡಿಕೇರಿ ಹಿಲ್ ರೋಡಿನಲ್ಲಿ ಅಚ್ಚುಕಟ್ಟಾದ ಒಂದು ವಿದ್ಯಾರ್ಥಿ ಬೋರ್ಡಿಂಗ್ ಭವನವನ್ನು ಸ್ವಂತವಾಗಿ ಕಲ್ಪಿಸಿಕೊಂಡರು. ಈ ಕಾರ್ಯಕ್ಕೆ ದಿವಂಗತ ಲಾಯರ್ ಮೆ|| ಟಿ. ವಿ. ನಾಗರತ್ನಂ ಪಿಳ್ಳೆಯವರು ಬೆಂಬಲಿಗರಾಗಿ ನಿಂತು ಸಂಘಸ್ಥಾಪನಾಕಾರ್ಯದಲ್ಲಿ ಉದಾರ ಭಾವದಿಂದ ತನುಮನ ಧನ ಸಹಾಯ ಒದಗಿಸಿ ಜನಾಂಗದ ಚಿರಸ್ಮರಣೀಯ ಪ್ರೀತಿಗೆ ಪಾತ್ರರಾಗಿರುತ್ತಾರೆ. ಇವರೆಲ್ಲರ ಈ ತೆರನಾದ ಶ್ರಮವು ಕೆಲಸಕಾರ್ಯ ಮುಂದುವರಿಯಲು ಘನ ಸರ್ಕಾರದವರು ಇವರ ಕೆಲಸವನ್ನು ಗಮನಕ್ಕೆ ತೆಗೆದುಕೊಂಡು ಗೌಡಜನರ ವಿದ್ಯಾರ್ಥಿಗಳಿಗಾಗಿ ಪ್ರತ್ಯೇಕವಾಗಿ ಒಂದು ಬೋರ್ಡಿಂಗ್ ಮನೆಯನ್ನು ಮಡಿಕೇರಿ ಹೈಸ್ಕೂಲ್ ಬಳಿಯಲ್ಲಿ ದಯಪಾಲಿಸಿದರು. ಇಲ್ಲಿಗೆ ಜನಾಂಗದವರು ಕೈಕೊಂಡ ಕಾರ್ಯವು ಸ್ವಲ್ಪಮಟ್ಟಿಗೆ ಸಫಲಗೊಂಡಂತಾಗಿ ಮಡಿಕೇರಿಯಲ್ಲಿ ಗೌಡ ವಿದ್ಯಾರ್ಥಿ ಭವನ ಒಂದು ಭದ್ರಪಡಿಸಲ್ಪಟ್ಟು ಈ ಸಂಘದ ಆಡಳಿತ ಮೆಂಬರರ ದೊಡ್ಡ ಜವಾಬ್ದಾರಿಯು ಸ್ವಲ್ಪಮಟ್ಟಿಗೆ ನಿವಾರಿಸಲ್ಪಟ್ಟಂತಾಯಿತು. ಈಚೆಗೆ ಈ ಜನಾಂಗದ ಮೇಲ್ಮೆಯ ಕಾರ್ಯತತ್ಪರರು ಅವರ ಹಿರಿಯರು ಹಾಕಿದ್ದ ಅಸ್ತಿಭಾರದಲ್ಲಿ ನಿಧಾನವಾಗಿ ವಿದ್ಯಾಸಂಘವೆಂಬ ಕಟ್ಟಡವನ್ನು ಕಟ್ಟುತ್ತಾ ಬಂದು ಕಳೆದ ತಾರೀಖು: 17–5–33 ರಲ್ಲಿ ಪುತ್ತೂರು ವಕೀಲ್ ಮೆ|| ಮಲವಳ್ಳಿ ಶಿವರಾವ್ ರವರ ಅಧ್ಯಕ್ಷತೆ ಚೆಟ್ಟಳ್ಳಿಯಲ್ಲಿ ಗೌಡ ಜನಾಂಗದ ವಾರ್ಷಿಕ ಮಹಾಸಭೆಯು ಜರುಗಿಸಲ್ಪಟ್ಟು ಮೆ|| ಉಳುವಾರನ ಅಪ್ಪಯ್ಯನವರೇ ಮೊದಲಾದ ಪ್ರೇಕ್ಷಕ ಮಹಾಶಯರ ಸಲಹೆಯನ್ನು ಪಡೆದು ಸಂಘಕ್ಕೆ ಬೇಕಾದ ಬೈಲಾಗಳನ್ನು ರೂಪಾಂತರಗೊಳಿಸಿ ಮುಂದೆ ಯಾವ ರೀತಿ ಸಂಘದ ಕಾರ್ಯಕ್ರಮವು ನಡೆಯಬೇಕೆಂಬುದನ್ನು ನಿರ್ಧರಿಸಿದರು. ಈ ಬೈಲಾಗಳು ತಾ|| 27-1-33ರಲ್ಲಿ ಸರ್ಕಾರದಲ್ಲಿ ರಿಜಿಸ್ಟರ್ ಮಾಡಲ್ಪಟ್ಟು ಜನಾಂಗದವರ ತಿಳುವಳಿಕೆ ಬಗ್ಗೆ ಪುಸ್ತಕದ ರೂಪದಲ್ಲಿ ಅಚ್ಚುಹಾಕಿಸಿದ್ದಾಗಿದೆ. ಅಲ್ಲದೆ ಸಂಘದ ಆರ್ಥಿಕ ಸ್ಥಿತಿಯನ್ನು ಯೋಚಿಸಿ ಇವುಗಳ ಪ್ರತಿ ಒಂದಕ್ಕೆ ಒಂದಾಣೆಯ ಕ್ರಯ ನಿರ್ಣಯಿಸಿದೆ.

ಮುಂದೆ ಜನಾಂಗವು ಇದನ್ನು ಪರಿಶೀಲಿಸಿ ಸಂಘದ ಕಾರ್ಯಗಳಲ್ಲಿ ಸಹಕರಿಸಲು ಮುಂದೆ ಬಂದು ತಮ್ಮ ತಮ್ಮ ತನುಮನ ಧನ ಸಹಾಯವನ್ನು ಉದಾರಭಾವದಿಂದ ನೀಡಿ ಗೌಡ ಜನಾಂಗದ ಬಾಲಕ ಬಾಲಕಿಯರಿಗೆಲ್ಲಾ ಜಾಗ್ರತೆಯಲ್ಲಿ ವಿದ್ಯಾವ್ಯಾಸಂಗವು ಸಾಂಗವಾಗಿ ನಡೆಯುವಂತೆ ಮಾಡಿ ವಿದ್ಯಾದಾನ ಪುಣ್ಯಕ್ಕೆ ಎಲ್ಲರೂ ಭಾಗಿಗಳಾಗಲೆಂದು ಸಂಘವು ಬಯಸುತ್ತದೆ.

(ಸಹಿ) **ಚೆರಿಯಮನೆ ಕೆ. ಪೊನ್ನಪ್ಪ**
ಗೌ|| ಕಾರ್ಯದರ್ಶಿ

(ಸಹಿ) **ಬದ್ದನ ಮುತ್ತಣ್ಣ**
ಪ್ರೆಸಿಡೆಂಟ್

ಮಡಿಕೇರಿಯ ಗೌಡ ವಿದ್ಯಾರ್ಥಿ ಭವನದ ಮೊತ್ತ ಮೊದಲಿನ ತಂಡದ ವಿದ್ಯಾರ್ಥಿಗಳು (1919)



ನೆಲದ ಮೇಲೆ ಕುಳಿತವರು ಸರ್ವಶ್ರೀಗಳಾದ,

1. ಮುಂದ್ರೀರ ಕಾರ್ಯರ್ಯ 2. ಪಟ್ಟತಿ ಅಚ್ಚಯ್ಯ
3. ದಂಬೆಕೋಡಿ ಸುಬ್ರಾಯ 4. ಚೆರಿಯಮನೆ ಆನಂದ
5. ಚೆರಿಯಮನೆ ಕೃಷ್ಣಪ್ಪ 6. ಬಳ್ಳಡ್ಕ ಮಾಚಯ್ಯ
7. ಜೆಟ್ಟಿಮಾಡ ಉಲ್ಲಾಸ 8. ತೆಕ್ಕಡೆ ಜೋಪಯ್ಯ

ಕುಳಿತವರು ಶ್ರೀಗಳಾದ,

1. ನಿಡ್ಯಮಲೆ ಸೋಮಣ್ಣ 2. ಗುಡ್ಡೇರ ಪೂವಯ್ಯ
3. ಕೆದಂಬಾಡಿ ಸೋಮಪ್ಪ 4. ಚಂಡೀರ ಬೆಳ್ಯಪ್ಪ
5. ನಿಡ್ಯಮಲೆ ಬೆಳ್ಯಪ್ಪ 6. ಚೆರಿಯಮನೆ ಪೊನ್ನಪ್ಪ
7. ಕೆದಂಬಾಡಿ ಪುಟ್ಟಯ್ಯ 8. ಮೂಟೇರ ಕುಟ್ಟಪ್ಪ

ನಿಂತವರು ಶ್ರೀಗಳಾದ,

1. ಯಂಕನ ಐಯ್ಯಪ್ಪ 2. ತೆಕ್ಕಡ ಸೋಮಯ್ಯ
3. ಬೈಮನ ಪೊನ್ನಪ್ಪ 4. ಅಣ್ಣಾಚ್ಚಿರ ಮಾಚಯ್ಯ
5. ದಂಬೆಕೋಡಿ ಚಂಗಪ್ಪ 6. ಕೊಡಗನ ಬೆಳ್ಯಪ್ಪ
7. ಪಟ್ಟಡ ಐಯ್ಯಣ್ಣ 8. ಕುಂಜಿಲನ ಚೆಂಗಪ್ಪ
9. ತೆಕ್ಕಡ ಮಂದಣ್ಣ 10. ಪೂಜಾರಿರ ಮಂದಣ್ಣ
11. ಕಾಂಗೀರ ಬೆಳ್ಯಪ್ಪ 12. ಪೋರೆಯನ ಮಾದಯ್ಯ
13. ಯಂಕನ ಮುತ್ತಣ್ಣ 14. ಪುದಿನೆರವನ ಮಾದಯ್ಯ

# ಕೊಡಗು ಗೌಡ ವಿದ್ಯಾ ಸಂಘ ಮಡಿಕೇರಿಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು

### 1915 – 1919

ದಿವಂಗತ ಕುಂಬುಗೌಡನ ಕುಶಾಲಪ್ಪನವರು ಅಧ್ಯಕ್ಷರಾಗಿಯೂ ದಿವಂಗತ ಮೂಟೇರ ಅಣ್ಣಯ್ಯನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

ಶ್ರೀ ಕುಂಬುಗೌಡನ ಕುಶಾಲಪ್ಪನವರು ಕೊಡಗು ಗೌಡ ವಿದ್ಯಾ ಸಂಘದ ಸ್ಥಾಪನೆಗೆ ಕಾರಣಕರ್ತರು. ಅವರು ತಮ್ಮ ಜಾತಿ ಬಾಂಧವರನ್ನು ಒಟ್ಟುಗೂಡಿಸಿ ವಿದ್ಯಾ ಸಂಘದ ಸ್ಥಾಪನೆಯ ಕಾರಣಕರ್ತರಾಗಿ ಕೊಡಗಿನ ಗೌಡ ಜನರು ಚಿರಋಣಿಗಳಾಗಿದ್ದಾರೆ. ಕೊಡಗಿನಲ್ಲಿಯೂ ಅಲ್ಲದೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಅಲ್ಲಿಯ ವಿದ್ಯಾಸಂಘದ ಸ್ಥಾಪನೆಗೆ ಪ್ರೋತ್ಸಾಹ ನೀಡಿದ್ದಾರೆ ಮಾರ್ಗದರ್ಶನ ವಿತ್ತಿದ್ದಾರೆ.

### 1919 - 22

ಈ ಅವಧಿಯಲ್ಲಿ ದಿವಂಗತ ತೆಕ್ಕಡ ಸುಬ್ಬಯ್ಯ ನವರು ಅಧ್ಯಕ್ಷರಾಗಿಯೂ ದಿವಂಗತ ಕೋಟಂಬೈಲು ಕಾಳಪ್ಪನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು. ಈ ಸಮಯದಲ್ಲಿ ಮಡಿಕೇರಿಯಲ್ಲಿ ಒಂದು ವಿದ್ಯಾರ್ಥಿ ಭವನದ ಕಟ್ಟಡವನ್ನು ಕ್ರಯಕ್ಕೆ ಕೊಂಡುಕೊಂಡು ವಿದ್ಯಾರ್ಥಿ ಭವನ ನಡೆಸಲು ಪ್ರಾರಂಭವಾಯಿತು.

### 1922 – 23

ಈ ಅವಧಿಯಲ್ಲಿ ದಿವಂಗತ ಮೂಟೇರ ಅಣ್ಣಯ್ಯ ನವರು ಅಧ್ಯಕ್ಷರಾಗಿಯೂ ದಿವಂಗತ ಶಿರಕಜೆ ಪೊನ್ನಪ್ಪ ನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

### 1923 – 24

ಈ ವರ್ಷದಲ್ಲಿ ದಿವಂಗತ ಕೆದಂಬಾಡಿ ಸುಬ್ರಾಯ ನವರು ಅಧ್ಯಕ್ಷರಾಗಿಯೂ ದಿವಂಗತ ತೆಕ್ಕಡ ಪೂವಯ್ಯ ನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

### 1924 – 25

ಈ ವರ್ಷದಲ್ಲಿ ದಿವಂಗತ ಶಿರಕಜೆ ಪೊನ್ನಪ್ಪನವರು ಅಧ್ಯಕ್ಷರಾಗಿಯೂ ದಿವಂಗತ ಚೆಟ್ಟಿಮಾಡ ಮುತ್ತಣ್ಣ ನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

### 1925 – 26

ಈ ವರ್ಷದಲ್ಲಿ ದಿವಂಗತ ಶ್ರೀ ಚೆರಿಯಮನೆ ಕುಶಾಲಪ್ಪನವರು ಅಧ್ಯಕ್ಷರಾಗಿಯೂ ದಿವಂಗತ ಶ್ರೀ ಪಡನೋಳಂಡ್ರ ಐಯ್ಯಪ್ಪನವರು ಉಪಾಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ.

### 1926 – 27

ಈ ವರ್ಷದಲ್ಲಿ ದಿವಂಗತ ಶ್ರೀ ನಿಡ್ಯಮಲೆ ಮುದ್ದಪ್ಪ ಬಿ.ಎ. ಬಿಎಲ್.,ರವರು ಅಧ್ಯಕ್ಷರಾಗಿಯೂ ದಿವಂಗತ

ಶ್ರೀ ತೆಕ್ಕಡ ಆನಂದಯ್ಯನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾಗಿದ್ದಾರೆ. ಈ ಸಮಯದಲ್ಲಿ ಮಡಿಕೇರಿಯ ಈಗಿನ ಗೌಡ ವಿದ್ಯಾರ್ಥಿನಿ ಭವನದ ಕಟ್ಟಡವನ್ನು ಕಟ್ಟುವ ಏರ್ಪಾಡು ಮಾಡಲಾಗಿ ಜನರಿಂದ ಹಣವನ್ನು ವಸೂಲು ಮಾಡುವ ಏರ್ಪಾಡು ಮಾಡಲಾಯಿತು.

## 1927 - 1928 - 1929

ಈ ವರ್ಷದಲ್ಲಿ ದಿವಂಗತ ತೆಕ್ಕಡ ಆನಂದಯ್ಯನವರು ಅಧ್ಯಕ್ಷರಾಗಿ ಆಯ್ಕೆಯಾದರು.

## 1929 - 1930

ಈ ಸಾಲಿನಲ್ಲಿ ದಿವಂಗತ ಶ್ರೀ ಬಡ್ಡನ ಮುತ್ತಣ್ಣನವರು ಅಧ್ಯಕ್ಷರಾಗಿಯೂ ದಿವಂಗತ ಶ್ರೀ ದಂಬೆಕೋಡಿ ಅಪ್ಪಚ್ಚನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

## 1930–31

ಈ ವರ್ಷದಲ್ಲಿ ದಿವಂಗತ ಶ್ರೀ ತೆಕ್ಕಡ ಆನಂದಯ್ಯನವರು ಅಧ್ಯಕ್ಷರಾಗಿಯೂ ದಿವಂಗತ ಬಡ್ಡನ ಮುತ್ತಣ್ಣನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

## 1931 – 32

ಈ ವರ್ಷದಲ್ಲಿ ದಿವಂಗತ ಶ್ರೀ ಬಡ್ಡನ ಮುತ್ತಣ್ಣನವರು ಅಧ್ಯಕ್ಷರಾಗಿಯೂ ದಿವಂಗತ ಪೈಕೇರ ಜೋಯಪ್ಪನವರು ಉಪಾಧ್ಯಕ್ಷರಾಗಿ ಆಯ್ಕೆಯಾದರು.

## 1932 - 33

ಈ ವರ್ಷದಲ್ಲಿ ದಿವಂಗತ ಶ್ರೀ ಬಡ್ಡನ ಮುತ್ತಣ್ಣನವರು ಅಧ್ಯಕ್ಷರಾಗಿಯೂ ದಿವಂಗತ ಶ್ರೀ ದಂಬೆಕೋಡಿ ಅಪ್ಪಚ್ಚನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು. ಈ ಸಮಯದಲ್ಲಿಯೇ ಸಂಘಕ್ಕೊಂದು ಉಪನಿಯಮವನ್ನು ನಿರ್ಮಿಸಿ ಸಂಘವನ್ನು ರಿಜಿಸ್ಟರ್ ಮಾಡಲಾಯಿತು.

## 1933 - 34

ಈ ವರ್ಷದಲ್ಲಿ ದಿವಂಗತ ಶ್ರೀ ಉಳುವಾರನ ಅಪ್ಪಯ್ಯನವರು ಅಧ್ಯಕ್ಷರಾಗಿಯೂ ದಿವಂಗತ ಮೂಟೇರ ಮಂದಣ್ಣನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

## 1934 – 35 – 36

ಈ ವರ್ಷದಲ್ಲಿ ದಿವಂಗತ ಶ್ರೀ ತೆಕ್ಕಡ ಆನಂದಯ್ಯನವರು ಅಧ್ಯಕ್ಷರಾಗಿ ಆಯ್ಕೆಯಾಗಿ ಈಗಿನ ವಿದ್ಯಾರ್ಥಿ ಭವನದ ಕಟ್ಟಡ ಕಟ್ಟಲಾಯಿತು. ಈ ಕಟ್ಟಡಕ್ಕೆ ಬೇಕಾದ ಮರವನ್ನು ಮುತ್ತಾರ್ಮುಡಿ ಗ್ರಾಮದ ಕೊಡೆಕಲ್ಲು ಕುಟುಂಬದವರು ಉದಾರವಾಗಿ ದಾನಮಾಡಿದ್ದಾರೆ.

## 1936 - 37

ಈ ವರ್ಷದಲ್ಲಿ ದಿವಂಗತ ಶ್ರೀ ನಿಡ್ಯಮಲೆ ಸೋಮಣ್ಣ ಬಿ.ಎ.ಬಿ.ಎಲ್ ರವರು ಅಧ್ಯಕ್ಷರಾಗಿಯೂ ದಿವಂಗತ ಶ್ರೀ ತೆಕ್ಕಡ ಆನಂದಯ್ಯನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

## 1937 - 38

ಈ ವರ್ಷದಲ್ಲಿ ದಿವಂಗತ ಶ್ರೀ ತೆಕ್ಕಡ ಆನಂದಯ್ಯನವರು ಅಧ್ಯಕ್ಷರಾಗಿಯೂ ಶ್ರೀ ಚೆರಿಯಮನೆ ಪೊನ್ನಪ್ಪನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

## 1938 - 39 - 40

ಈ ಸಾಲಿನಲ್ಲಿ ದಿವಂಗತ ಶ್ರೀ ನಿಡ್ಯಮಲೆ ಮುದ್ದಪ್ಪ ಬಿ.ಎ.ಬಿ.ಎಲ್.ರವರು ಅಧ್ಯಕ್ಷರಾಗಿಯೂ ದಿವಂಗತ ಶ್ರೀ ಪರಿಚನ ಪೂವಯ್ಯನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

## 1940 - 49

ಈ ಸಾಲಿನಲ್ಲಿ ದಿವಂಗತ ಶ್ರೀ ನಿಡ್ಯಮಲೆ ಮುದ್ದಪ್ಪ ಬಿ.ಎ.ಬಿ.ಎಲ್. ರವರು ಅಧ್ಯಕ್ಷರಾಗಿಯೂ ಶ್ರೀ ಕೋರನ ದೇವಯ್ಯನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

## 1949 - 56

ಈ ಸಾಲಿನಲ್ಲಿ ಶ್ರೀ ಕೋರನ ದೇವಯ್ಯನವರು ಅಧ್ಯಕ್ಷರಾಗಿಯೂ ಶ್ರೀ ಯಂಕನ ಮಾದಯ್ಯನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

## 1956 - 58

ಈ ಸಾಲಿನಲ್ಲಿ ದಿವಂಗತ ತೋಟಂಬೈಲು ಮಾದಪ್ಪ ನವರು ಅಧ್ಯಕ್ಷರಾಗಿಯೂ ಶ್ರೀ ಚೆರಿಯಮನೆ ಪೊನ್ನಪ್ಪ ನವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾದರು.

## 1858 - 61

ಈ ಸಾಲಿನಲ್ಲಿ ಶ್ರೀ ಚೆರಿಯಮನೆ ಪೊನ್ನಪ್ಪನವರು ಅಧ್ಯಕ್ಷರಾಗಿಯೂ ಶ್ರೀ ತೋಟಂಬೈಲು ಚಂಗಪ್ಪ ಬಿ.ಕಾಂ. ಬಿ ಎಲ್. ರವರು ಉಪಾಧ್ಯಕ್ಷರಾಗಿಯೂ ಆಯ್ಕೆಯಾಗಿ ಈ ಸಮಯದಲ್ಲಿ ಈಗಿನ ವಿದ್ಯಾರ್ಥಿನಿ ಭವನದ ಸುತ್ತಲಿರುವ ನಿವೇಶನವನ್ನು ಸರ್ಕಾರದ ಮಂಜೂರಾತಿಗಾಗಿ ಪ್ರಯತ್ನಪಡಲಾಯಿತು.

## 1960 - 61

ಈ ಸಮಯದಲ್ಲಿ ಶ್ರೀ ತೋಟಂಬೈಲು ಚಂಗಪ್ಪ ಬಿ.ಕಾಂ.ಬಿ.ಎಲ್.ರವರು ಅಧ್ಯಕ್ಷರಾಗಿ ಆಯ್ಕೆಯಾದರು.

## 1961 - 64

ಈ ಸಾಲಿನಲ್ಲಿ ಶ್ರೀ ದಂಬೆಕೋಡಿ ಚಿಣ್ಣಪ್ಪ ಬಿ.ಕಾಂ. ಬಿ.ಎಲ್.ರವರು ಅಧ್ಯಕ್ಷರಾಗಿಯೂ ಶ್ರೀ ಉಳುವಾರನ ಮಾದಯ್ಯನವರು ಉಪಾಧ್ಯಕ್ಷರಾಗಿಯೂ ಹಿಂದೆ ನಿವೇಶನ ಕ್ಕಾಗಿ ಪ್ರಯತ್ನ ನಡೆದಿದ್ದು ಈ ಸಮಯದಲ್ಲಿ ಈಗಿನ ವಿದ್ಯಾರ್ಥಿ ಭವನ ಸುತ್ತಲಿರುವ ನಿವೇಶನ ಮಂಜೂ ರಾಯಿತು.

## 1964 – 68

ಈ ಸಾಲಿನಲ್ಲಿ ಶ್ರೀ ತೋಟಂಬೈಲು ಚಂಗಪ್ಪ ಬಿ.ಕಾಂ. ಬಿ.ಎಲ್.ರವರು ಅಧ್ಯಕ್ಷರಾಗಿಯೂ ಶ್ರೀ ಕೂಡಕಂಡಿರ ಬಸಪ್ಪ ಎಂ.ಎ.ಬಿಎಡ್.ರವರು ಉಪಾಧ್ಯಕ್ಷ ರಾಗಿಯೂ ಆಯ್ಕೆಯಾದರು.

ಈ ಸಮಯದಲ್ಲಿ ಮೈಸೂರಿನ ವಿದ್ಯಾರ್ಥಿ ಭವನದ ನಿವೇಶನವನ್ನು ಸಂಘಕ್ಕಾಗಿ ಕೊಂಡುಕೊಳ್ಳಲಾಯಿತು.

## 1968 ರಿಂದ 1970ರ ವರೆಗೆ

ಈ ಸಾಲಿನಲ್ಲಿ ಶ್ರೀ ದಂಬೆಕೋಡಿ ಚಿಣ್ಣಪ್ಪ ಬಿ.ಕಾಂ. ಬಿ.ಎಲ್.ರವರು ಅಧ್ಯಕ್ಷರಾಗಿಯೂ ಶ್ರೀ ಕುದು ಪಜೆ ಕೃಷ್ಣಪ್ಪ ಎಂ.ಎ. ಬಿ.ಎಲ್.ರವರು ಉಪಾಧ್ಯಕ್ಷ ರಾಗಿಯೂ ಆಯ್ಕೆಯಾದರು.

# ದಕ್ಷಿಣ ಕನ್ನಡ ಜಿಲ್ಲಾ ಗೌಡ ವಿದ್ಯಾ ಸಂಘ ಸ್ಥಾಪನೆಯ ಸಂಕ್ಷಿಪ್ತ ಪರಿಚಯ

ಲೇಖಕರು : **ಚಾರುವಾಕ ಕೆ. ಪದ್ಮಯ್ಯಗೌಡರು**, ಪುತ್ತೂರು

[ಶ್ರೀ ಪದ್ಮಯ್ಯಗೌಡರು ಪುತ್ತೂರಿನವರಾಗಿದ್ದು ಹಲವಾರು ವರ್ಷಗಳಿಂದ ಸಹಕಾರ ಸಂಘ ಮುಂತಾದ ಸಾರ್ವಜನಿಕ ಕೆಲಸಗಳಲ್ಲಿ ಸೇವೆ ಸಲ್ಲಿಸಿ ದಕ್ಷಿಣ ಕನ್ನಡ ವಿದ್ಯಾ ಸಂಘದ ಕಾರ್ಯದರ್ಶಿಗಳಾಗಿ ಹಲವಾರು ವರ್ಷಗಳ ಕಾಲ ದುಡಿದು ವಿದ್ಯಾ ಸಂಘದ ಏಳಿಗೆಗೆ ಕಾರಣಕರ್ತರಾಗಿದ್ದಾರೆ. ಶ್ರೀಯುತರು ಒಬ್ಬ ನಿಷ್ಠಾವಂತ ವ್ಯಕ್ತಿಯಾಗಿ ಸಮಾಜದ ಸೇವೆಯನ್ನು ಸಲ್ಲಿಸಿದ್ದಾರೆ. –ಸಂ]

1921ನೇ ಇಸವಿಯ ಖಾನೇಸುಮಾರಿ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಹಳೆಯ ಪುತ್ತೂರು ತಾಲ್ಲೋಕಿನಲ್ಲಿ 187 ಗ್ರಾಮಗಳಲ್ಲಿಯೂ ಕಾಸರಗೋಡು ಮತ್ತು ಮಂಗಳೂರು ತಾಲ್ಲೋಕುಗಳ ಸುಮಾರು 200 ಗ್ರಾಮಗಳಲ್ಲಿ ಗೌಡಸಮಾಜವರೇ ಬಹು-ಸಂಖ್ಯೆಯಲ್ಲಿರುವರು. ಇವರ ಸಂಖ್ಯೆ ಒಂದು ಲಕ್ಷಕ್ಕೆ ಮಿಾರಿತ್ತು. ಇವರು ಬೇಸಾಯವನ್ನವಲಂಬಿಸಿ ಶೇಕಡಾ 95ಕ್ಕೂ ಹೆಚ್ಚು ಜನ ವಿದ್ಯಾಹೀನರಾಗಿದ್ದುದರಿಂದ ಅವರಲ್ಲಿ ಒಗ್ಗಟ್ಟಿಲ್ಲದೆ ಅವರ ನಿಷ್ಕಳಂಕ ಹಾಗೂ ಸೌಮ್ಯತೆಯ ಸೌಕರ್ಯವನ್ನು ಪಡೆದುಕೊಂಡು ಇತರ ವಿದ್ಯಾವಂತ ಹಾಗೂ ಬಲಿಷ್ಠ ಸಮಾಜದವರು ಇವರಿಂದ ಬೇಕಾದಷ್ಟು ದುಡಿಸಿಕೊಂಡು ಇವರಲ್ಲಿದ್ದ ಕುಡಿಕತನ ಹವ್ಯಾಸವನ್ನು ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿ ಇವರ ಆಸ್ತಿಪಾಸ್ತಿಯನ್ನು ಬಹು ಕಮ್ಮಿ ಮೌಲ್ಯಕ್ಕೆ ಪಡೆದು ಹಲವಾರು ವಿಧಗಳಲ್ಲಿ ಇವರನ್ನು ಸೋಲಿಸಿ ನಿರ್ಗತಿಕರಾಗಿ ಮಾಡಿರುವ ನಿದರ್ಶನಗಳು ಕಂಡುಬರುತ್ತವೆ.

1909ನೇ ಇಸವಿಯಲ್ಲಿ ಸುಬ್ರಮಣ್ಯ ಕ್ಷೇತ್ರದ ಹತ್ತಿರದ ಆಗಿನ ಕಾಲದಲ್ಲಿ ಪ್ರಭಾವಶಾಲಿಗಳೂ ಜನಪ್ರಿಯರೂ ಆಗಿದ್ದ ದಿವಂಗತ ಕೂಜುಗೋಡು ಪದ್ಮಯ್ಯಗೌಡರು ಭವ್ಯವಾದ ಮನೆಯೊಂದನ್ನು ಕಟ್ಟಿಸಿ ಅದರ ಗೃಹಪ್ರವೇಶ ಸಮಾರಂಭಕ್ಕೆ ದಕ್ಷಿಣ ಕನ್ನಡ ಮತ್ತು ಕೊಡಗಿನ ಗೌಡ ಸಮಾಜದವರನ್ನು ಆಮಂತ್ರಿಸಿದ್ದರು. ಈ ಸಮಾರಂಭಕ್ಕೆ ಕೂಜುಗೋಡು ಮನೆಯಿಂದ ಕೊಡಗಿಗೆ ವಲಸೆಹೋಗಿದ್ದ ಕುಂಬಗೌಡನ ಕುಶಾಲಪ್ಪ ಪಾರುಪತ್ತೆಗಾರರು ಅಲ್ಲಿ ಕೂಡಿದ್ದ ಗೌಡ ಸಮಾಜದವರ ಸಭೆಯೊಂದನ್ನು ಏರ್ಪಡಿಸಿ ಸಮಾಜದವರ ನ್ಯೂನತೆಗಳನ್ನು ಕಷ್ಟಗಳನ್ನು ವಿವರಿಸಿ ಅದರ ಮುಂದಿನ ಅಭಿವೃದ್ಧಿಗೆ ದಕ್ಷಿಣ ಕನ್ನಡ ಗೌಡ ಸಮಾಜ ಅಭಿವೃದ್ಧಿ ಸಂಘದ ಸ್ಥಾಪನೆ ಮಾಡಿದರು.

ಅದರ ಕಾರ್ಯನಿರ್ವಾಹಣೆಯ ಬಗ್ಗೆ ಕೂಜುಗೋಡು ಪದ್ಮಯ್ಯಗೌಡರು ಅಧ್ಯಕ್ಷರೆಂತಲೂ, ಕೂಜುಗೋಡು ಕಟ್ಟೆಮನೆ ತಿಮ್ಮಪ್ಪಗೌಡರು ಮತ್ತು ಪಡು

ಬಲ್ನಾಡು ಕಟ್ಟೆಮನೆ ಅಂಬಾಡಿ ಗೌಡರು ಉಪಾಧ್ಯಕ್ಷ ರಾಗಿಯೂ ದಿವಂಗತ ತೋಟದ ಬೊಮ್ಮಣ್ಣ ಮಾಸ್ತರರು ಕಾರ್ಯದರ್ಶಿಯಾಗಿಯೂ ತೋಟದ ಕಾರ್ಯಪ್ಪನವರು ಉಪಕಾರ್ಯದರ್ಶಿಯಾಗಿಯೂ ಏನಡ್ಕ ಕುಕ್ಕಪ್ಪ ಮಾಸ್ತರರು ಖಜಾಂಚಿಯಾಗಿಯೂ ಆರಿಸಲಾಯಿತು. ನಂತರ ಶ್ರೀ ಮುರಳ್ಯ ದುಗ್ಗಣ್ಣಗೌಡರು ದ. ಕನ್ನಡ ಗೌಡರ ಸರ್ವರ ಸಭೆಯನ್ನು ಏರ್ಪಡಿಸಿ ಎಲ್ಲರ ಅಭಿಪ್ರಾಯವನ್ನು ಕೇಳಿ ಮುಂದಿನ ಕಾರ್ಯಕ್ರಮ ನಿರ್ಣಯಿಸಬೇಕೆಂದು ತೀರ್ಮಾನಿಸಲಾಯಿತು.

ಈ ಸಂದರ್ಭದಲ್ಲಿ ಪುತ್ತೂರಿನ ವಕೀಲರಾಗಿದ್ದ ದಿವಂಗತ ಶ್ರೀ ಮಲವಳ್ಳಿ ಶಿವರಾಯರು ಮತ್ತು ಬೆಳ್ತಂಗಡಿ ಮಂಗೇಶರಾಯರು ಗೌಡಜನರ ಮೇಲೆ ಹೆಚ್ಚಿನ ವಾತ್ಸಲ್ಯ ಹಾಗೂ ಪ್ರೇಮವನ್ನಿಟ್ಟು ಅವರಿಗೆ ಸಹಾಯವನ್ನು ಒದಗಿಸಿಕೊಡುತ್ತಿದ್ದರು. ಇವರು ಸದ್ರಿ ಮಹಾಸಭೆಯಲ್ಲಿ ಹಲವಾರು ಸೂಚನೆಗಳನ್ನಿತ್ತರು. ಇದಕ್ಕಾಗಿ ಪ್ರತಿ ಮಾಗಣೆಗೌಡರು ಮತ್ತು ಗ್ರಾಮಗೌಡರು ಅವರ ಅಧಿಕಾರ ವ್ಯಾಪ್ತಿಗೆ ಒಳಪಟ್ಟ ಪ್ರತಿ ಗ್ರಾಮದ ಘಟಕಗಳನ್ನು ಸಂಘದ ಮೂಲಕ ಸಮಾಜದ ಅಭಿವೃದ್ಧಿಯನ್ನು ಸಾಧಿಸಬೇಕೆಂದು ನಿರ್ಣಯಿಸಲಾಯಿತು.

ಈ ಸಮಯದಲ್ಲಿ ಸಮಾಜದಲ್ಲಿ ವೈಷಮ್ಯ ಬೆಳೆದುದರಿಂದ ಶ್ರೀ ಮಲವಳ್ಳಿ ಶಿವರಾಯರ ಸೂಚನೆಯಂತೆ ಒಂದು ವಿಶೇಷ ಮಹಾಸಭೆ ಕರೆದು ಆಗಿನ ಕಾಲದಲ್ಲಿ ಜನಪ್ರಿಯರಾಗಿದ್ದ ಡೆಪ್ಯುಟಿ ಕಲೆಕ್ಟರಾಗಿದ್ದ ಶ್ರೀ ಮಸ್ಕರೆನೆಸ್‌ರೆಂಬವರನ್ನು ಅಧ್ಯಕ್ಷರಾಗಿ ಬರಮಾಡಿಸಿ ಸಮಾಜದಲ್ಲಿ ಒಳಜಗಳಗಳಿರುವುದಕ್ಕೆ ವಿದ್ಯಾಭಿವೃದ್ಧಿಯೇ ತಕ್ಕ ಕಾರಣವೆಂದು ಶ್ರೀ ಸುಬ್ರಮಣ್ಯ ಕ್ಷೇತ್ರದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗೌಡ ವಿದ್ಯಾ ಸಂಘವು ಸ್ಥಾಪನೆಯಾಯಿತು. ಅದೇ ಪ್ರಕಾರ 1921ರಲ್ಲಿ ಸಂಘವನ್ನು ಮಂಗಳೂರಿನಲ್ಲಿ ರಿಜಿಸ್ಟರ್ ಮಾಡಲಾಯಿತು.



ಭಾಗ ೨

ಕಟ್ಟು ಕಟ್ಟಳೆಗಳು ಮತ್ತು ಸಾಮಾಜಿಕ ಜೀವನ

# ಗೌಡಜನರ ಕಟ್ಟುಕಟ್ಟಳೆಗಳು

(ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆಯುವ ರೀತಿ)

---

ಲೇಖಕರು : **ಶ್ರೀ ಕೊಳಂಬೆ ಪುಟ್ಟಣ್ಣಗೌಡರು, ವಿದ್ವಾನ್.**

(ಶ್ರೀ ಕೊಳಂಬೆ ಪುಟ್ಟಣ್ಣಗೌಡರು ದಕ್ಷಿಣ ಕನ್ನಡ ಜಿಲ್ಲೆಯ ಬೋರ್ಡು ಹೈಸ್ಕೂಲ್, ಸುಳ್ಯದಲ್ಲಿ ಕನ್ನಡ ಪಂಡಿತರಾಗಿದ್ದು ನಿವೃತ್ತರಾಗಿದ್ದಾರೆ. ಶಿಕ್ಷಕರಾಗಿ, ಯಕ್ಷಗಾನ ಅರ್ಥಧಾರಿಯಾಗಿಯೂ ಸಾಹಿತ್ಯ ಸೇವೆಯಲ್ಲಿಯೂ ತಮ್ಮ ಸರ್ವತೋಮುಖವಾದ ಪ್ರತಿಭೆಯನ್ನು ಪ್ರಕಟಿಸಿದ್ದಾರೆ. ಶ್ರೀಯುತರು " ಹೂವಿನ ಹಾಡು " ಮತ್ತು " ಕಾಲೂರು ಚೆಲುವೆ" ಎಂಬೆರಡು ಕಾವ್ಯಗಳನ್ನೂ, "ಹಸ್ತ ಸಾಮುದ್ರಿಕಾ ಶಾಸ್ತ್ರ"ವೆಂಬ ಪುಸ್ತಕವನ್ನೂ ಪ್ರಕಟಿಸಿದ್ದಾರೆ. ಅಲ್ಲದೆ ಇವರ "ಕನ್ನಡ ನುಡಿಯ ಕಡಲು" ಎಂಬ ಶಬ್ದಕೋಶ, "ಅಂತೆಗಳು" ಎಂಬ ಕವನ ಸಂಗ್ರಹ, "ತಲೆಯಂತೆ ಬಾಲ" ಎಂಬ ನಾಟಕ, "ಲಂಚ" ವೆಂಬ ಕಾದಂಬರಿ, "ಯಕ್ಷಗಾನ ಅರ್ಥಧಾರಿ" ಎಂಬ ಜೀವನ ಚಿತ್ರ ಪ್ರಕಟಣೆಗೆ ಸಿದ್ಧವಾಗಿವೆ. ಇವರ ಶುದ್ಧ ಕನ್ನಡದ "ಕಾಲೂರು ಚೆಲುವೆ" ಕನ್ನಡದ ಪ್ರಸಿದ್ಧ ಸಾಹಿತಿಗಳ ಮನ್ನಣೆಯನ್ನು ಗಳಿಸಿದೆ.)

ಮಲೆನಾಡಿನ ಹಸುರಿನ ಚೆಲುವೂ ಕಡಲ ತಡಿಯ ಬೆಡಗೂ ಮೈಗೂಡಿದಂತಿರುವ ದಕ್ಷಿಣ ಕನ್ನಡದ ಸೊಬಗು ರಮಣೀಯವಾದುದು. ಬಹಳ ಹಿಂದೆ ಕವಿವರ ಶಾಕೂರರು ಈ ನಾಡನ್ನು ಅಡ್ಡ ಹಾದು ಹೋದಾಗ ಈ ತೆಂಕನಾಡನ್ನು ಶಚೀದೇವಿಯ ಅಂತಃಪುರವೆಂದು ಕೊಂಡಾಡಿರುವರು. ಅವರು ಕಡಲತಡಿಯ ಚೆಲುವನ್ನೂ ಚೆಲುವೆಯರನ್ನೂ ಕಂಡು ಈ ಮಾತನ್ನು ಆಡಿರಬೇಕು. ಅವರ ಮಾತು ಮಲೆನಾಡಿಗೆ ಹೊಂದಿಕೆಯಾಗದು. ಹಿಂದಿನಿಂದಲೇ ತೆಂಕನಾಡಿನಲ್ಲೇ ಬಾಳಿನ ದೋಣಿಯನ್ನು ನಡೆಯಿಸುತ್ತಾ ಬಂದ ಜನಾಂಗಗಳಲ್ಲಿ ಗೌಡರ ಪಂಗಡವೂ ಒಂದು. ಗೌಡರು ತೆಂಕುದಿಕ್ಕಿನ ಎರಡುಮೂರು ತಾಲೂಕುಗಳಲ್ಲಿ ಹರಡಿಕೊಂಡಿರುವರು. ಆದರೆ, ಪಡುಕಡೆ ವಿರಳವಾಗಿಯೂ ಮೂಡು ಕಡೆ ಹೋದಂತೆ ಒತ್ತಾಯಿಸಿಯೂ ಜನಸಾಂದ್ರತೆ ಇದೆ. ಬಲರಾಮನ ಲೆಂಕ‡ರೆಂಬಂತೆ ನೇಗಿಲನ್ನೇ ಬಾಳಿನ ಹೆಗ್ಗುರುತಾಗಿ ಮಾಡಿಕೊಂಡಿರುವ, ಹೊಲದ ಗೈಮೆಯನ್ನು ನಂಬಿ ಬಂದಿರುವ ಗೌಡರು ಸುಮಾರು ಒಂದು ಲಕ್ಷಕ್ಕೆ ಕಡಮೆಯಿಲ್ಲದಷ್ಟು ಇದ್ದಾರೆ. ಐವತ್ತು ವರ್ಷಗಳ ಹಿಂದೆ ಒಬ್ಬನಾದರೂ ಪದವೀಧರನಿಲ್ಲದ ಈ ಸಮಾಜ ಹಿಂದುಳಿದವರ ವರ್ಗಕ್ಕೆ ಸೇರಿಸಲ್ಪಟ್ಟಿತು. ಇಂದು ಹತ್ತಾರು ಮಂದಿ ಬೇರೆ ಬೇರೆ

‡ ಲೆಂಕ= ಸೇವಕ

ವಿಭಾಗದ ಪದವೀಧರರಿದ್ದಾರೆ. ಎನಿತೋದಿದರೂ ಇತರ ಯಾವ ಹೋರೆಗೆ ಕೈಯಿಕ್ಕಿದರೂ ಹೊಲ ಗದ್ದೆಗಳನ್ನು ಮರೆಯುವರು ಇವರಲ್ಲ. ಹೊಲ ಗದ್ದೆಗಳ ದುಡಿಮೆ, ಅಕ್ಕಿ ಬತ್ತಗಳ ಸಂಪತ್ತು ಇವನ್ನೇ ನಂಬಿ ಕೈಮುಗಿದು ಬಾಳುವವರಿವರು. ಹೆಚ್ಚಿನವರು ಬಡವರು; ಮಲೆನಾಡಿನಲ್ಲಿ ಹೆಚ್ಚಿನ ಕಡೆ ಈಗಲೂ ಕೌಪೀನ ಸನ್ಯಾಸಿಗಳಾಗಿಯೇ ಹೊಲದಲ್ಲಿ ದುಡಿಯುತ್ತಾರೆ. ಹಗಲೆಲ್ಲ ಗದ್ದೆಗಳಲ್ಲೇ ಕೆಲಸ ಮಾಡಬೇಕಾಗಿರುವುದರಿಂದ ಇಲ್ಲದ ಬಟ್ಟೆಗಳನ್ನು ಉಟ್ಟು ದುಡಿದು, ನೈರ್ಮಲ್ಯಕ್ಕಾಗಿ ಅದನ್ನು ಎಷ್ಟು ಬಾರಿ ಒಗೆಯಬಹುದು? ಇವರಲ್ಲಿ ಹೆಚ್ಚಿನವರು ಈಗಲೂ ಮಗನ ಕೈಗೆ ಮೊದಲು ನೇಗಿಲನ್ನೇ ಕೊಡಲು ಬಯಸುವರಲ್ಲದೆ ಲೇಖನಿಯನ್ನು ಕೊಡಲು ಬಯಸುವುದಿಲ್ಲ. ಈ ಗೌಡ ಜನಾಂಗ ಇಲ್ಲಿಯೇ ಪರಂಪರಾಗತವಾಗಿ ಬಾಳುತ್ತ ಬಂದವರೇ? ಅಲ್ಲವೆ? ಈ ಗೌಡರು ಪರಂಪರೆಯಾಗಿ ಇಲ್ಲಿಯವರೇ ಆಗಿರದೆ, ಬಹಳ ಹಿಂದೆ ದಕ್ಷಿಣದ ಪೀಠಭೂಮಿಯ ಕಡೆಯಿಂದ ಇಲ್ಲಿಗೆ ಬಂದವರಿರಬೇಕು. ಶೃಂಗೇರಿಯ ಜಗದ್ಗುರುಗಳು ತಮ್ಮ ಗುರುಗಳೆಂದು ತಿಳಿದು ಗುರುಕಾಣಿಕೆಯನ್ನು ಮಾಸಲಾಗಿಡುವ ಕಟ್ಟಳೆಗಳನ್ನು ನೋಡುವಾಗ ಇವರು ಶೃಂಗೇರಿ ಆ ಕಡೆಯ ಪೀಠಭೂಮಿಯ ಕಡೆಯಿಂದ ಬಂದಿರಬಹುದೆಂದು ಊಹಿಸಲು ಎಡೆ ದೊರೆಯುತ್ತದೆ. ಗೌಡರಿಗೆ ಪುತ್ತೂರಿನ ಮೂಡು ದಿಕ್ಕಿನಲ್ಲೊಂದು ಪಡು ದಿಕ್ಕಿನಲ್ಲಿ ಇನ್ನೊಂದು ಹೀಗೆ ಎರಡು ಕಟ್ಟೆ ಮನೆಗಳಿರುತ್ತವೆ. ಈ ಕಟ್ಟೆ ಮನೆಯವರಿಗೆ ಕಟ್ಟು ಕಟ್ಟಳೆಗಳ ಮೇಲೆ ಒಂದು ಬಗೆಯ ಹಿಡಿತವಿರುತ್ತದೆ. ಸಮಾಜದ ಆಚರಣೆಗಳನ್ನು ಮೀರಿ ಅಕ್ರಮವಾಗಿ ನಡೆಯುವವರನ್ನು ಬಹಿಷ್ಕರಿಸಿ ಸಮಾಜದಿಂದ ಹೊರಗಿಕ್ಕಲಿಕ್ಕೂ ಕಟ್ಟೆಮನೆಯವರಿಗೆ ಅಧಿಕಾರವಿದೆ. ಈ ಎರಡು ಕಟ್ಟೆ ಮನೆಗಳೂ ಪುತ್ತೂರು ತಾಲೂಕಿನಲ್ಲಿಯೇ ಇದೆ. ಕಟ್ಟೆ ಮನೆಯವರ ಕೈಕೆಳಗೆ ಮಾಗಣೆ ಗೌಡರೂ, ಮಾಗಣೆ ಗೌಡರ ಕೈಕೆಳಗೆ ಗ್ರಾಮ ಗೌಡರೂ ಸಾಮಾಜಿಕ ಕಟ್ಟಳೆಗಳ ಮೇಲ್ವಿಚಾರಣೆ ನಡೆಸುತ್ತಿರುವರು. ಕಟ್ಟೆ ಮನೆಯವರು ಶೃಂಗೇರಿ ಮಠಕ್ಕೆ ಗುರು ಕಾಣಿಕೆ ಕೊಡಬೇಕು. ಕಟ್ಟೆಮನೆಯವರಿಗೆ ಗೌಡ ಸಮಾಜವೇ ಕಾಣಿಕೆ ಕೊಡುವುದಕ್ಕಿದೆ. ಹೀಗಾಗಿ ಗೌಡ ಜನಾಂಗ ಶೃಂಗೇರಿ ಹಾಗೂ ದಕ್ಷಿಣ ಪೀಠಭೂಮಿಯ ಕಡೆಯಿಂದ ತುಳು ನಾಡಿಗೆ ಬಂದಿರಬೇಕೆಂದು ಊಹಿಸಬಹುದು.

ಗೌಡರು ಅದ್ವೈತ ಮತ ಸ್ಥಾಪಕರಾದ ಶಂಕರಾಚಾರ್ಯರ ತತ್ತ್ವವನ್ನು ಅನುಸರಿಸುವಂತೆ ತೋರುತ್ತದೆ. ಭಗವಂತನು ಎಲ್ಲೆಲ್ಲಿಯೂ ಇರುವುದನೆಂಬುದರಿಂದ ಯಾವ ರೂಪದಿಂದ ಅವನನ್ನು ಆರಾಧನೆ ಮಾಡಿದರೇನು? ಬಂಗಾರದಿಂದ ಮಾಡಿದ ಕೊಡವು ಯಾವ ಆಕಾರದಿಂದ ಇದ್ದು ಯಾವುದೇ ಒಂದು ಹೆಸರಿನಿಂದ ಕರೆಯುವಂತಾದರೇನು? ಎನ್ನುವಂತೆ ಕೆಲವರು ವಿಭೂತಿ ಧರಿಸುವ ಶಿವೋಪಾಸಕರಾಗಿದ್ದರೆ ಕೆಲವರು ನಾಮ ಧರಿಸಿ ವೈಷ್ಣವರಂತೆ ವರ್ತಿಸುವರು. ಕೆಲವರಿಗೆ ದುರ್ಗಿ ಕುಲದೈವ. ಕೆಲವರಿಗೆ ಸಬ್ಬಮ್ಮ ‡ (ಶರ್ವಾಂಬೆ) ಮನೆ ದೇವರು. ಕೆಲವು ಬಳಗದವರು ಭೂತಾರಾಧಕರು. ಇವೆಲ್ಲ ಓದಿ ತಿಳಿಯದೆ ಎಡೆಬಿಡದ ಆಚರಣೆಯಿಂದ ಬಂದ ಭಕ್ತಿ ಮಾರ್ಗಗಳು.

ಬತ್ತದ ಕೃಷಿ ಗೌಡರ ಹುಟ್ಟನ್ನೇ ಅಪ್ಪಿಕೊಂಡು ಬಂದ ವೃತ್ತಿ. ಹೆಚ್ಚು ತಿಳುವಳಿಕೆ ಇಲ್ಲದವರಾದರೂ ಗೌಡರು-ನಾವು ಹೊಲಗದ್ದೆಗಳನ್ನು ಮರೆಯಬಾರದು-ಎತ್ತುಗಳು ನಮ್ಮ ಇಹಪರ ಸಾಧನಗಳು-ಅಕ್ಕಿ ಬತ್ತದ ಹುಸಿಯಾಡಬಾರದು-ಉಳಲು ಎತ್ತು ಕೊಡುವುದು-ಬೀಜ ಕೊಡುವುದು-ಬೇಸಾಯಕ್ಕೆ ನೆರವು ನೀಡುವುದು-ಇವೆಲ್ಲ ಹೆಚ್ಚಿನ ಸತ್ಕರ್ಮಗಳೆಂದು ತಿಳಿಯುತ್ತಾರೆ. ಭಿಕ್ಷೆ ಎತ್ತುವುದು ನರಕಕ್ಕೆ ಕಾರಣವೆಂದು ತಿಳಿದು ಗೌಡರೆಲ್ಲ ಅದನ್ನು ನಿಷೇಧಿಸುತ್ತಾರೆ. ಯಾವ ಬಗೆಯ ಎಡರು ತೊಡರುಗಳಿದ್ದರೂ ಬೇಡಿ ಹೊಟ್ಟೆ ಹೊರೆಯಲು ಹಿಂಜರಿಯುತ್ತಾರೆ. ಗೌಡ ಬೇಡ ಬೇಕಾದರೂ ಒಂದು ನೇಗಿಲ ಹೆಗ್ಗುರುತನ್ನು ಕೊರಳಿಗೆ ಸಿಕ್ಕಿಸಿಕೊಂಡು ಭಿಕ್ಷೆಗೆ ಹೋಗಬೇಕಂತೆ; ಇವೆಲ್ಲ ಪಡೆ ಮಾತುಗಳಿದ್ದರೂ ಇರಬಹುದು. ಗೌಡರ ಶುಭಾಶುಭ ಕರ್ಮಗಳಲ್ಲಿ ಯಾವುದೂ ಧಾನ್ಯಗಳಿಲ್ಲದೆ ನಡೆಯುವಂತೆಯೇ ಇಲ್ಲ. ದೀಪಾವಳಿ ಹಬ್ಬದಲ್ಲಿ ನೇಗಿಲು, ನೊಗ, ಸೇರು ಕಳಸೆ ಮೊದಲಾದುವನ್ನು ಗಂಧ

---

‡ ಸಬ್ಬ(ಸರ್ವ)+ಅಮ (ದೇವಿ)—ಸರ್ವಾಂಬೆ; ಆದಿಶಕ್ತಿ

ಧೂಪಗಳಿಂದ ಪೂಜಿಸುತ್ತಾರೆ. ಅಂದು ಬಲೀಂದ್ರನ ಮೂರ್ತಿಯೆಂದು ಹಾಲೆ ಮರದ ಎರಡು ಗೂಟಗಳನ್ನು ನೆಟ್ಟು ಅದನ್ನು ಪುಷ್ಪಹಾರದಿಂದ ಅಲಂಕರಿಸಿ ವೈಭವ ದಿಂದ ಪೂಜಿಸುತ್ತಾರೆ. ಶೃಂಗಾರಕ್ಕಾಗಿ ಉಪಯೋಗಿಸುವ ಎಲ್ಲಾ ವಸ್ತುಗಳು ಹಳ್ಳಿಯಲ್ಲಿರುವ ಹಣ್ಣು, ಕಾಯಿ, ಹೂ ಎಲೆಗಳಲ್ಲದೆ ಬಂಗಾರದೂ ಜಿಲಿಗಿ ತಂಪ ಬಣ್ಣದ ಕಾಗದಗಳು, ಮೇಣದ ಬತ್ತಿ, ಪಟಾಕಿ ಮೊದಲಾದುವು ಇಲ್ಲ. ಈಗೀಗ ಅವು ಬರತೊಡಗಿ ಹಳ್ಳಿಯ ಪ್ರಾಕೃತಿಕ ಸೌಂದರ್ಯವನ್ನು ಮೆಟ್ಟಿ ನೂಕುತ್ತಿರುವುದು ಬೇಸರದ ಸಂಗತಿಯು. ದೀಪಾವಳಿಯ ದಿನ ಗೋ ಪೂಜೆ ನಡೆ ಯುತ್ತದೆ. ಎತ್ತು ದನಗಳನ್ನು ಅಂದು ಮೀಯಿಸುವವರೂ ಇಲ್ಲ, ಅದು ಕೊನೆಗೆ ಕಾಲಿಗೆ ನೀರೆರೆಯುವ ಹಂತಕ್ಕಿಳಿದು ಇಂದು ಅವೆಲ್ಲ ಮಾಯವಾಗಿ ಹೂಮಾಲೆ ಹಾಕಿ ಕುಂಕುಮದ ತಿಲಕವಿಟ್ಟು, ಏನಾದರೂ ತಿನ್ನಲು ಕೊಟ್ಟು ಒಂದು ಬಗೆಯಲ್ಲಿ ಇಂದೂ ಗೋ ಪೂಜೆ ನಡೆಯುತ್ತದೆ. ಹಟ್ಟಿಯಲ್ಲಿಯೂ ದೀಪ ಉರಿಯುವಂತೆ ಮಾಡುತ್ತಾರೆ. ಅಂದು ಹೊಲ ಗದ್ದೆಗಳಲ್ಲಿಯೂ ಹಣತೆಯ ದೀಪಗಳ ನ್ನಿಟ್ಟು ದೀಪಾವಳಿ ತನ್ನ ಹೆಸರನ್ನು ಮಿರುಗಿಸುತ್ತದೆ. ದೀಪಾವಳಿ ದಿನ ಅಡಕೆ ಮರವನ್ನಾಗಲಿ, ಕೋಣಗಳ ನ್ನಾಗಲಿ ಪೂಜಿಸುವುದನ್ನು ನಾನು ಕಾಣಲೇ ಇಲ್ಲ. ಅಂದು ಆಜಲರು, ಪರವರು ಮೊದಲಾದವರು ಭಿಕ್ಷೆಗೆ ಬರುವರು ; ಅವರಿಗೆಲ್ಲ ಅಕ್ಕಿ ಬತ್ತದೊಡನೆ ದೋಸೆಗಳ ಉಡುಗೊರೆ ದೊರೆಯುವುದು. ಕೊಡಗಿನಲ್ಲಿ ನಡೆಯುವ ಸಡಗರದ ಹುತ್ತರಿ ಹಬ್ಬಕ್ಕೆ ಸರಿಯಾಗಿ ದಕ್ಷಿಣ ಕನ್ನಡ ದಲ್ಲಿ ದೀಪಾವಳಿ ನಡೆಯುತ್ತದೆ.

ಗೌಡರ ಮದುವೆ–ಹೆಚ್ಚಾಗಿ ಹರಯ ತುಂಬಿದ ಯುವಕ ಯುವತಿಯರೊಳಗೆ ವಿವಾಹ ನಡೆಯುವುದು. ಮದುವೆ ಮಾತಿನ ಮೊದಲ ದಿನದಿಂದ ತೊಡಗಿ ಕೊನೆಯ ನಾಗೋಲಿಯ ಸ್ನಾನದವರೆಗೆ ವೀಳ್ಯದೆಲೆಯ ವೆಚ್ಚ ಬಹಳ ಹೆಚ್ಚು. ಹುಡುಗಿಯನ್ನು ಕೊಡುವೆವೆಂದ ತವ ರವರು ನಿಶ್ಚಯ ಮಾತನ್ನು ಕೊಡುವಂದು ಹುಡುಗನ ಕಡೆಯಿಂದ ಬಳಗಕ್ಕೆಲ್ಲ ತಾಂಬೂಲ ನೀಡುವ ಕ್ರಮವಿದೆ. ಯಾರಾದರೊಬ್ಬ ಆ ವೀಳ್ಯವನ್ನು ಸ್ವೀಕರಿಸದಿದ್ದರೆ ಆವನು ಮದುವೆಗೆ ಒಪ್ಪಿಲ್ಲವೆಂದು ತಿಳಿದು ಅವನನ್ನು ಒಪ್ಪಿಸುವ ಹಂಚಿಕೆಯನ್ನು ಹುಡುಕುವರು. ಆ ದಿನ ಹುಡುಗಿಗೂ ವೀಳೆಯ ನೀಡುವರು. ಅಂದು ಆ ಹುಡುಗಿ ವೀಳ್ಯವನ್ನು ತಿನ್ನಬೇಕು ; ಆಕೆಯು ತಿನ್ನದಿದ್ದರೆ ಮದು ವೆಗೆ ಆಕೆಯ ಸಮ್ಮತಿ ಇಲ್ಲವೆಂದು ತಿಳಿದು, ಮುಂದೆ ಮದುವೆಯ ಮಾತು ಮುರಿದುಹೋಗಲೂ ಬಹುದು. ಹುಡುಗಿಯ ಅಭಿಪ್ರಾಯವನ್ನು ಕಡೆಗಣಿಸಿ ಬಲಪ್ರಯೋ ಗದಿಂದ ಮದುವೆ ಮಾಡಿ ಅನರ್ಥಗಳಾದದ್ದೂ ಉಂಟು. ಹುಡುಗಿಯರು ನಾಚಿಕೆಯಿಂದ ವರನನ್ನು ಮೆಚ್ಚದಿದ್ದರೂ ಬಾಯ್ಬಿಟ್ಟು ಹೇಳುವುದಿಲ್ಲವಾದುದರಿಂದ ಅವರಿಗೆ ತಮ್ಮ ಅಭಿಪ್ರಾಯವನ್ನು ಮಾತಾಡದೆ ಸೂಚಿಸಲು ವೀಳ್ಯ ನೀಡಿ ಹೊಸೆದ ಹಂಚಿಕೆಯು ಹೊಗಳಬೇಕಾದ ಯುಕ್ತ ಹಂಚಿಕೆ ಯೆಂದು ಹೇಳಬೇಕಾಗುತ್ತದೆ. ಕರಾರಿನ ದಿನ ಸುಮಾರು ಒಂಬತ್ತು ವೀಳ್ಯಗಳಿವೆ. ದೇವರು, ಗುರು, ತಂದೆ, ತಾಯಿ, ಮಾವ, ಬಳಿ, ಮೊದಲಾದ ಹೆಸರಿನ ವೀಳ್ಯ ಗಳು. ಇವೆಲ್ಲ ಕುರುಡು ನಡೆವಳಿಕೆಗಳಾಗಿರದೆ ಬೇಕಾದ ಬಳಗದವರ ಸಮ್ಮತಿಯ ಆಶೀರ್ವಾದವನ್ನು ಪಡೆಯುವ ಸೂತ್ರಗಳೆಂದು ಹೇಳಬಹುದು. ವರನು ದಿಬ್ಬಣದೊಡನೆ ವಧುವಿನ ಗೃಹಕ್ಕೆ ಬಂದು ಅಲ್ಲೇ ಮದುವೆಯಾಗುವುದು ಹೆಚ್ಚು. ವರನು ಚಪ್ಪರದ ಬಾಗಿಲಿಗೆ ಬಂದೊಡನೆ ವಧು ವಿನ ತಮ್ಮನೊಬ್ಬ ವರನ ಕಾಲಿಗೆ ನೀರೆರೆಯುವನು. ಇದೊಂದು ಬಗೆಯ ವರನ ಪೂಜೆಯು. ಆಗ ವರನು ಉಪುಗೊರೆಯಾಗಿ ತುಸು ಹಣ ನೀಡುವನು. ಆಮೇಲೆ ಐದೆಯರು * ಆರತಿಯಿಂದ ವರನನ್ನು ಸ್ವಾಗತಿಸುವರು. ಮೊದಲೇ ವರನಿಂದ ಕೊಡಲ್ಪಟ್ಟ ಸೀರೆಗಳು, ರವಕೆ, ಸುಮಂಗಲೆಯ ಹೆಗ್ಗುರುತಾದ ತಾಳಿಯನ್ನುಳಿದ ಇತರ ಆಭರಣಗಳು ಇವುಗಳಿಂದ ವಧು ಸಿಂಗರಿಸಲ್ಪಡುವಳು. ಆಗಲೇ ವರನು ಕೊಡಬೇಕಾದ ಹತ್ತೂವರೆ ರೂಪಾಯಿ ಕನ್ಯಾ ಶುಲ್ಕವನ್ನು ವರನು ಕಡೆಯವರು ಕೊಟ್ಟು ಆದ ಮೇಲೆ ವಧುವನ್ನು ಕರೆತರುವರು. ವರನು ಕಲಶ ಕನ್ನಡಿ ಹಿಡಿದ ತಂಗಿಯ ಇಲ್ಲವೆ ಅಕ್ಕನ ಹಿಂದಿನಿಂದ, ಮಡಿವಾಳನು ಹಾಸಿದ ನಡೆ ಬಟ್ಟೆಯ ಮೇಲೆ ಮದುವೆಯ ಮಂಟಪಕ್ಕೆ ಬರುವನು. ಮನೆದೇವರಿಗೆ ಹರಕೆ ಕಾಣಿಕೆಯನ್ನು ಮೊಸಲಿಟ್ಟು ಬಿಳಿ ಸೀರೆಯುಟ್ಟು ವಧುವನ್ನು ಸೋದರ

---

* ಐದೆಯರು= ಸುಮಂಗಲೆಯರು.

ಮಾವನೇ ಎತ್ತಿಕೊಂಡು ಇಲ್ಲವೆ ಕೈಹಿಡಿದು ನಡೆಯಿಸಿ ಕೊಂಡಾದರೂ ಕರೆತರುವನು. ವಧುವು ಆಕೆಯ ತಾಯ ತವರ್ಮನೆಗೆ ಸಲ್ಲಬೇಕಾದ ಹುಡುಗಿಯಾಕೆಯೆಂದೂ ಆದುದರಿಂದ ಅವರೇ ಆಕೆಯನ್ನು ಹೆರರಿಗೆ ನೀಡಲು ಹಕ್ಕು ದಾರರೆಂದೂ ತೋರ್ಪಡಿಸುವ ಗುರಿಯಿಂದ ಈ ನಿಯಮ ಹುಟ್ಟಿರಬೇಕು. ಈ ಮಧ್ಯೆ ಕರೆದು ಹೇಳುವ ಒಂದು ವಿಶಿಷ್ಟ ಕ್ರಮ ಕುಳಿತಾಗ ನಿಂತಾಗ ಹೆಜ್ಜೆ ಹೆಜ್ಜೆಗೆ ಕಾರ್ಯ ಸೂಚನೆಯ ಕ್ರಮ ಅಲ್ಲಲ್ಲಿಗೆ ಸೇರಿಕೊಂಡಿದ್ದು ಬಿಟ್ಟು ಹೋದರೆ ವರನ ಕಡೆಯವರು ತಪ್ಪಿಗೆ ಗುರಿಯಾಗಬೇಕು. ಈ ಪದ್ಧತಿ ಗ್ರಾಮ್ಯವೆಂದು ಹಳಿದು ಈಗೀಗ ಅದನ್ನು ಕಡಿಮೆ ಮಾಡುತ್ತಾ ಬಂದಿದ್ದಾರೆ. ಬ್ರಾಹ್ಮಣರಲ್ಲಿ ಅಡಿ ಗಡಿಗೆ ಪುರೋಹಿತರು ಮಂತ್ರ ಹೇಳುತ್ತಾರೆ. ಮಂತ್ರ ಗಳ ಅರ್ಥವನ್ನು ಪುರೋಹಿತನಾಗಲಿ, ವಧೂವರರಾಗಲಿ, ಸಭಿಕರಾಗಲಿ ಸರಿಯಾಗಿ ತಿಳಿದಿರಬಹುದೇ ಎಂದು ಅನು ಮಾನಕ್ಕೆ ಎಡೆಯಿದೆ. ಆದರೆ ಜನರು ತಿಳಿದ ಮಾತಿನಲ್ಲಿ ಕರೆದು ಹೇಳುವುದನ್ನು ಎಲ್ಲರೂ ತಿಳಿಯಬಹುದು. ಪುರೋಹಿತರು ಸಂಸ್ಕೃತದಲ್ಲಿ ಹೇಳುವ ಕುಲ, ಗೋತ್ರ, ವಧೂವರರ ನಾಮ ಮೊದಲಾದುವನ್ನು ತಿಳಿದ ಕನ್ನಡದ ನುಡಿಗಳಲ್ಲಿ ಗೌಡರು ಕರೆದು ಹೇಳಿದರೆ ಅದನ್ನು ಮೆಚ್ಚ ಬೇಕೇ ಹುಚ್ಚೆನ್ನಬೇಕೇ ?

ವಧುವನ್ನು ಹಸೆಯಿಂದ ಎಬ್ಬಿಸುವಾಗಲೂ ಹುಡುಗಿ ಯನ್ನು ಹಸೆಯಿಂದ ಎಬ್ಬಿಸುವೆವೆಂದು ಬಂಧು ಬಳಗದವ ರೆನ್ನೆಲ್ಲ ಕರೆದು ಹೇಳಬೇಕು. ಇದು ಪವಿತ್ರ ನಿಯಮ. ಯಾರಾದರೂ ವಿವಾಹವನ್ನು ಆಕ್ಷೇಪಿಸುವಂತಿದ್ದರೆ ಆಗಲೇ ಹೇಳಬೇಕೆಂದೂ ವಧು ವಿವಾಹಕ್ಕೆ ಸಿದ್ಧಳಾದಳೆಂದೂ ಇತರ ಕಾರ್ಯಕ್ರಮಗಳೆಲ್ಲ ಸಿದ್ಧವಾಗಲೆಂದೂ ಬಂಧು ಬಳಗದ ಯಾರಾದರೂ ತುಸು ದೂರದಲ್ಲಿದ್ದರೆ ಬಳಿಗೆ ಬರ ಬೇಕೆಂದೂ ಕೊಡುವ ಎಚ್ಚರವಿದೆಂದು ತುಸು ವಿಚಾರ ಮಾಡುವಾಗ ತಿಳಿದುಬರುವುದು. ಕಲಶ ಕನ್ನಡಿ ಹಿಡಿದ ಸಹೋದರಿಯೊಬ್ಬಳು ವಧುವಿನ ಮುಂದಿನಿಂದ ಬರುವರು.

ಧಾರೆಯು (ಮದುವೆ) ಎರಡು ವಿಧವಾಗಿ ನಡೆಯು ವುದು. ನಾಡಿನ ಮೂಡು ದಿಕ್ಕಿನಲ್ಲಿ ಹೆಚ್ಚಾಗಿ ಬ್ರಾಹ್ಮಣ ಪುರೋಹಿತರಿದ್ದೇ ಆಗುವುದು. ಪಡುದಿಕ್ಕಿನಲ್ಲಿ ಗೌಡರಲ್ಲಿ ತಂದೆಯೇ ಪುರೋಹಿತನ ಸ್ಥಾನದಲ್ಲಿದ್ದು ಮದುವೆ ನಡೆ ಯುವುದು. ಬ್ರಾಹ್ಮಣ ಪುರೋಹಿತನಿದ್ದರೆ ಆತನು ಅಡಿಕೆ ಮರದ ಸಿಂಗಾರದ ಹೂವಿನಿಂದ ವಿವಾಹ ಮಾಲಿಕೆ ಗಳನ್ನು ಮಾಡಿಟ್ಟಿರುವನು. ಧಾರೆಗಾಗಿ ಕಲಶವನ್ನು ಸಿದ್ಧಪಡಿಸಿಟ್ಟಿರುವನು. ಮಂಟಪದಲ್ಲಿ ಮೂಡುಪಡುವಾಗಿ ಎರಡು ಕಡೆ ಮೆಟ್ಟಕ್ಕಿಯನ್ನು ಹರಡುವರು. ಮೂಡು ಕಡೆಯಿಂದ ವರನೂ ಪಡು ಕಡೆಯಿಂದ ವಧುವೂ ಮೆಟ್ಟ ಕ್ಕಿಯ ಮೇಲೆ ನಿಲ್ಲುವರು. ನಡುವೆ ಬಟ್ಟೆಯ ತೆರೆ ಹಿಡಿ ಯುವರು. ವಧುವು ಮೊದಲು ವರನ ಕೊರಳಿಗೆ ಹೂ ಮಾಲೆಯಿಕ್ಕುವಳು. ಆಮೇಲೆ ವರನು ಹೂಮಾಲೆ ಯಿಕ್ಕುವನು. ವರನ ಕಲಶ ಕನ್ನಡಿಯ ಕಲಶದ ಬಿಂದಿಗೆ ಯನ್ನು ಬಿಗಿದೇ ಇರುವ ತಾಳಿಯನ್ನು ಈಗ ವರನ ಕೈಗೆ ನೀಡುವನು. ತಂದೆಯು ಆ ಕಲಶವನ್ನು ಹರಕೆಗೆಂಬಂತೆ ಸಭಿಕರೆಲ್ಲರ ಹಸ್ತಸ್ಪರ್ಶಕ್ಕೆ ನೀಡುವನು. ಆಮೇಲೆ ಹುಡುಗಿಯ ಕೈಮೇಲೆ ಹುಡುಗನ ಕೈಮೇಲಿಟ್ಟು ಕೆಳಗಣ ಹರಿವಾಣಕ್ಕೆ ಬೀಳುವಂತೆ ಮೂರು ಭಾರಿ ಧಾರೆ ಎರೆಯು ವನು. ವಿವಾಹ ಬಂಧನ ಬಿಗಿಯಿತು. ಧಾರೆಯೆರೆಯು ವಾಗಲೂ ವಧೂವರರ ಕುಲಗೋತ್ರಗಳನ್ನು ಹೇಳಿ ಇಂತಹ ವಧೂವರರ ಮದುವೆಯಾಗುತ್ತದೆಂದು ಕೂಗಿ ಹೇಳುತ್ತಲೆ ಇರುವರು. ಇದರಿಂದ ಮದುವೆಯನ್ನು ಬಹಿರಂಗಪಡಿಸಿದಂತಾಯಿತು. ಆಮೇಲೆ ವಧೂವರರು ಮಂಟಪಕ್ಕೆ ಪ್ರದಕ್ಷಿಣೆ ಬಂದು ಮಂಟಪದ ಮೇಲೆ ಮಂತ್ರಾ ಕ್ಷತೆ ಚೆಲ್ಲಿದೊಡನೆ ಹುಡುಗಿಯ ತಂದೆ ವಧೂವರರನ್ನು ಒಳಗೆ ಕರೆದೊಯ್ಯುವನು. ಆಮೇಲೆ ಬಂಧು ಬಳಗದ ಸತ್ಕಾರ, ಒಸಗೆಯ ಇನ್ನುಣಿಸು ಮೊದಲಾದುವುಗಳಿಂದ ಮದುವೆ ಮುಗಿಯುವುದು. ಒಮ್ಮೆ ಮದುವೆಯಾದರೆ ಅದರ ಕಟ್ಟಿನಿಂದ ತಪ್ಪಿಸಿಕೊಳ್ಳುವುದು ಕಷ್ಟ. ಮದುವೆ ಯಲ್ಲಿ ಹಲವಾರು ಬಾರಿ ಕರೆದು ಹೇಳುವ ಕಟ್ಟಳೆ ಕಟ್ಟು ನಿಟ್ಟಿನದಾಗಿದೆ. ಇವೆಲ್ಲ ಪವಿತ್ರ ಭಾವನೆಯ ಮದುವೆಯ ಗೌರವದ ಹೆಗ್ಗುರುತುಗಳೆಂದು ನನ್ನ ಅಭಿಪ್ರಾಯ. ಉಂಡ ಎಲೆಯನ್ನು ಹೊರಕ್ಕೆ ಎಸೆದುಬಿಡುತ್ತಿದ್ದ ಹಿಂದಿನ ದಿನಕ್ಕೆ ಅದು ಚೆನ್ನಾಗಿತ್ತು. ಇಂದು ನೂರಾರು ಮಂದಿ ಉಂಡ ಬಟ್ಟಲಿನಲ್ಲಿಯೇ ವಿಶ್ರಾಂತಿ ಭವನದಲ್ಲಿ ಆಹಾರ ಸೇವನೆ ಮಾಡುವ ಸುಧಾರಣೆ ಎನ್ನುವ ಹೊಸ ಮನೋಭಾವಕ್ಕೆ ಅವೆಲ್ಲ ಒಗ್ಗದೆ ಇರಬಹುದು.

ಮದುವೆಯಾದಮೇಲೆ ಹುಡುಗಿಯನ್ನು ಕಳುಹಿಸಿ ಕೊಡುವ ಪದ್ಧತಿಯಿದೆ. ಹುಡುಗಿಗೆ ನೀತಿ ಬೋಧೆ ಮಾಡುವ ಕಟ್ಟಳೆಯಿದೆ. ಬ್ರಾಹ್ಮಣ ಸಮಾಜದಲ್ಲಿ ಇದು ಸಂಸ್ಕೃತ ಶ್ಲೋಕಗಳ ರೂಪದಲ್ಲಿದ್ದು ಪುರೋಹಿತನು ಹೇಳುತ್ತಾನೆ. ಕಾಳಿದಾಸ ಕವಿಯು ಆ ಮಾತುಗಳ ಸಾರವೆಂಬಂತೆ ಶಕುಂತಲೆಯನ್ನು ಪತಿಗೃಹಕ್ಕೆ ಕಳುಹಿಸಿ ಕೊಡುವಾಗ ಕಣ್ವನು ಹೇಳಿದನೆನ್ನುವಂತೆ ಸಂಸ್ಕೃತ ಶ್ಲೋಕಗಳಲ್ಲಿ ಹಾಡಿ ಪ್ರಖ್ಯಾತನಾದನು. ಗೌಡರ ಮದುವೆಯಲ್ಲಿ ನೀತಿಯ ಮಾತುಗಳು ಕನ್ನಡದ ಬಿಡು ನುಡಿಗಳಿಂದ ಸಭಿಕರೆಲ್ಲರೂ ತಿಳಿಯುವಂತೆ ಹೇಳಿ ವಧೂ ವರರನ್ನು ಕೈಹಿಡಿಸಿ ಕಳುಹಿಸಿ ಕೊಡುತ್ತಾರೆ. ದಿಬ್ಬಣ ಒಮ್ಮೆ ಹೋದಂತೆ ಹೋಗಿ ಮತ್ತೊಮ್ಮೆ ಹೊಸತಾಗಿ ಬರುವಂತೆ ವಧುವಿನ ಕೈಯಲ್ಲಿ ತುಪ್ಪದ ಬಿಂದಿಗೆಯನ್ನು ಹಿಡಿಸಿಕೊಂಡು ಒಳಗೆ ಬರುವುದು. ಆಮೇಲೆ ಕ್ರಮದಂತೆ ವಧುವನ್ನು ಪತಿಗೃಹಕ್ಕೆ ಕಳುಹುವರು. ವರನ ಮನೆಯಲ್ಲಿ ಉಡುಗೊರೆ ಊಟಗಳಲ್ಲದೆ ನಾಗೋಲಿಯೆಂಬ ಮದುವೆಯನ್ನು ಮುಗಿಸುವ ನಾಗೋಲಿಯೆಂಬ ಸ್ನಾನ ಕ್ರಮವಿದೆ. ವಧೂವರರಿಗೆ ಸುಮಂಗಲೆಯರು ಗರಿಕೆ ಹುಲ್ಲಿನಲ್ಲಿ ಎಣ್ಣೆ ಅರಸಿನ ಪೂಸುವರು. ಆಮೇಲೆ ವಧುವು ವರನ ಮೈಗೆ ಅರಸಿನ ತೀಡಬೇಕು. ಗಂಡಹೆಂಡಿರ ಪರಸ್ಪರ ಸ್ಪರ್ಶ ಮಾಡುವ ಕಟ್ಟಳೆಯಿದು. ಆಮೇಲೆ ಒಬ್ಬರ ಮೇಲೊಬ್ಬರು ನೀರು ಚೆಲ್ಲುವ ಓಕಳಿಯಾಟ ನಡೆಯುವುದು. ಅದಕ್ಕೆ ಮೊದಲೇ ಪಾತ್ರೆಯಲ್ಲಿ ನೀರು ಹಾಕಿ ಅದಕ್ಕೊಂದು ಉಂಗುರ ಹಾಕಿ ಅದನ್ನು ಹುಡುಕುವಲ್ಲಿ ಗಂಡ ಹೆಂಡಿರ ಮೇಲಾಟ ನಡೆಯುವುದು. ವಧುವೇ ಉಂಗುರವನ್ನು ಪಡೆದರೆ ಮಹಿಳೆಯರೆಲ್ಲ ಆನಂದ ಸಾಗರದಲ್ಲಿ ತೇಲಾಡಿ ಕೈ ಚಪ್ಪಾಳೆ ಹೊಡೆಯುವರು.

ಆಮೇಲೆ ಮಾಡಿದ ನೈವೇದ್ಯವನ್ನು ವರನಿಗೆ ವಧುವೇ ಇಕ್ಕಿ ಅವನುಂಡಮೇಲೆ ಅದೇ ಎಂಜಲೆಲೆಯಲ್ಲಿ ವಧುವು. ತಾನೂ ಇಕ್ಕಿ ಉಂಡು ವಿನೋದದೊಡನೆ ಮದುವೆ ಮುಗಿಯುವುದು. ಮದುವೆಯ ಹೆಚ್ಚಿನ ಸಂಪ್ರದಾಯಗಳು ಹಿರಿಯರ ಮುಗ್ಧ ತಿಳಿವಿನ ತಿರುಳಂತಿರುತ್ತವೆ.

**ಗೌಡರ ಭಾಷೆ :–** ಗೌಡರು ಮೊದಲಿನಿಂದಲೂ ಕನ್ನಡ ಮಾತಾಡುವವರೇ ಆಗಿದ್ದರೆಂದು ತೋರುತ್ತದೆ. ಇಂದು ಕೆಲವರು ತುಳುವರಿದ್ದರೂ ಅವರೆಲ್ಲ ತುಳುನಾಡ ಬುಡಕಟ್ಟಿನ ಸಂಪರ್ಕದಿಂದ ತುಳುವರಾದರೆಂದು ತೋರುತ್ತದೆ. ಕೆಲವು ಕನ್ನಡದ ಶಬ್ದಗಳನ್ನು ಗೌಡರು ತಮ್ಮ ಮಾತುಗಳಲ್ಲಿ ಉಳಿಸಿಕೊಂಡಂತೆ ತೋರುತ್ತದೆ. ಹುಗ್ಗೆ, ಕಲ್ಲೆ, ಬರ್‌ಹುಲ್ಲು, ಬಯ್ಪಣೆ, ಗೋರಿ, ಹುಡಿಕೆ, ಮೊಸೆ, ಗಯ್ಪು, (ಕಾಯಿ+ಉಪ್ಪು), ಅಳೆ, ನೆಯ್, ಬಳಿ (ಗೋತ್ರ) ನೆಲವು (ಅಪ್ಪಣೆ), ಕೊತ್ತಿ, ಪಿಳ್ಳೆ, ಇವೇ ಮೊದಲಾದ-ನಿತ್ಯ ಬಳಕೆಯ ಮಾತುಗಳಲ್ಲಿ ಕೆಲವು. ಗಿಡ ಮರಗಳಿಗೆ ನೂರಾರು ಕನ್ನಡದ ಪದಗಳು ಬಳಕೆಯಲ್ಲಿವೆ. "ಹೋಗುತ್ತೇನೆ" ಎಂಬುದನ್ನು ಹೋನೆ ಎಂಬಂತೆ ತುದಿ ಮೊದಲನ್ನು ಬೆಸೆದು ಬಳಸುತ್ತಾರೆ. ಆಗಬೇಕು= ಅಕ್ಕು....ಹೀಗೆ. ಅಪ್ಪಂಗೆ ಭಾವಂಗೆ, ಮಾವಂಗೆ, ಎಂಬಂತೆ ಕೆಲವೆಡೆ ಶುದ್ಧ ವ್ಯಾಕರಣ ಸ್ವರೂಪವಿದೆ. 'ವ'ಕಾರವನ್ನು ಕೆಲವೆಡೆ ಅನುನಾಸಿಕವಾಗಿ ಬಳಸುವ ಕ್ರಮವಿದೆಯೆಂದು ಕೇಶಿರಾಜ ಹೇಳಿದ್ದರೂ ಅದನ್ನು ತಪ್ಪದೆ ಗೌಡರ ನುಡಿ ಉಳಿಸಿಕೊಂಡಿದೆ. ಮಾವ, ಮಾವು, ನೀವು....ಇವೇ ಮೊದಲಾದುವು.

**ಅಪರಕ್ರಿಯೆ**—ಬಳಗದಲ್ಲಿ ಯಾರಾದರೂ ಸತ್ತರೆ ಬಿಳಿ ಬಟ್ಟೆಯನ್ನು ಹೊದಿಸಿ, ಸುಟ್ಟು ಮೂರನೆಯ ದಿನದಲ್ಲಿ ಬೂದಿಯನ್ನು ಮಣ್ಣಲ್ಲಿ ಮುಚ್ಚಿ ದೂಪೆ ಮಾಡುತ್ತಾರೆ. 10, 11 ಇಲ್ಲವೆ 12ನೇ ದಿನದಲ್ಲಿ ಉತ್ತರ ಕ್ರಿಯೆ (ಬೊಜ್ಜ) ಮಾಡುತ್ತಾರೆ. ಬೊಜ್ಜವಾಗುವವರೆಗೆ ಮನೆಯವರು ಹೆರರ ಮನೆಗಳಿಗಾಗಲಿ, ದೇವಳಗಳಿಗಾಗಲಿ ಹೋಗಕೂಡದು. ಸೂತಕದವರ ಮನೆಗೂ ಹೆರರು ಬರಲಾರರು. ಉತ್ತರಕ್ರಿಯೆಯ ದಿನದಲ್ಲಿ ಆಗಬೇಕಾದ ಭೋಜನಾದಿಗಳನ್ನು ಬೇರೆ, ಊರ ನೆರೆಯ ಜನರೇ ಮನೆಯಿಂದ ಹೊರಗೆ ಸಿದ್ಧಪಡಿಸುತ್ತಾರೆ. ಆ ಪದಾರ್ಥಗಳನ್ನು ಸೂತಕದ ಮನೆಯವರು ಮುಟ್ಟಕೂಡದು. ಸೂತಕದ ಮನೆಯವರಿಗೆ ತಣ್ಣೀರಿನ ನಿತ್ಯ ಸ್ನಾನವು ಉತ್ತರಕ್ರಿಯೆಯವರೆಗೂ ಕಡ್ಡಾಯವಾಗಿದೆ. ದೂರದ ಕುಟುಂಬ ನಿತ್ಯ ಸ್ನಾನ ಮಾಡುವುದಿಲ್ಲ. ಹದಿನಾರನೆ ದಿನದಿಂದ ಸೂತಕವಳಿದು ಬಳಗ ಶುದ್ಧವಾಗು

ವುದು. ಉತ್ತರ ಕ್ರಿಯೆಯ ದಿನ ಊರವರೆಲ್ಲ ನೆರೆಯು ವರು. ಸತ್ತವನ ಹಿರಿಯ ಮಗನು ಕರ್ಮಕರ್ತನಾಗಿ ಉತ್ತರಕ್ರಿಯೆ ನಡೆಯುವುದು. ಕರ್ಮ ಹಿಡಿಯುವವನು ತಲೆಯನ್ನೆಲ್ಲ ಬೋಳಿಸಬೇಕು. ಇದಕ್ಕೆ ಪಾಳಿ= ಪತಾಕೆ (ಷಂ. ಭಾರತ). ಪಾಳಿ ತೆಗೆಯುವುದೆಂದರೆ ಪತಾಕೆ ಇಳಿಸುವುದೆಂಬ ಅರ್ಥವಾಗುವಂತೆ ತೋರುತ್ತದೆ. ಬಳಗ ದವರೆಲ್ಲ ಸೇರಿಕೊಂಡು ನಾರಾಯಣ ಭಜನೆಯಿಂದ ಬೂದಿ ಮುಚ್ಚಿದಲ್ಲಿಗೆ (ದೂಪೆಯ ಬಳಿಗೆ) ಹೋಗಿ ಸಿದ್ಧಪಡಿಸಿದ ಕೊಂಡೊಯ್ದ ಆಹಾರ ಪದಾರ್ಥಗಳನ್ನೆಲ್ಲ ಸಮರ್ಪಿಸಿ ಕೈಮುಗಿದು ಮಂತ್ರಾಕ್ಷತೆ ಚೆಲ್ಲಿ ಕಲಶ ಜಲವನ್ನು ಸಿಂಪ ಡಿಸಿ ಕರ್ಮಕರ್ತನೊಡನೆ ಕೂಡಿಕೊಂಡು ಸ್ವರ್ಗಕ್ಕೇ ಹೋಗ್ೀದು ಕೂಗಿ ಅಳುತ್ತ ಹಿಂದೆ ಬರುತ್ತಾರೆ. ಅಂಗಳ ದಲ್ಲಿ ಗಂಧ ದೂಪಕ್ಕೆ ಕೈಯೊಡ್ಡಿ ಅರೆದ ಗಂಧವನ್ನು ಹಚ್ಚಿಕೊಂಡು ಶುದ್ಧೀಕರ್ಮವನ್ನು ಮುಗಿಸುತ್ತಾರೆ. ಆಮೇಲೆ ಭೋಜನಾದಿ ಸತ್ಕಾರಗಳಿಂದ ಬೊಜ್ಜ ಮುಗಿದು ಸತ್ತವನು ಬಳಗದವರ ಮನಸ್ಸಿನಿಂದಲೂ ಮರೆಯಾಗು ವನು.

ಸೂತಕಾಚರಣೆ ಏಕೆ? ಸಾಯುವವರು ಎಂತಿ ದ್ದರೂ ಯಾವುದೋ ಒಂದು ರೋಗದಿಂದಲೇ ಸಾಯು ತ್ತಾರೆ; ರೋಗವಿಲ್ಲದೆ ಸತ್ತವರಿಲ್ಲವೆಂದು ವಿಜ್ಞಾನಿಗಳು ಹೇಳುತ್ತಾರೆ. ಸತ್ತವನ ರೋಗಾಣುಗಳು ಬೇರೆಯವ ರಿಗೂ ಅಂಟಿಕೊಂಡು ರೋಗಕ್ಕೆ ಕಾರಣವಾಗಬಹುದೆಂದು ನೆರೆಯವರೆಲ್ಲ ಆ ಮನೆಯನ್ನು ದೂರವಿಟ್ಟರು. ಮನೆಯ ವರೇನು ಮಾಡಬೇಕು? ಅವರೂ ರೋಗದ ಅಣುಗ ಳಿಂದ ಪಾರಾಗಲು ನಿತ್ಯ ಸ್ನಾನವನ್ನಾದರೂ ಮಾಡ ಬೇಕಾಯಿತು. ಸೂತಕದವರು ಬಚ್ಚಲು ಮನೆಯಲ್ಲೇ ಮಿಂದರೆ ರೋಗಾಣುಗಳನ್ನು ಅಲ್ಲೇ ಉಳಿಸಿಕೊಂಡಾ ಯಿತು. ಅದಕ್ಕಾಗಿ ಹೋಗಿ ತಣ್ಣೀರಲ್ಲೇ ಮಿಂದು ಶುದ್ಧ ವಾಗುವ ಸಂಪ್ರದಾಯ ಬಂತು. ಇಂತಹ ಅತ್ಯಗತ್ಯದ ಆಚರಣೆಗಳನ್ನು ಗೊಡ್ಡಾಚಾರವೆಂದು ತಿಳಿಯುವುದು ತಪ್ಪು. ಯಾರೋ ಮಾಡಿದ ಅಂಗಡಿಯ ತಿಂಡಿ ತಿನಿಸು ಗಳನ್ನು ತಿನ್ನುವ ನಾವು ಮೇಲಣ ಆಚರಣೆಗಳನ್ನು ತೆಗಳಿದರೆ ನಮ್ಮ ತಿಳಿಗೇಡಿತನವನ್ನೇ ಪ್ರಕಟಿಸಿದಂತಾಗು ವುದು.

ಹುಡುಗಿಯರು ಮೈನೆರೆದಾಗಲೂ, ಹೆಂಗಸರು ಮುಟ್ಟಾದಾಗಲೂ ಅಸ್ಪೃಶ್ಯರಾಗಿ ಹೊರಗಿರಬೇಕಾಗುತ್ತ ದೆಂಬುದು ಆರೋಗ್ಯದ ನೋಟದಿಂದಲೇ ಹೊಸೆದ ಪದ್ಧತಿಗಳು.

ಗೌಡರು ಹುಟ್ಟು ಕೃಷಿಕರಾದರೂ ಅವರಲ್ಲಿ ಹೆಚ್ಚು ಮಂದಿ ಕುಚೇಲನ ತಮ್ಮಂದಿರಂತಿರುವ ಬಡವರು. ಕುಬೇ ರನ ಅಣ್ಣಂದಿರಂತಿಹ ಶ್ರೀಮಂತರು ಇಲ್ಲವೆಂದರೂ ತಪ್ಪಾ ಗದು. ಇದಕ್ಕೆ ಮೊದಲಿನ ಕಾರಣ, ವಿದ್ಯೆಯಿಲ್ಲದ ತಿಳಿವಿನ ಕೊರತೆ. ಯಾವುದೇ ಗೌಡನ ಕುಟುಂಬದ ಹಿಂದಣ ಚರಿತ್ರೆ ಕೇಳಿದರೆ ಹಿಂದೆ ಅವನ ಹಿರಿಯರು ಭೂಮಿ ಕಾಣಿಗಳುಳ್ಳ ವರ್ಗದಾರರಾಗಿದ್ದರೆಂದೂ ಮೋಸದಿಂದ ಯಾರೋ ಅವರನ್ನು ಸುಲಿದು ಓಡಿಸಿದರೆಂದೂ ಹೇಳು ತ್ತಾನೆ. ಭೂಮಾಲಿಕರಾಗಿದ್ದಾಗ ವಿದ್ಯೆಯಿಲ್ಲದೆ ಕುಡಿತ ತನ, ಇಲ್ಲವೆ ಕಚ್ಚಾಟಗಳಿಂದ ಇದ್ದುದೆಲ್ಲವನ್ನೂ ಕಳೆದು ಕೊಂಡರೆಂದು ತಿಳಿದುಬರುತ್ತದೆ. ಮೊದಲಿನಿಂದಲೇ ಕೂಲಿಯಾಳುಗಳಾಗಿದ್ದ ಕುಟುಂಬಗಳನ್ನು ಹುಡುಕಿದರೂ ಸಿಗುತ್ತಿಲ್ಲ.

ಈಗ :– ಇಂದು ದಕ್ಷಿಣ ಕನ್ನಡದ ಗೌಡರು ವಿದ್ಯಾ ವಂತರಾಗ ತೊಡಗಿದ್ದಾರೆ. ಮೊದಲು ಪದವೀಧರರಿಲ್ಲದ ಜನಾಂಗದಲ್ಲಿ ಇಂದು ಹಲವಾರು ಮಂದಿ ವಕೀಲರಿದ್ದಾರೆ, ವೈದ್ಯರಿದ್ದಾರೆ, ಎಂಜಿನಿಯರಿದ್ದಾರೆ. ಹೆಚ್ಚಿನ ಎಲ್ಲಾ ಇಲಾಖೆಗಳಲ್ಲಿ ಉದ್ಯೋಗಸ್ಥರಾಗಿ ದುಡಿಯುತ್ತಿದ್ದಾರೆ, ಹೆಚ್ಚು ಮಂದಿ ಪದವೀಧರರಿದ್ದಾರೆ. ದೊಡ್ಡ ವ್ಯಾಪಾರಿ ಗಳಿದ್ದಾರೆ; ಬಸ್ ಕಂಪನಿ ಸ್ಥಾಪಿಸಿದ ಕುಬೇರನ ತಮ್ಮಂದಿರಿದ್ದಾರೆ. ಗೌಡ ವಿದ್ಯಾವರ್ಧಕ ಸಂಘವಿದೆ; ಇದು ಗೌಡರ ಏಳಿಗೆಗಾಗಿ ನಾನಾ ಕಾರ್ಯಗಳನ್ನು ಮಾಡುತ್ತಿದೆ. ಹೀಗಿದ್ದರೂ ಆದರೆ....ಎಂಬ ಉದ್ಗಾರ ವನ್ನೆತ್ತಿ ನಿಟ್ಟುಸಿರುಬಿಡುತ್ತಾರೆ. ಏಕೆ? ರಾಮಲಕ್ಷ್ಮಣ ರಂತಹ ತ್ಯಾಗ ಜೀವಿಗಳ ಸಂಖ್ಯೆ ಕುಗ್ಗಿ ವಾಲಿ ಸುಗ್ರೀವ ರಂತಹ ಹೋರಾಟದ ವ್ಯಕ್ತಿಗಳ ಸಂಖ್ಯೆ ಹಿಗ್ಗುತ್ತಾ ಇದೆ. ಯಾದವರಳಿದರೂ ಯಾದವರ ಕಲಹದ ಬೀಜವನ್ನು ಗೌಡರು ಉಳಿಸಿಕೊಂಡಂತೆ ತೋರುತ್ತದೆ. ಮನೆಯೊಳಗೆ ಕಾದಾಡಿ ಇದ್ದುದನ್ನು ಕಳೆದುಕೊಂಡವರು ಬೇಕಾದಷ್ಟು

ಮಂದಿ ಸಿಗುತ್ತಾರೆ. ಎಲ್ಲಿಯಾದರೂ ಗೌಡರಿರುವ ಭಾಗದಲ್ಲಿ ಹೊಡೆದಾಟ ಬಡಿದಾಟವಾದರೆ ಅಲ್ಲಿ ಒಬ್ಬನಾದರೂ ಗೌಡನಿದ್ದು ಸಮಾಜಕ್ಕೆ ಹೆಸರು ತರಿಸುತ್ತಾನೆ. ತಂದೆ ತಾಯಿಗಳೊಡನೆ ವ್ಯಾಜ್ಯ ಹೂಡಿದ ಮಕ್ಕಳಿಗೂ ಮಕ್ಕಳನ್ನು ಓಡಿಸಿದ ತಂದೆ ತಾಯಿಗಳಿಗೂ ಬರಗಾಲವಿಲ್ಲ. ನ್ಯಾಯಾಲಯಗಳನ್ನೇ ದೇವಾಲಯದಂತೆ ಅರ್ಚಿಸುವ ಭಕ್ತರೇ ಇದ್ದಾರೆ ಆದರೆ, ನೂರರಲ್ಲಿ ನಾಲ್ಕಾರು ಮಾತ್ರ, ಇಲ್ಲವೆ ಇನ್ನು ಕಡಮೆ. ಅನ್ಯಾಯ ಮಾಡಿದ ಗೌಡನೊಬ್ಬನಿದ್ದರೆ ಮೋಸ ಅನ್ಯಾಯಕ್ಕೊಳಗಾದ ಮುದ್ದು ಗೌಡರು ನೂರಾರು ಮಂದಿ. ಒಟ್ಟಾಗಿ ಹೇಳುವುದಿದ್ದರೆ ಹಲವರು ದೊಡ್ಡ ದೊಡ್ಡ ಕುಟುಂಬಗಳೇ ಅನ್ಯಾಯಕ್ಕೊಳಗಾಗಿ ಎಲ್ಲವನ್ನೂ ಕಳೆದುಕೊಂಡು ಬಡವರ ಗುಂಪಿಗೆ ಸೇರಿದವರನ್ನು ಪುತ್ತೂರು ತಾಲೂಕಿನಲ್ಲಿ ಅಲ್ಲಲ್ಲಿ ಕಾಣಬಹುದು.

ಗೌಡ ಜನಾಂಗದ ಯುವಕರು ವಿದ್ಯಾವಂತರಾಗುತ್ತಿದ್ದಾರೆ; ಆದರೊಂದಿಗೆ ಸಮಾಜದ ಏಳಿಗೆಯ ಒಕ್ಕಟ್ಟಿನ ಮೇಲ್ಮೆಯನ್ನು ಮರೆಯುತ್ತಿದ್ದಾರೆ. ವಿದ್ಯಾ ಹೀನರೆಂಬವರಲ್ಲಿ ತುಸು ಒಕ್ಕಟ್ಟಿರುವಂತೆ ತೋರಿದರೂ ವಿದ್ಯಾವಂತರೆಂಬವರಲ್ಲಿ ಒಕ್ಕಟ್ಟೇ ಇಲ್ಲ. ದೇವದಾನವರು ಒಂದಾಗಿ ಹಿಂದೆ ಕ್ಷೀರಸಾಗರವನ್ನು ಕಡೆದು ಚಂದ್ರ, ಲಕ್ಷ್ಮಿ, ಕಾಮಧೇನು, ಕಲ್ಪವೃಕ್ಷ ಮೊದಲಾದುವುಗಳೊಡನೆ ಅಮೃತವನ್ನೂ ಪಡೆದರಂತೆ. ಅವರು ಒಬ್ಬ ಋಷಿಯ ಮಕ್ಕಳು. ಒಂದಾಗಿ ದುಡಿದರು ಅಮೃತ ದೊರೆಯಿತು; ಹೋರಾಟಕ್ಕೆ ತೊಡಗಿದಾಗ ವಿಷ ಹುಟ್ಟಿತು. ದೇವರಾಜರು ಅಮೃತ ದೊರೆತ ಮೇಲೆಯೂ ತೊಡಗಿದ ಹೋರಾಟ ಮುಗಿಂಸಲೇ ಇಲ್ಲ; ಮುಗಿಯುವಂತೆಯೂ ಇಲ್ಲ.

> "ಅಣ್ಣತಮ್ಮಂದಿರ ಹೋರಾಟಮಿಲ್ಲದ
> ಪೆಳಮೆಯಂ ಬಾಳೆಲ್ಲಿಯಯುಂ ಕೇಳದಂತೆ
> ಒಡಹುಟ್ಟಿದವರ ಹೋರಾಟವೆ ಸೋಲಂತೆ
> ಹಗೆಯ ನಂಜಿನ ಹಾವಿಗದು ಹುತ್ತವಂತೆ."

ಈ ಗುಟ್ಟನ್ನು ವಿದ್ಯಾವಂತ ಗೌಡರು ತಿಳಿದುಕೊಂಡು ವಿದ್ಯಾಹೀನರ ನೆರವನ್ನೂ ಪಡೆದು ಜೀವನ ಸಮುದ್ರವನ್ನು ಕಡೆದರೆ ಅಮೃತಕ್ಕಿಂತಲೂ ಹೆಚ್ಚಿನದನ್ನು ಕಲ್ಪನೆಯ ಕಾಮಧೇನುವಿನ ಮೂಲಕ ಪಡೆಯಬಹುದು.

ಗೌಡರ ವಿಚಾರದ ಹಕ್ಕಿ ಮೈಸೂರು, ಕೊಡಗು. ದಕ್ಷಿಣ ಕನ್ನಡ, ಮೊದಲಾದ ಕಡೆಯಲ್ಲಿ ಅಚೀಚೆ ಹಾರ ತೊಡಗಿದರೆ, ಗೌಡರು ತಮ್ಮ ಏಳಿಗೆಯೊಡನೆ ನಾಡಿನ ಏಳಿಗೆಯನ್ನೂ ಸಾಧಿಸಿ ಮಕ್ಕಳಿಲ್ಲದ, ನಿದ್ದೆಯಿಲ್ಲದ ದೇವತೆಗಳಿಗಿಂತಲೂ ಮಿಗಿಲಾಗಿ ಮಂದಿ ಮಕ್ಕರೊಡನೆ ಬಾಳಿ ಬೆಳಗಿ ಸಗ್ಗಿಗರನ್ನು ನಮ್ಮ ನಾಡಿಗೆ ಕರೆಯಬಹುದು. ಹೊತ್ತಿನ ಹೊನ್ನೋಲೆಯನ್ನು ಬರೆಯೋಣ.

॥ ತಿಳಿಗನ್ನಡಂ ಬಾಳ್ಗೆ ॥



# ದಕ್ಷಿಣ ಕನ್ನಡ ಜಿಲ್ಲಾ ಹಾಲು ಪ್ರೊಕ್ಕಲು ಮಕ್ಕಳ (ಗೌಡರ) ಸಂಘದ ನಿರೂಪ

ಸಂಗ್ರಹಕಾರರು :—**ಶ್ರೀ ಕೂಜುಗೋಡು ಪದ್ಮಯ್ಯ ಗೌಡರು.**

ಶ್ರೀ ಕೂಜುಗೋಡು ಪದ್ಮಯ್ಯ ಗೌಡರು ದಕ್ಷಿಣ ಕನ್ನಡ ಜಿಲ್ಲೆಯ ಯಾತ್ರಾಸ್ಥಳವಾಗಿರುವ ಸುಬ್ರಹ್ಮಣ್ಯದ ಸಮೀಪ ವಿರುವ ಹರಿಹರಪಲ್ಲತಡ್ಕ ಗ್ರಾಮದವರು. ಇವರು ಗೌಡ ಸಮಾಜದ ಕಟ್ಟೆಮನೆತನದವರು. ಕಟ್ಟೆಮನೆ ನಮ್ಮ ಸಮಾಜದ ಪ್ರಾಚ್ಯ ವಸ್ತು ಸಂಗ್ರಹಾಲಯವೆಂದರೆ ಅತಿಶಯೋಕ್ತಿಯಲ್ಲ. ನಮ್ಮ ಚಾರಿತ್ರಿಕ ಮತ್ತು ಸಾಮಾಜಿಕ ದಾಖಲೆಗಳು ಕಟ್ಟೆಮನೆಯವರ ವಶದಲ್ಲಿರುತ್ತದೆ. ಅವರು ನಮ್ಮ ಸಮಾಜದ ಹಿಂದಿನ ದಾಖಲೆಗಳ ಆಧಾರದಿಂದ ಸಂಗ್ರಹಿಸಿ ಬರೆದಿದ್ದಾರೆ. ಇದರಲ್ಲಿ ಆಸಕ್ತಿ ವಹಿಸಿ ಮಾರ್ಗದರ್ಶನ ನೀಡಿದ ಅವರ ತಂದೆ ಶ್ರೀ ಕೂಜುಗೋಡು ಪರಮೇಶ್ವರ ಗೌಡರ ಸ್ತುತ್ಯ ಸಹಕಾರವನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇವೆ. —ಸಂ.

**೧ನೇ ಭಾಗ**

ಈ ಸಂಘವು ದಕ್ಷಿಣ ಕನ್ನಡ ಜಿಲ್ಲಾ ಹಾಲು ಪ್ರೊಕ್ಕಲ ಮಕ್ಕಳಯಾನೆ ಗೌಡ ಜಾತಿಯವರ ಸಂಘವೆಂತ ಕರೆಯಲ್ಪಡುತ್ತದೆ. ಈ ಸಂಘವು ಗೌಡ ಜಾತಿಯವರು ತಮ್ಮ ಸ್ವಜಾತಿ ನೀತಿಯನ್ನು ಕಾಪಾಡುವ ವಿಧಾನದ ಬಗ್ಗೆ ಮತ್ತು ಸ್ವಜಾತಿಯ ಎಲ್ಲಾ ಕಡೆಗಳಲ್ಲಿ ಹೆಚ್ಚು ಕಡಿಮೆ ನಡೆಯಕೂಡದೆಂತಲೂ ಶ್ರೀ ಶೃಂಗೇರಿ ಸಂಸ್ಥಾನದ ಮಹಾಶಿವ ಸ್ವಾಮಿಗಳವರು ಪ್ರಾತಃಕಾಲದಲ್ಲಿ ಕೊಟ್ಟ ನಿರೂಪಕ್ಕೆ ಅನುಸರಿಸಿ ಪ್ರೊಂದೇ ವಿಧಾನವಾಗಿ ನಡಕೊಳ್ಳಬೇಕಂತ-1910, 1911, 1912 ಮತ್ತು 1913ನೇ ಇಸವಿಗಳಲ್ಲಿ ಮುರಳ್ಯ, ಜೆಕ್ಕಾಡಿ, ಸುಳ್ಯ, ನೇರೆಂಕಿ ಮುಂತಾದ ಕಡೆಗಳಲ್ಲಿ ಆದ ಮಹಾ ಸಭೆಗಳಿಗೆ ಧರ್ಮಸ್ಥಳ, ನೇರಂಕಿ, ದಿಸ್ಲಬ್ಯ, ಅಂಗಾಡಿ, ಬಂಗ್ವಾಡಿ, ಪಜಿರಡ್ಕ, ಮಾಯ ಬೆಳಾಲು, ಬೆಳ್ತಂಗಡಿ, ವಿಲುಪೆ, ಪಾಣೆ-ಮಂಗಳೂರು, ಪುತ್ತೂರು, ಬೆಳ್ಳಾರೆ, ಸುಳ್ಯ, ಅಮರ ಸುಬ್ರಹ್ಮಣ್ಯ, ಎಡಮಂಗ್ಲ, ಕಾಸ್ಪಾಡಿ, ಯೆೊನೆಕಲ್ಲು, ಬಳ್ಪ ಪಂಜ, ಕಡಬ, ಮರ್ದಾಳ, ಸಂಪಾಜೆ, ಕೆಯ್ಯೂರು, ಬಜೆಲ, ಕಾಸರಗೋಡು, ಬಂಟ್ವಾಡಿ, ಉಪ್ಪಿನಂಗಡಿ, ಬಂಟ್ವಾಳ, ಮೈಸೂರು ಜಿಲ್ಲಾ ಮೇಲು ಬಂಗಾಡಿ, ಮಡಿಕೇರಿ, ಕುಂಬಳೆ, ಹೊಸದುರ್ಗ, ಗುಂಡ್ಯ, ಮೊಗರುನಾಡು ಮುಂತಾದ ಅನೇಕ ಸೀಮೆ ವ. ಮಾಗಣೆಗಳಿಂದ ವಿಶಿಷ್ಟ ಮಾಗಣೆಗೌಡರು ವ. ಗ್ರಾಮಗೌಡರು ಮತ್ತು ಸ್ವಜಾತಿಯಸ್ತರೆಲ್ಲರೂ ಕೂಡಾ ಅನೇಕರು ಮೇಲ್ಕಂಡ ಆಯಾಯ ಸಭೆಗಳಲ್ಲಿ ಕೂಡಿ ಸ್ವಜಾತಿ–ನೀತಿಯ ಕಟ್ಟುಗಳನ್ನು ಊರ್ಜಿತಪಡಿಸಬೇಕೆಂತ ತಮ್ಮ ತಮ್ಮ ದಸ್ಕತ್ತು ರುಜುವಾತುಗಳಿಂದ ಸ್ವಜಾತಿಯ ಸಭಿಕರ ಬಹು ಪಕ್ಷದವರ ಕೋರಿಕೆಯಂತೆ 2, 3, 4ನೇಯ ಭಾಗಗಳಲ್ಲಿ ಹೇಳುವ ಮೇರೆಗೆ ನಡಕೊಂಡು, ಅದರಲ್ಲಿ ತೋರುವ ಸ್ವಜಾತಿ ನೀತಿಯ ಎಲ್ಲಾ ಕಟ್ಟುಗಳನ್ನು ಆಯಾಯ ಮಾಗಣೆ ಗೌಡರು ತನ್ನ ಚಕಬಂದಿಗೆ (ವಶಕ್ಕೆ) ಒಳಪಟ್ಟ ಎಲ್ಲಾ ಗ್ರಾಮ ಗೌಡರಿಗೆ ತಿಳಿಸಬೇಕು. ಪ್ರತಿಯೊಬ್ಬ ಗ್ರಾಮ ಗೌಡರು ತನ್ನ ಗ್ರಾಮಕ್ಕೆ ಒಳಪಟ್ಟ ಸ್ವಜಾತಿಯಸ್ತರಿಗೆ ತಿಳಿಸಬೇಕು. ಮಾತ್ರವಲ್ಲ ಮಾಗಣೆ

ಗೌಡರು ಕೂಡ, ತನ್ನ ಚಕಬಂದಿಗೆ ಒಳಪಟ್ಟ ಎಲ್ಲಾ ಗ್ರಾಮಗೌಡರನ್ನು ಆಗಾಗ್ಯೆ ವಿಚಾರಿಸುತ್ತಾ ಬರಬೇಕು. ಹೀಗೆ ಪ್ರತಿ ಗ್ರಾಮ ಗೌಡರು ಕೂಡಾ ತನ್ನ ಗ್ರಾಮದ ಸ್ವಜಾತಿಯಸ್ತರನ್ನು ಆಗಾಗ್ಯೆ ವಿಚಾರಿಸುತ್ತಾ ಬರಬೇಕು. ಮತ್ತು ಗ್ರಾಮದ ಸ್ವಜಾತಿ ನಿವಾಸಿಕರನ್ನು ಕೂಡಾ ಈ ನಿರ್ಣಯಗಳಿಗೆ ವಿರೋಧವಾಗಿ ನಡೆಯದಂತೆ ಉತ್ತೇಜನ ಕೊಡಬೇಕು. ಹಾಗೆ ಸ್ವಜಾತಿಯ ಕಟ್ಟುಗಳು ವಗೈರೆ ಯನ್ನು ಹೆಚ್ಚು ಕಡಿಮೆ ನಡೆಯದ ಹಾಗೆ ಆದಷ್ಟು ಜಾಗ್ರತೆಯಿಂದ ನಡೆಯಿಸುವುದು ಮಾಗಣೆ ಗೌಡರ ಮತ್ತು ಗ್ರಾಮ ಗೌಡರುಗಳ ಕರ್ತವ್ಯವಾಗಿರುತ್ತದೆ. ಮಾಗಣೆ ಯಾ, ಗ್ರಾಮ ಗೌಡರಿಗೆ ಸ್ವಜಾತಿಯ ನಂಬ್ರ ವನ್ನು (ಕೇಸು) ತೀರ್ಪು ಮಾಡಲಿಕ್ಕೆ ಅನಾನುಕೂಲವಾದ ದೊಡ್ಡ ನಂಬ್ರದ (ಕೇಸಿನ) ಬಗ್ಯೆ ಸ್ವಜಾತಿಯ ಮೇಲಧಿ ಕಾರಸ್ತರಾದ ಕಟ್ಟಿಮನೆಗೆ ಬರಕೊಳ್ಳುವುದು. ಇದಕ್ಕೆ ವಿರೋಧವಾಗಿ ನಡೆಯಕೂಡದು. ಈ ಎಲ್ಲಾ ನಿರ್ಣಯ ಗಳಿಗೆ ವಿರೋಧವಾಗಿ ನಡಕೊಂಡವರು ಸ್ವಜಾತಿಯ ನೀತಿಗೆ ವಿರೋಧವಾದ ತಪ್ಪಾಗಿರುತ್ತದೆ ಎಂತ ನಿರ್ಣಯಿಸ ಲಾಯಿತು.

೨ನೇ ಭಾಗ

### ಗಂಡನ ಮನೆಯಲ್ಲಾಗುವ ಶಾಸ್ತ್ರ ವಗೈರೆ

1 ಕಳಸ ಕನ್ನಡಿ ಒಂದು, ಹೂವಿನ ಹೇಳಿಗೆ ವೊಂದು-ಇದನ್ನು ಹಿಡಿಯುವ ಎರಡು ಜನರು ಸ್ನಾನ ಮಾಡಿ ಬಿಳಿ ವ ಕೆಂಪು ಬಟ್ಟೆಯನ್ನುಟ್ಟುಕೊಂಡು ಶುದ್ಧ ದಿಂದ ಇರುವಂತದ್ದು.

2 ಅಕ್ಕಿ ಹಾಸೆ ಐದು ಜನ ಮುತ್ತೈದೆಯರು ಬರೆದು ಹಸೆಯ ಮೇಲೆ ಮಣೆಯಿಟ್ಟು ಕುಂಡ್ರಿಸಿ ಗ್ರಾಮ ಗೌಡನು ಸ್ವಜಾತಿಯ ಸಭಿಕರನ್ನೆಲ್ಲಾ ಕೇಳಿ, 'ಮುಹೂರ್ತ ಮಣಿ' ಕಟ್ಟಿ ಐದು ಜನ ಮುತ್ತೈದೆಯರು ಎಣ್ಣೆ ಅರಿಸಿನ ಶಾಸ್ತ್ರ ಮಾಡುವುದು. ಆಮೇಲೆ ವರನನ್ನು ಕೇಳಿ, ಏಳಿಸಿ, ಸ್ನಾನ ಮಾಡಿಕೊಂಡು ಬಂದು ತಲೆ ಚಪ್ಪರದಲ್ಲಿ ನಿಂತು ಆರತಿಯನ್ನು ಐದು ಜನ ಮುತ್ತೈದೆಯರು ಧಾರೆ ಮಂಟಪದ ಮುಹೂರ್ತ ಕಂಬದಲ್ಲಿ ಕೆಳಗೆ ಮೇಲೆ ಕೈ ಯಿಟ್ಟು ವೊಳೆ ನೀರು ಮಾಯಿಸಿ ನಂತರ ಮನೆಯೊಳಗೆ ಹಸೆ ಚಾಪೆಯಲ್ಲು ಸ್ವಜಾತಿ ಸಭಿಕರನ್ನು ಕೇಳಿ ಕುಂಡ್ರಿಸಿ ಮುತ್ತೈದೆಯರು ಐದು ಜನ ಸೇಸೆ ತಳಿದು ನಂತರ ವರನ ಕೈಗೆ ಮದುರಂಗಿ ಇಡುವುದು. ಮದುರಂಗಿ ಇಟ್ಟನಂತರ ಚಪ್ಪರದ ಅಡಿಯ ಮಂಟಪದಲ್ಲಿ ಒಂದು ಹೊಸ ಚಾಪೆ ಹಾಕಿ ಆ ಚಾಪೆಯ ಮೇಲೆ ಐದು ಜನ ಮುತ್ತೈದೆಯರು ಅಕ್ಕಿ ಹಾಸೆ ಬರೆದು ವರನನ್ನು ಸ್ವಜಾತಿ ಸಭಿಕರನ್ನು ಕೇಳಿ ಕೂಡ್ರಿಸಿ ಎಣ್ಣೆ-ಅರಿಸಿನದಿಂದ ಚಪ್ಪರ ಶಾಸ್ತ್ರ ಮಾಡಿಸಿ ವರನನ್ನು ಕೇಳಿ ಏಳಿಸಿ ತಲೆ ಚಪ್ಪರದ ಎದುರು ವರನನ್ನು ಕೇಳಿ ಪುನಃ ಕುಂಡ್ರಿಸಿ ಕ್ಷೌರಿಗನು ಮುಖ ಕ್ಷೌರ ಮಾಡಿ ಆಮೇಲೆ ಸ್ನಾನ ಮಾಡುವುದು. ಸ್ನಾನ ಮಾಡಿ ಫಲ ಬರುವ ಮರದ ಬುಡಕ್ಕೆ ಬಂದಃ ಸಭಿಕರನ್ನು ಕೇಳಿ 'ಪಟ್ಟೆ ಬಾಸಿಂಗ' ಕಟ್ಟಿ ಹನ್ನೆರಡು ಗುಂಬ ಇಟ್ಟು ಗುಂಬ ಪೂಜೆ ಮಾಡಿ ಆ ಮರದ ಬುಡಕ್ಕೆ ಐದು ಪ್ರದಕ್ಷಿಣೆ ಬಂದು ಕೈ ಮುಗಿದು ತಲೆ ಚಪ್ಪರದಲ್ಲಿ ನಿಂತು ಏಳು ಜನ ಮುತ್ತೈದೆ ಯರು ಶೇಸ ತಳಿದು ಮದುಮಗನ ಸೋದರಮಾವನು (ತಾಯಿಯ ಅಣ್ಣ ಯಾ. ತಮ್ಮ) ಸಭಿಕರನ್ನು ಕೇಳಿ ಚಕ್ರ (ನಾಲ್ಪಾಣೆ) ವೊಂದನ್ನು ಮದುಮಗನಿಗೆ ಕಟ್ಟಿ ಶೇಸೆ ತಳಿದು ದಿಬ್ಬಣ ಹೊರಡಿಸಿ ತಲೆ ಚಪ್ಪರದ ಹೊರಗೆ ಬಂದು ಒಂದು ಸ್ಥಳದಲ್ಲಿ ಕುಳಿತು 'ಪಟ್ಟೆ-ಬಾಸಿಂಗ'ವನ್ನು ಸಡಿಲಿ ಸುವುದು.

3 ದಿಬ್ಬಣವನ್ನು ಕರಕೊಂಡು ಹೋಗುವ ಬಗ್ಗೆ ಆ ಗ್ರಾಮ ಗೌಡನಿಗೆ ಮನೆಯ ಯಜಮಾನನು ವೀಳ್ಯ ಕೊಟ್ಟು ಲಗ್ನ ಮುಹೂರ್ತ ಪ್ರಕಾರಕ್ಕೆ ಧಾರೆ ಮಾಡಿಸಿ ಕೊಂಡು ಬರಬೇಕೆಂತ ಹೇಳುವುದು. ಅನಂತರ ಗ್ರಾಮ ಗೌಡರು ಸ್ವಜಾತಿ ಸಭಿಕರನ್ನು ಒಟ್ಟು ಕೂಡಿಸಿಕೊಂಡು ಅತೀ ವಿಜೃಂಭಣೆಯಿಂದ ದಿಬ್ಬಣ ಹೋಗುವುದು. ದಿಬ್ಬ ಣವು ಹೋಗಿ ಕುಂಡ್ರುವ ಬಗ್ಗೆ ಮುದ್ದಾಂ-ಎರಡು ಜನರನ್ನು ಹೆಣ್ಣಿನ ಕಡೆ ಗ್ರಾಮ ಗೌಡನಿಗೆ ತಿಳಿಸುವ ಬಗ್ಗೆ ಕಳುಹಿಸಿ ಜಾಗೆ ಕೇಳಿ ನೋಡಿಕೊಂಡು ಬಂದು ಆ ಸ್ಥಳಕ್ಕೆ ದಿಬ್ಬಣ ಹೋಗುವಾಗ್ಯೆ ದಿಬ್ಬಣದ ಜನರಿಗೆ ಸದರಿ ಹೆಣ್ಣಿನ ಕಡೆಯ ಗ್ರಾಮ ಗೌಡನು ಕೂಡಲೇ ನೀರು ಚಾಪೆ-ವಗೈರೆ ಕೊಡಿಸಿ ಸದರಿ ದಿಬ್ಬಣಸ್ತರನ್ನು ಮರ್ಯಾದೆಯಿಂದ ಕುಂಡ್ರಿಸಿ

ವೀಳ್ಯದೆಲೆಯನ್ನು ಒಂದು ತಟ್ಟೆಯಲ್ಲಿ ಸಭಾ ಮಧ್ಯದಲ್ಲಿಟ್ಟು "ದಿಬ್ಬಣ ಬಂದಿರೋ"–ಎಂದು ಕೈ ಮುಗಿದು ಮಾತ್ನಾಡಿಸುವುದು. ದಿಬ್ಬಣವನ್ನು ಮಾತ್ನಾಡಿಸಲು ಬಂದ ಆ ಗ್ರಾಮ ಗೌಡರಿಗೆ ತಾಂಬೂಲ (ಎಲೆ ಅಡಿಕೆ) ಕೊಡಬೇಕು. ಹೆಂಗಸರನ್ನು ಗ್ರಾಮ ಗೌಡನ ಹೆಂಡತಿಯು ವೀಳ್ಯೆದೆಲೆ ವಗೈರೆ ತಟ್ಟೆಯಲ್ಲಿಟ್ಟು ರಿವಾಜು ಪ್ರಕಾರ ಮಾತ್ನಾಡಿಸುವುದು.

4 ಹೆಣ್ಣಿನ ಮನೆಯಿಂದ ವಧೂವರನಿಗೆ ಫಲಾಹಾರ ತಂದ ಹೆಣ್ಣಿನ ತಾಯಿಗೆ ಕೊಡುವ ರಿವಾಜು–ಎಲೆ ಕವಳಿಗೆ ನಾಲ್ಕರ ಸೂಡಿ ಒಂದು, ಅಡಿಕೆ ಐದು, ಬಾಕಿ ಜನರಿಗೆ ಅದರಿಂದಲೇ ಕೊಡುವುದು.

5 ವಧೂವರನಿಗೆ (ಮದುಮಗ) ಫಲಾಹಾರ ತಂದನಂತರ ವಧೂವರನ ಮತ್ತು ವಧುವಿನ ಕಡೆಯವರು, ಸ್ವಜಾತಿ ಗೃಹಸ್ತರೆಲ್ಲರೂ ಕೂಡಾ ಧಾರೆ ಮಂಟಪದ ಹತ್ತಿರ ಚೌಕಟ್ಟಿನಿಂದ ಕೂತುಕೊಂಡು ಕಳಸ ಕನ್ನಡಿಯನ್ನಿಟ್ಟುಕೊಂಡು ವೀಳ್ಯ ಕಟ್ಟುವ ವಿವರ ಹೆಣ್ಣಿನ ಕಡೆಯಿಂದ ಒಂದು ಜನ, ಗಂಡಿನ ಕಡೆಯಿಂದವೊಂದು ಜನ. ಈ ಎರಡು ಜನರು ಕೈಕಾಲು ಮುಖ ತೊಳೆದುಕೊಂಡು ಬಂದು ಸ್ವಜಾತಿ ಸಭಿಕರಲ್ಲಿ ಕೇಳಿ ಧಾರೆ ಮಂಟಪದ ಒಳಗೆ ನಿಂತುಕೊಂಡು ವೀಳ್ಯ ಕಟ್ಟುವ ವಿವರ–

6 1. ಹೆಣ್ಣು ಮಾತಿನ ವೀಳ್ಯ.
2. ಸಲಾವಳಿ ವೀಳ್ಯ,
3. ಹೆಣ್ಣು ಮಾತಿನ ಕರಾರು ವೀಳ್ಯ.
4. ಲಗ್ನದ ಕುದಿ ವೀಳ್ಯ.
5. ದೇವರ ವೀಳ್ಯ. (ಇದಕ್ಕೆ ಎಲೆಕವಳಿಗೆ ಐದರ ಸೂಡಿ ಒಂದು, ಅಡಿಕೆ ಐದು.)
6. ಗುರು ವೀಳ್ಯ. (ಎಲೆ ಕವಳಿಗೆ ಐದರ ಸೂಡಿ ಒಂದು, ಅಡಿಕೆ ಐದು.)
7. ಬಾಂಧವರ ವೀಳ್ಯ. (ಎಲೆ ಕವಳಿಗೆ ಐದರ ಸೂಡಿ ಒಂದು, ಅಡಿಕೆ ಐದು.)
8. ತಂದೆ ವೀಳ್ಯ. ಎಲೆ ಕವಳಿಗೆ ನಾಲ್ಕರ ಸೂಡಿ ಒಂದು, ಅಡಿಕೆ ಐದು.
9. ತಾಯಿ ವೀಳ್ಯ. ಎಲೆ ಕವಳಿಗೆ ನಾಲ್ಕರ ಸೂಡಿ ಒಂದು, ಅಡಿಕೆ ಐದು.
10. ಅಚ್ಚು ಕಟ್ಟುವ ವೀಳ್ಯ. (ಎಲೆ ಕವಳಿಗೆ ಐದರ ಸೂಡಿ ಒಂದು, ಅಡಿಕೆ ಐದು ಮತ್ತು ಅಚ್ಚು ಕಟ್ಟುವ ರೂಪಾಯಿ ನಾಲ್ಕುವರೆ ಸಹ ಸದ್ರಿ ವೀಳ್ಯದ ಮೇಲೆ ಇಟ್ಟು ಕೊಡುವುದು.)
11. ಬಣ್ಣ ಬಂಗಾರದ ವೀಳ್ಯ, (ಎಲೆ ಕವಳಿಗೆ ನಾಲ್ಕರ ಸೂಡಿ ಒಂದು, ಅಡಿಕೆ ಐದು.)
12. ತೆರವು ಮರವು ವೀಳ್ಯ. (ಎಲೆ ಕವಳಿಗೆ ನಾಲ್ಕರ ಸೂಡಿ ಒಂದು ಅಡಿಕೆ ಐದು,)

### 7. ಹೆಣ್ಣಿನ ಕಡೆಯಿಂದ ಬಣ್ಣ ಬಂಗಾರದಲ್ಲಿ ಕೊಡುವ ಚಿನ್ನ ಬೆಳ್ಳಿಯ ವಿವರ.

1. ಕಾಸ್ತಾಳಿ ಸರ ಒಂದು, 2. ಚಿನ್ನದ ಗುಂಡು ಸರ ಎರಡು, 3. ವಾಲೆ ಜೋಡು, ಒಂದು, 4. ಮೂಗುತಿ ಒಂದು, 5. ಕೊಪ್ಪು ಜೋಡು ಒಂದು, 6. ಬುಗುಡಿ ಜೋಡು ಒಂದು, 7. ತೋಳು ಬಂದಿ ಒಂದು, 8. ನೇವಳ ಒಂದು, 9. ತಾಳಿ ಒಂದು, 10. ಬೆಳ್ಳಿ ಹಿಂಬಳೆ ಜೋಡು ಒಂದು, 11. ಕಡಗ ಜೋಡು ಒಂದು, 12. ಕಾಲುಂಗುರ ಜೋಡು ಒಂದು, 13. ಕರಿಮಣಿ ಬಿಚ್ಚೋಲೆ ಸಹ, 14. ಹಿಂಗಾರ ಒಂದು, 15. ಕೆಂಪು ಕಂಬಿ ಬಂದ ಬಿಳಿ ಸೀರೆ ಒಂದು, 16. ಮುಸುಕಿನ ಬಿಳಿ ವಸ್ತ್ರ ಒಂದು, 17. ರವಕೆ ಒಂದು, 18. ಬಾಸಿಂಗ ಒಂದು, 19. ಪಟ್ಟೆ ಒಂದು, 20. ಧಾರೆ ಆದಮೇಲೆ ಉಡುವ ಕೆಂಪು ಸೀರೆ ಒಂದು.

ಇಷ್ಟು ನಗನಾಣ್ಯಗಳನ್ನು ಚಪ್ಪರದ ಅಡಿಯಿಂದ ಸ್ವಜಾತಿ ಸಭಿಕರಿಗೆ ತೋರಿಸಿಕೊಂಡು ಮನೆಯೊಳಗೆ ತೆಗೆದುಕೊಂಡು ಹೋಗಿ ಅಲ್ಲಿ ಆಗುವ ವಿವರ. ಧಾರೆ ಸೀರೆಯನ್ನು ಹೆಣ್ಣಿಗೆ 'ಗೇಂಟಿ ಕಟ್ಟಿನಿಂದ ವುಡಿಸಿ' ಚಿನ್ನ ಬೆಳ್ಳಿ ಮುಂತಾದ ನಗಗಳನ್ನು ತೊಡಿಸಿ ಪಟ್ಟೆ–ಕೊಂಡ್ಲು ಬಾಸಿಂಗವನ್ನು ಕಟ್ಟಿ ಅಮೇಲೆ ಅಕ್ಕಿ ಸೇರು ಒಂದು ವೀಳ್ಯದೆಲೆ ಅಡಿಕೆ ಮತ್ತು ಕರಿಮಣಿ ಬಿಚ್ಚೋಲೆ

ಸಹ ಹಾಕಿ ಮಡಲು ತುಂಬಿಸುವುದು-ಬಾಳೆ ಹಣ್ಣು, ಸಿಪ್ಪೆ ತೆಗೆದ ತೆಂಗಿನ ಕಾಯಿ ಒಂದು, ಅಚ್ಚು ಬೆಲ್ಲ ಒಂದು— ಇವುಗಳ ಸಹಿತ.

8. ಧಾರೆಗೆ ಬ್ರಾಹ್ಮಣರಿಗೆ ಕೊಡುವ ರಿವಾಜು

ಗಂಡಿನ ಕಡೆಯಿಂದ : 1. ನೂಲಿನ ಉಂಡೆ ಒಂದು. 2. ಹಿಂಗಾರು ಒಂದು, 3. ತೆಂಗಿನ ಕಾಯಿ ಎರಡು, 4. ಅಕ್ಕಿ ಸೇರು ಎರಡು, 5. ಎಲೆ ಕವಳಿಗೆ ಒಂದು, 6. ಅಡಿಕೆ ಮೂರು, 7. ಬಾಳೆಹಣ್ಣಿನ ಗೊಂಚಲು ಒಂದು, 8. ಬೆಳ್ಳಿ ಪಾವಲಿ ಒಂದು (ನಾಲ್ಕಾಣೆ) 9. ಬೆಲ್ಲ ಅಚ್ಚು ಒಂದು; 10. ಅರಿಸಿನ ತುಂಡು ಎರಡು.

ಹೆಣ್ಣಿನ ಕಡೆಯಿಂದ : 1. ತೆಂಗಿನ ಕಾಯಿ ಎರಡು, 2. ಅಕ್ಕಿ ಸೇರು ಎರಡು, 3. ಎಲೆ ಕವಳಿಗೆ ಒಂದು. 4. ಅಡಿಕೆ ಮೂರು, 5. ಬಾಳೆಹಣ್ಣಿನ ಗೊಂಚಲು, 6. ಬೆಲ್ಲ ಅಚ್ಚು ಒಂದು, 7. ಬೆಳ್ಳಿ ಪಾವಲಿ ಒಂದು, (ನಾಲ್ಕಾಣೆ).

ಇಷ್ಟು ಸಾಮಾನುಗಳನ್ನು ಉಭಯ ಕಡೆಯವರೂ ಬ್ರಾಹ್ಮಣರಿಗೆ ಕೊಡಬೇಕು.

9. ಆಮೇಲೆ ಲಗ್ನ ಮುಹೂರ್ತ ಪ್ರಕಾರಕ್ಕೆ ಮದುಮಗನಿಗೆ ಪಟ್ಟ ಬಾಸಿಂಗ ಕಟ್ಟಿ ತಲೆ ಚಪ್ಪರದಲ್ಲಿ ಬಂದು ನಿಲ್ಲಿಸುವುದು.

1 ಮೊದಲು ತಾಯಿ ಅಕ್ಕಿ ಆರತಿಯೊಂದರ ಬೆಳ್ಳಿ ಪಾವಲಿ ಒಂದು, ಎಲೆ ಕವಳಿಗೆ ಮೂರು, ಅಡಿಕೆ ಮೂರು.

2 ಕಟ್ಟೆಮನೆ ಅಕ್ಕಿ ಆರತಿ ಒಂದರ ಪಾವಲಿ ಒಂದು, ಎಲೆ ಕವಳಿಗೆ ನಾಲ್ಕು, ಅಡಿಕೆ ನಾಲ್ಕು.

3 ಗ್ರಾಮ ಗೌಡನ ಅಕ್ಕಿ ಆರತಿ ಒಂದರ ಪಾವಲಿ ಒಂದು ಎಲೆ ಕವಳಿಗೆ ಮೂರು, ಅಡಿಕೆ ಮೂರು.

4 ಗ್ರಾಮದವರ ಅಕ್ಕಿ ಆರತಿ ಒಂದರ ಆಣೆ ಆರು ಎಲೆ ಕವಳಿಗೆ ಮೂರು, ಅಡಿಕೆ ಮೂರು.

ಅನಂತರ ಕುರ್ತಿ ನೀರಿನ ಆರತಿ 'ಎಂಟು' ಹೀಗೆ ಒಟ್ಟು ಹನ್ನೆರಡು ಆರತಿಗಳನ್ನು ಮುತ್ತೈದೆಯರು ಹಿಡಿದು, ಆಮೇಲೆ ಧೂಪ ಕಾಯಿ, ಹಣ್ಣೆಲೆ ಇದನ್ನು ಸಹ ಹಾರಿಸುವುದು. ನಂತರ ವಧೂವರನ ಕಾಲು ತೊಳೆದವನಿಗೆ ಪಾವಲಿ ಒಂದು, ಎಲೆ ಕವಳಿಗೆ ಒಂದು, ಅಡಿಕೆ ಎರಡು— ಆ ತಂಬಿಗೆಗೆ ಹಾಕುವುದು. ಅನಂತರ ವರನನ್ನು ಧಾರೆ ಮಂಟಪದ ಹತ್ತಿರ ಕರೆದುಕೊಂಡು ಹೋಗಿ ಸಭಿಕರಲ್ಲಿ ಕೇಳಿ ಪೂರ್ವದ ಕಡೆಯಿಂದ ಮೆಟ್ಟಲಕ್ಕಿ ಮೇಲೆ ನಿಲ್ಲಿಸುವುದು. ಹಚ್ಚಡವನ್ನು ತೆರೆಹಿಡಿದು ಮನೆಯ ಒಳಗಿನಿಂದ ಹಸೆ ಚಾಪೆಯಲ್ಲಿ ಮಡಲಕ್ಕಿ ತುಂಬಿಸಿರುವ ಮದುಮಗಳನ್ನು ಕರಕೊಂಡು ಬಂದು ಸಭಿಕರಲ್ಲಿ ಕೇಳಿ ಪಡು ಪಾರ್ಶ್ವದಿಂದ ಮಂಟಪದೊಳಗೆ ಮದುಮಗನೆದುರು ಮೆಟ್ಟಲಕ್ಕಿ ಮೇಲೆ ನಿಲ್ಲಿಸುವುದು.

ಹೂವಿನ ಮಾಲೆ ಮೊದಲು ಗಂಡಸಿನ ಕೊರಳಿಗೆ ಹೆಣ್ಣು ಹಾಕಬೇಕು. ಆಮೇಲೆ ಹೆಣ್ಣಿನ ಕೊರಳಿಗೆ ಹೂಮಾಲೆ ಗಂಡು ಹಾಕಬೇಕು. ನಂತರ ಸಭಿಕರಲ್ಲಿ ಕೇಳಿ ವರನು ಹೆಣ್ಣಿನ ಕೊರಳಿಗೆ 'ತಾಳಿ' ಕಟ್ಟುವುದು. ಅನಂತರ ತೆರೆ ಹಿಡಿವ ವಸ್ತ್ರ ತೆರೆಯುವುದು.

ಬ್ರಾಹ್ಮಣರು ಮಂಟಪ ಒಳಗೆ ಇಟ್ಟಿರುವಂತಹ ಕಳಸದ ಗಿಂಡಿಯನ್ನು ಎತ್ತಿಕೊಂಡು, ಗಂಡಿನ ಕೈಯ್ಯ ಮೇಲೆ ಹೆಣ್ಣಿನ ಕೈಯ್ಯನ್ನಿಟ್ಟು ಹೀಗೆ ಐದು ಸಲ ಕೆಳಗೆ ಮೇಲೆ ಕೈಜೋಡಿಸಿಕೊಂಡು ಬ್ರಾಹ್ಮಣರು ಮಂತ್ರಾಕ್ಷತೆಯನ್ನು ಉಚ್ಚರಿಸಿಕೊಂಡು ಕಳಸದ ನೀರನ್ನು ಎರೆದು ಸದ್ರಿ ಕಳಸದ ಗಿಂಡಿಯನ್ನು ಹೆಣ್ಣಿನ ತಂದೆಯು ತೆಗೆದುಕೊಂಡು ಸ್ವಜಾತಿ ಸಭಿಕರ ಕೈಯನ್ನು ಮುಟ್ಟಿಸಿಕೊಂಡು ಬಂದು ಗಂಡಿನ ಮತ್ತು ಹೆಣ್ಣಿನ ಬಳಿ ಕೇಳಿ ತಂದೆ ಧಾರೆ ದತ್ತ ಎರೆಯುವದು. ಹಾಗೆಯೇ ತಂದೆ ಧಾರೆದತ್ತ ಎರೆಯುವಾಗ್ಗೆ ವಧೂವರರ ಕೈಯ್ಯನ್ನು ಮೇಲೆ ಹೇಳಿದಂತೆ ಕೈಯನ್ನು ಐದು ಸಲ ಕೆಳಗೆ ಮೇಲೆ ಇಟ್ಟುಕೊಂಡು ಧಾರೆ ಎರೆಯುತಕ್ಕದ್ದು. ಆಮೇಲೆ ಬ್ರಾಹ್ಮಣರು ವಧೂವರರಿಗೆ ಕಂಕಣವನ್ನು ಕಟ್ಟಿ ಗಂಡು-ಹೆಣ್ಣಿನ ಸೆರಗಿಗೆ ಗಂಟು ಹಾಕಿ ಧಾರೆ ಮಂಟಪದ ಐದು ಸುತ್ತು ವಧೂವರರು ಪ್ರದಕ್ಷಿಣೆ ಬಂದು ಧಾರೆ ಮಂಟಪಕ್ಕೆ ಅಕ್ಕಿ ಹಾಕಿ ಕೈ ಮುಗಿದು ಪ್ರಸಾದವನ್ನು ಪಡಕೊಂಡು ನಂತರ ವಧೂವರರನು

ಹೆಣ್ಣಿನ ತಂದೆ-ತಾಯಿಯರಿಗೆ ಉಡುಗೊರೆ ಮಾಡಿ ಮನೆ ಒಳಗೆ ಹೋಗಿ ಹಸೆ ಚಾಪೆಯಲ್ಲಿ ಕುಂಡ್ರಿಸಿ ಏಳು ಜನ ಮುತ್ತೈದೆಯರು ಶೇಸೆ ತಳಿದು, ಬಾಳೆಹಣ್ಣು ಹಾಲು ತುಪ್ಪದಿಂದ ಭೂಮಿಕ್ಕುವ ಶಾಸ್ತ್ರ ಮಾಡಿದನಂತರ ಪಟ್ಟ ಬಾಸಿಂಗ ಸಡಿಲಿಸಿ ಆಮೇಲೆ ವಧೂವರರನ್ನು ಹಸೆ ಚಾಪೆಯಿಂದ ಏಳಿಸಿ ಚಪ್ಪರದಡಿಗೆ ಕರಕೊಂಡು ಬಂದು ಗ್ರಾಮ ಗೌಡ ಮತ್ತು ಸ್ವಜಾತಿ ಸಭಿಕರೆಲ್ಲ ಕೂಡಿ ಹೆಣ್ಣನ್ನು ಗಂಡಿನ ವಶ ಒಪ್ಪಿಸಿಕೊಡುವುದು. ಹೆಣ್ಣನ್ನು ಗಂಡಿಗೆ ಒಪ್ಪಿಸಿ ಕೊಡುವಾಗ್ಗೆ ಹೆಣ್ಣಿನ ಕಡೆಯ ತಂದೆ ಯಾ ರಕ್ಷಕನು ಆ ಹುಡುಗಿಗೆ ಸೀರೆ ಒಂದು, ಗಂಗಳ ಒಂದು, ಆನೇಲೆ ಅವರ ಪ್ರೀತಿಯಾನುಸಾರ ನಾಣ್ಯ ವರಹಗಳನ್ನಿಟ್ಟು ಗಂಡಿನ ಕಡೆಯ ಮುಖ್ಯಸ್ಥರ ಕೈಗೆ ಒಪ್ಪಿಸಿಕೊಡುವುದು. ಇದಾದಮೇಲೆ ದಿಬ್ಬಣವು ಹೆಣ್ಣನ್ನು ಕರಕೊಂಡು ಗಂಡಿನ ಮನೆಗೆ ಬರುವುದು. ಬರುವಾಗ್ಗೆ ಗಂಡಿನ ಮನೆಯನ್ನು ತಲುಪುವ ಮೊದಲು ಒಂದು ಕಡೆ ಕುಳಿತು ವಧೂವರರ ಪಟ್ಟ ಬಾಸಿಂಗವನ್ನು ಏರಿಸಿ ಕಟ್ಟಿ ಧಾರೆ ಸೀರೆಯನ್ನು ಹೆಣ್ಣಿನ ಬಲದ ಹೆಗಲಲ್ಲಿಟ್ಟು ಧಾರೆ ಸಮಯದಲ್ಲಿ ಕಟ್ಟಿದ ಮಡಲಕ್ಕಿ ಸಹ ಕಟ್ಟಿ ಚಪ್ಪರದಲ್ಲಿ ನಿಲ್ಲಿಸಿ ಮುತ್ತೈದೆಯರು ಏಳು ಆರತಿ ಹಿಡಿದು ವಧೂವರರ ಕಾಲ್ತೊಳೆದು ಗಂಡು ಹೆಣ್ಣಿನ ಕೈಬೆರಳು ಹಿಡಿದುಕೊಂಡು ಯಜಮಾನನು ತನ್ನ ಮನೆಯೊಳಗೆ ಕರೆದುಕೊಂಡು ಸ್ವಜಾತಿಯ ಸಭಿಕರಲ್ಲಿ ಕೇಳಿ ಹಸೆ ಚಾಪೆಯಲ್ಲಿ ಕುಂಡ್ರಿಸಿ ಶೇಸೆ ತಳಿದು ಬಾಳೆಹಣ್ಣು ಹಾಲು-ತುಪ್ಪದಿಂದ ಭೂಮಿಕ್ಕುವ ಶಾಸ್ತ್ರ ಮಾಡಿದ ಮೇಲೆ ಸಭಿಕರಲ್ಲಿ ಕೇಳಿ ಪಟ್ಟ ಬಾಸಿಂಗವನ್ನು ಸಡಿಲಿಸಿ ಏಳಿಸುವುದು. ಆಮೇಲೆ ಗಂಡಿನ ಅಕ್ಕ-ತಂಗಿಯರು ಶೋಭಾನ ಹಾಡಿ ವಧೂವರರನ್ನು ಬಾಗಿಲು ತಡೆಯುವುದು. ಬಾಗಿಲು ತಡೆಯುವಾಗ್ಗೆ ವಧೂವರರ ಹತ್ತಿರ ಸದ್ರಿ ಅಕ್ಕ ತಂಗಿಯರು ಮೊದಲು ಹುಟ್ಟಿದ ಹೆಣ್ಣನ್ನು .ಕೊಡುತ್ತೇನೆಂತ ಹೇಳುವುದು. ಆಮೇಲೆ ಚಪ್ಪರದಡಿಯ ಮಂಟಪದ ಒಳಗೆ ಸಭಿಕರಲ್ಲಿ ಕೇಳಿ ಗಂಡು ಹೆಣ್ಣನ್ನು ನಾಗೋಲೆ ಶಾಸ್ತ್ರ ಮಾಡುವುದಕ್ಕೆ ಕುಂಡ್ರಿಸಿ ಒಂಬತ್ತು ಜನ ಮುತ್ತೈದೆಯರು ಶಾಸ್ತ್ರ ಮಾಡಿದ ನಂತರ ಮೊದಲು ಹೆಣ್ಣಿಗೆ ಗಂಡು ಎಡಕೈಯ್ಯಲ್ಲಿ ಶಾಸ್ತ್ರ ಮಾಡುವುದು. ಆಮೇಲೆ ಗಂಡಿಗೆ ಹೆಣ್ಣು ಎದ್ದು ಸರಿಯಾಗಿ ಶಾಸ್ತ್ರ ಮಾಡಿ ಕುಳಿತ ನಂತರ ಮಗುವಿನ ತೂಗುವ ಶಾಸ್ತ್ರ ಮಾಡುವುದು ನಂತರ ಒಂದು ಮರಿಗೆಯಲ್ಲಿ ಓಕುಳಿ ನೀರು ಮಾಡಿ ಐದು ಎಲೆ ಒಂದು ಅಡಿಕೆ ಬೆಳ್ಳಿ ಯಾ ಚಿನ್ನದ ಉಂಗುರವನ್ನು ಸಹ ಓಕುಳಿ ನೀರಿಗೆ ಹಾಕಬೇಕು. ಈ ಶಾಸ್ತ್ರವಾದಮೇಲೆ ವಧೂವರರನ್ನು ಏಳಿಸಿ ಎರಡು ಮರಿಗೆಯಲ್ಲಿ ಓಕುಳಿ ನೀರು ಮಾಡಿ ವಧೂವರರು ಐದು ಸರ್ತಿ ಚೆಲ್ಲಾಡಿಕೊಂಡು ಆದಮೇಲೆ . ಚಪ್ಪರದ ಒಳಗಿರುವ ಮುಹೂರ್ತ ಕಟ್ಟಿದ ಹಾಲೆ ಮರವನ್ನು ವಧೂವರರು ತೆಗೆದುಕೊಂಡು ನೀರು ಕೆರೆಯಲ್ಲಿ ಹಾಲೆ ಮರವನ್ನು ನೆಟ್ಟು ಧಾರೆ ಸಮಯದಲ್ಲಿ ಕಟ್ಟಿದ ಕಂಕಣ ಮತ್ತು ಹೂವಿನ ಮಾಲೆಯನ್ನು ತೆಗೆದು ಆ ಮರಕ್ಕೆ ಕಟ್ಟಿ ಸ್ನಾನ ಮಾಡಿಕೊಂಡು ಫಲ ಬರುವ ಮರದ ಬುಡಕ್ಕೆ ಬಂದು ಹೆಣ್ಣು ಗಂಡು ಸಹ ಹನ್ನೆರಡು ಗುಂಬ ವಗ್ಗೈರೆ ಯಿಟ್ಟುಕೊಂಡು ಪಟ್ಟ ಬಾಸಿಂಗವನ್ನು ಏರಿಸಿ ಕಟ್ಟಿಕೊಂಡು ಬಾಳೆಹಣ್ಣು ಪಂಚಕಜ್ಜಾಯದಿಂದ ಗೌರಿಪೂಜೆ ಮಾಡುವಾಗ್ಗೆ ಹೆಣ್ಣು (ವಧು) ತೆಂಗಿನ ಕಾಯಿ ಒಡೆದು ಮಂಗಳಾರತಿ ಮಾಡಿದ ಮೇಲೆ ಗಂಡು ಎಡದ ಕೈಯಿಂದ ತುಂಬೆ ಹೂವನ್ನು ಹೆಣ್ಣಿಗೆ ಮುಡಿಸುವುದು. ಹೆಣ್ಣು ಗಂಡಿಗೆ ತುಂಬೆ ಹೂವನ್ನು ಬಲದ ಕೈಯಿಂದ ಮುಡಿಸುವುದು. ಅನಂತರ ಐದು ಪ್ರದಕ್ಷಿಣೆ ಬಂದು ಕೈಮುಗಿವುದು. ತೆಂಗಿನಕಾಯಿಯ ಒಂದು ಗಡಿಯನ್ನು ಅಗಸನ ಅದೇ 'ದಳಿಯ'ದಲ್ಲಿಟ್ಟು ಮತ್ತೊಂದು ಗಡಿಯನ್ನು ತೆಗೆದುಕೊಂಡು ಪನಿವಾರ ಮಾಡುವುದು.

ನಂತರ ವಧೂವರರು ತಲೆ ಚಪ್ಪರದಲ್ಲಿ ಬಂದು ನಿಂತು ಗಂಡಿಗೆ ಹೆಣ್ಣು ಆರತಿ ಹಿಡಿಯಬೇಕು. ಈ ಆರತಿಗೆ ಐದು ಎಲೆ, ಒಂದು ಅಡಿಕೆ, ಒಂದು ಬೆಳ್ಳಿ ಪಾವಲಿ ಸಮೇತನಾಗಿ ಮದುಮಗನು ಇಡಬೇಕು. ಆಮೇಲೆ ಮುತ್ತೈದೆಯರು ಶೇಸೆ ತಳೆದು ಗಂಡಿನ ಹೆಸರನ್ನು ಹೆಣ್ಣಿನಿಂದ ಹೇಳಿಸಿ ಹೆಣ್ಣಿನ ಹೆಸರನ್ನು ಗಂಡಿನಿಂದ ಹೇಳಿಸಿ, ಸಭಿಕರಲ್ಲಿ ಕೇಳಿ ಪಟ್ಟ ಬಾಸಿಂಗವನ್ನು ಬಿಚ್ಚಿ ತೆಗೆಯುವುದು. ಪಟ್ಟ ಬಾಸಿಂಗವನ್ನು ತಟ್ಟೆಯಲ್ಲಿಟ್ಟು ಹೆಣ್ಣು ತಲೆಯಲ್ಲಿಟ್ಟುಕೊಂಡು, ಗಂಡು ಅಟ್ಟಕ್ಕೆ ಹತ್ತಿ ಪಟ್ಟ ಬಾಸಿಂಗವನ್ನು "ಕೊಡು" ಎಂತ ಗಂಡು ಕೇಳಿ "ತೆಗೆದು ಕೊಳ್ಳಿ" ಎಂದು ಹೆಣ್ಣು ಹೇಳಿ ಕೊಡುವುದು.

ಆಮೇಲೆ ಸಭಿಕರಲ್ಲಿ ಕೇಳಿ ವಧೂವರರನ್ನು

ಶೇಷೋಪಚಾರವೆಂಬ ಕಟ್ಟಳೆಗೆ ಕುಂಡ್ರಿಸಿ ಸ್ವಜಾತಿ ಸಭಿಕರೆಲ್ಲಾ ಅವರವರ ಶಕ್ತ್ಯಾನುಸಾರದ ಮೇರೆಗೆ ಉಡುಗೊರೆ ನಗನಾಣ್ಯಗಳನ್ನು ಕಟ್ಟಿ ಆದಮೇಲೆ ಗಂಡು ಹೆಣ್ಣು ಸ್ವಜಾತಿಯಸ್ತರ ಕಾಲು ಹಿಡಿಯುವುದು ಆಮೇಲೆ ಐದು ಜನ ಮುತ್ತೈದೆಯರು ಮಜಲಕ್ಕಿಯ ನೈವೇದ್ಯ ಮಾಡಿ ವಧೂವರರನ್ನು ಧಾರೆ ಮಂಟಪದಲ್ಲಿ ಕುಂಡ್ರಿಸಿ ಗಂಡಿಗೆ ಹೆಣ್ಣು ನೈವೇದ್ಯ ಬಳಿಸುವುದು. ಬಳಸಿದ ಸಟ್ಟುಗದ ಮೇಲೆ ಗಂಡು ಐದು ಎಲೆ ಒಂದು ಅಡಿಕೆ ಒಂದು ಪಾವಲಿ ಇಡತಕ್ಕದ್ದು. ಆಮೇಲೆ ಸ್ವಜಾತಿ ಸಭಿಕರೆಲ್ಲರೂ ಬೇಕಾದ ಭಕ್ಷ್ಯ ಪಾಯಸ ಮುಂತಾದ ಸಿಹಿ ಊಟವನ್ನು ಅತೀ ಸಂತೋಷದಿಂದ ಊಟ ಮಾಡಿದ ನಂತರ ಗಂಡು-ಹೆಣ್ಣು ಇವರಿಗೆ ಹಾಕಿದ ನಗ ನಾಣ್ಯ ಯಾವತ್ತೂ ವಸ್ತುಗಳನ್ನು ಗ್ರಾಮಗೌಡನು ಆ ಮನೆಯ ಯಜಮಾನನ ಕೈಗೆ ಒಪ್ಪಿಸಿ ಅವರವರ ಮನೆಗೆ ಹೋಗುವಂತದ್ದಾಗಿರುತ್ತದೆ.

**೩ನೇ ಭಾಗ**

1 ಹೆಣ್ಣು ಮಾತ್ನಾಡಿ ಲಗ್ನ ಆಗುವುದಕ್ಕೆ– ಗಂಡಿನ ಕಡೆಯವರು ಬ್ರಾಹ್ಮಣರಲ್ಲಿಗೆ ಹೋಗಿ ಸಲಾವಳಿ ಮತ್ತು ಲಗ್ನ ನಿರ್ಣಯಿಸಿ ಲಗ್ನದ ಪಟ್ಟಿಯನ್ನು ತೆಗೆದುಕೊಂಡು ಉಭಯ ಕಡೆಯ ಗ್ರಾಮಗೌಡರು ಮತ್ತು ಸ್ವಜಾತಿಯಸ್ತರು ಕೂಡಾ ಹೆಣ್ಣಿನ ಮನೆಯಲ್ಲಿ ಕೂಡಿ ಮಾತನ್ನು ದೃಢಪಡಿಸಿಕೊಳ್ಳುವುದು.

**ಹೆಣ್ಣಿನ ಮನೆಯಲ್ಲಾಗುವ ಶಾಸ್ತ್ರಗಳ ವಿವರ**

ಕಳಸದ ಕನ್ನಡಿ ಒಂದು, ಹೂವಿನ ಹೇಳಿಗೆ ಒಂದು. ಇದನ್ನು ಹಿಡಿಯುವ ಎರಡು ಜನ ಮುತ್ತೈದೆಯರು ಸ್ನಾನ ಮಾಡಿ ಬಿಳಿ ವ ಕೆಂಪು ಸೀರೆ ಉಟ್ಟುಕೊಂಡು ಶುದ್ಧವಾಗಿರುವಂತದ್ದು.

2 ಅಕ್ಕಿ ಹಾಸೆಯನ್ನು ಐದು ಜನ ಮುತ್ತೈದೆಯರು ಬರೆದು ಆ ಹಸೆಯ ಮೇಲೆ ಮಣೆ ಇಟ್ಟು ಸಭಿಕರನ್ನು ಕೇಳಿ ವಧುವನ್ನು ಕುಂಡ್ರಿಸಿ ಐದು ಜನ ಮುತ್ತೈದೆಯರು ಎಣ್ಣೆ–ಅರಸಿನ ಶಾಸ್ತ್ರ ಮಾಡಿಸಿದ ಮೇಲೆ ಗ್ರಾಮಗೌಡನು ಮುಹೂರ್ತದ ಮಣೆಯನ್ನು ಕಟ್ಟಿ ಏಳಿಸಿ ಸ್ನಾನ ಮಾಡಿಸಿ ತಲೆ ಚಪ್ಪರದಲ್ಲಿ ನಿಲ್ಲಿಸಿ ಐದು ಜನ ಮುತ್ತೈದೆಯರು ಆರತಿ ಹಿಡಿದು ನಂತರ ಧಾರೆ ಮಂಟಪದಲ್ಲಿ ಕಟ್ಟಿದ ಹಾಲೆ ಮರದ ಮುಹೂರ್ತ ಕಂಭಕ್ಕೆ ಕೆಳಗೆ ಮೇಲೆ ಕೈಯ್ಯಿಟ್ಟು ಮೊಳೆ ನೀರು ಮಿಯಿಸಿದ ನಂತರ ಮನೆಯೊಳಗೆ ಹಸೆ ಚಾಪೆಯಲ್ಲಿ ಕುಂಡ್ರಿಸಿ ಐದು ಜನ ಮುತ್ತೈದೆಯರು ಶೇಸೆ ತಳಿದು ಹೆಣ್ಣಿನ ಕೈಗೆ ಮದುರಂಗಿ ಇಡುವದು. ಮದುರಂಗಿ ಇಟ್ಟನಂತರ ಚಪ್ಪರದಡಿಯಲ್ಲಿ ಮಂಟಪದೊಳಗೆ ಎಣ್ಣೆ ಅರಸಿನ ಶಾಸ್ತ್ರ ಏಳು ಜನ ಮುತ್ತೈದೆಯರು ಮಾಡುವುದು. ಆಮೇಲೆ ಸ್ನಾನ ಮಾಡಿಸಿ ಫಲ ಬರುವ ಮರದ ಬುಡದಲ್ಲಿ ಹನ್ನೆರಡು ಗುಂಬವನ್ನಿಟ್ಟು ಗುಂಬ ಪೂಜೆ ಮಾಡಿ ಆ ಮರದ ಐದು ಸುತ್ತು ಬಂದು ಆಮೇಲೆ ತಲೆ ಚಪ್ಪರದಲ್ಲಿಗೆ ಬಂದು ನಿಂತು ಏಳು ಜನ ಮುತ್ತೈದೆಯರು ಆರತಿ ಹಿಡಿಯುವುದು.

ಆಮೇಲೆ ಮನೆಯೊಳಗೆ ಹಾಕಿದ ಚಾಪೆಯಲ್ಲಿ ಕುಂಡ್ರಿಸಿ ಏಳು ಜನರು ಮುತ್ತೈದೆಯರು ಶೇಸೆ ತಳಿದು ಆಮೇಲೆ ಗಂಡಿನ ದಿಬ್ಬಣ ಬಂದು ಲಗ್ನ ವೀಳ್ಯ, ಬಣ್ಣ ಬಂಗಾರ ನೀಡಿದ ನಂತರ ಸೋದರಮಾವನು ಸಭಿಕರಲ್ಲಿ ಕೇಳಿ ಹೆಣ್ಣಿಗೆ ಬೆಳ್ಳಿ ಪಾವಲಿ ಒಂದನ್ನು ಕಟ್ಟಿ ಶೇಸೆ ತಳಿದು ಧಾರೆಗೆ ಕರೆದುಕೊಂಡು ಬರುವುದು.

**೪ನೇ ಭಾಗ**

1 ಒಂದು ಹುಡುಗಿಯು ಋತುವಾದರೆ ಐದರಿಂದ ಹದಿನಾಲ್ಕು ದಿವಸದೊಳಗೆ ಋತುಶಾಂತಿ ಮಾಡಲೇ ಬೇಕು. ಅನಾನುಕೂಲತೆ ಉಂಟಾದ ಪಕ್ಷದಲ್ಲಿ ಎರಡನೇ ಋತುವಾಗಿ ದಿವಸ ಮೊದಲುಗೊಂಡು ಹದಿನಾಲ್ಕು ದಿವಸಗಳ ಒಳಗೆಯಾದ್ರೂ ಸದ್ರಿಕ್ರಿಯೆಯನ್ನು ಅಗತ್ಯವಾಗಿ ಮಾಡತಕ್ಕದ್ದು.

2 ಒಂದು ಹೆಂಗಸು ಪುಷ್ಪವತಿ ಆದಲ್ಲಿ ನಾಲ್ಕನೇ ನೀರು ಮಿಯ್ಯಲೇಬೇಕು ವಿನಹ ಮೂರನೇ ನೀರು ಮಿಯ್ಯಕೂಡದು.

3 ಅಣ್ಣನ ಹೆಂಡತಿಯನ್ನು ತಮ್ಮನು ಪುನರ್ವಿವಾಹ ಮಾಡಿಕೊಳ್ಳಕೂಡದು ; ತಮ್ಮನ ಹೆಂಡತಿಯನ್ನು ಅಣ್ಣನು ಪುನರ್ವಿವಾಹ ಮಾಡಿಕೊಳ್ಳಬಹುದು.

4 ಸಾಕಾದ ಕಾರಣದಿಂದ ಹೆಂಡತಿಯನ್ನು ಗಂಡನೂ, ಗಂಡನನ್ನು ಹೆಂಡತಿಯೂ ಬಿಡಕೂಡದು.

5 ಹೆಂಗಸರಿಗೆ ಶೋಭಾನಪ್ರಸ್ಥ, ಶೀಮಂತ ಮತ್ತು ವಿವಾಹಗಳನ್ನು ಅಗತ್ಯವಾಗಿ ಮಾಡತಕ್ಕದ್ದು.

6 ವಿವಾಹವಾಗದ ಗಂಡಸು ವಿಧವೆಯನ್ನು ಪುನರ್ವಿವಾಹ ಮಾಡಿಕೊಳ್ಳಕೂಡದು.

7 ಒಂದು ಕುಟುಂಬದಲ್ಲಿ ಯಾ ಸಂತಾನದಲ್ಲಿ ಒಮ್ಮೆ ಬಿಟ್ಟ ಹೆಂಗಸನ್ನು ಆ ಗಂಡನ ಜೀವಮಾನದ ವರೆಗೆ ಆ ಹೆಂಗಸನ್ನು ಆ ಕುಟುಂಬಕ್ಕೆ ಪುನರ್ವಿವಾಹ ಮಾಡಿಕೊಳ್ಳಕೂಡದು.

8 ವಿಧವೆಯರು ಮೂಗುತಿ, ಮಾಂಗಲ್ಯ, ಸೂತ್ರ, ಕಾಲುಂಗುರ, ಕರಿಬಳೆ, ಕರೀಮಣಿ ಮತ್ತು ತಿಲಕ ಕೂಡಾ ಇಟ್ಟುಕೊಳ್ಳಕೂಡದು.

9 ವಿಧವೆಯರು ಎರಡನೇ ಗಂಡನನ್ನು ವರಿಸಿದರೆ ಕಾಲುಂಗರ, ತಾಳಿ ವಿನಹ ಬೇರೆ ಮಾಂಗಲ್ಯ ಸೂತ್ರದ ಒಡವೆಗಳನ್ನು ಧರಿಸಬಾರದು.

10 ಉತ್ತರಕ್ರಿಯೆ ನಡೆಯಿಸುವ ವಿಷಯದಲ್ಲಿ ದಶರಾತ್ರೆ ಅಂದರೆ 10ನೇ ರಾತ್ರೆ ಕಳೆದು ಹನ್ನೊಂದು-ಹನ್ನೆರಡು—ಈ ದಿವಸಗಳಲ್ಲಿ ಉತ್ತರ ಕ್ರಿಯಾದಿಗಳನ್ನು ನಡೆಸತಕ್ಕದ್ದು.

11 ಮೃತ ಕರ್ಮಕರ್ತನು ಯೇಕಾಭುಕ್ತಿಮಾಡಿ ಕ್ರಿಯಾ ಪೂರೈಸುವವರೆಗೆ ಸುವರ್ಣವನ್ನು ಧರಿಸದೆ ಅಮಂಗಲಕರವಾಗಿರಬೇಕು.

12 ಉತ್ತರಕ್ರಿಯಾದಿಗಳಲ್ಲ ಕೊಂಬು, ವಾದ್ಯ, ಗುರುಜು, ಮೇರವೆ, ಕದೀನ ವಗೈರೆ ಮಾಡಿಸಕೂಡದು.

13 ವಧೂವರರು ಲಗ್ನ ಸಮಯೆದಲ್ಲಿ ಸೇರು ತುಪ್ಪ ಒಂದನ್ನು ಮಾತ್ರ ವಿನಹ ಶುಭ ಶೋಭಾನ, ಹತ್ಯ ಕವ್ಯ ಮುಂತಾದ ಕಾರ್ಯಗಳಿಗೆ ವೇಳೆ ಯಾ, ಇತರ ಸಮಯೆದಲ್ಲಿ ಕೂಡಾ ಯೆಣ್ಣೆ, ತುಪ್ಪ, ಅವಲಕ್ಕಿ, ಅಕ್ಕಿ ಪುಡಿ, ಭಕ್ಷಗಳು ವಗೈರೆ ತೆಗೆದುಕೊಂಡು ಹೋಗಕೂಡದು.

14 ಪೂಕಳೆ ಲೋವೆ ಮತ್ತು ದೀಟಿಗೆ, ಹಿಲಾಲು, ಪಾಲಕಿ ಮಂಚಲು ವಗೈರೆ ಹೊತ್ತುಕೊಂಡು ಹೋಗಕೂಡದು.

15 ಶುಭಕಾರ್ಯಗಳ ವೇಳೆ ಕೊಂಬು, ವಾದ್ಯ, ಕೊಡೆ, ದಿಮಾಟಿಗೆ, ಭೇರಿ, ಮೃದಂಗ, ಬ್ರಾಹ್ಮಣರ ಮೂಲಕ ಶುದ್ಧ ಪುಣ್ಯಾರ್ಚನೆ ಮುಂತಾದ ವೈಭೋಗಗಳಿಂದ ನಡೆದುಕೊಳ್ಳುವುದು.

16 ವರನ ಕಡೆಯಿಂದ ಕನ್ಯೆಗೆ ರೂಪ್ಯಾ 4¼ ಯನ್ನು ಮಾತ್ರ ತೆರವು ಕಟ್ಟತಕ್ಕದ್ದು.

17 ಪುನರ್ವಿವಾಹ ಹೆಂಗಸಿಗೆ 2¼ (ಎರಡು ಕಾಲು) ರೂಪ್ಯಾ ಮತ್ತು ಮೂರನೇ ಪುನರ್ವಿವಾಹಕ್ಕೆ ರೂಪ್ಯಾ ಒಂದು ಮತ್ತು ಆಣೆ ಎರಡು (1-2-0) ತೆರವು ಕೊಡುವುದು. ನಾಲ್ಕನೇ ಪುನರ್ವಿವಾಹಕ್ಕೆ ಒಂದು ಬಿಳೀ ಶೀರೆ ಮಾತ್ರ ಕೊಡುವುದು. ಆದ್ದರಿಂದ ತೆರವು ಹೆಣ್ಣಿಗೆ ಕೊಡುವುದಲ್ಲದೆ ಗಂಡಿಗೆ ಕೊಡುವುದಿಲ್ಲ.

18. ಮದ್ಯಪಾನವನ್ನು ಅಂಗಡಿ ವಾ, ಗುತ್ತಿಗೆಯಲ್ಲಿ ಹೋಗಿ ಗಂಡಸರೂ ಹೆಂಗಸರೂ ಕೂಡಾ ಸೇವಿಸಲು ಮತ್ತು ಸ್ವಜಾತಿಯವರಲ್ಲಿ ನಡೆಯಬಹುದಾದ ಶುಭ ಕಾರ್ಯಗಳ ವೇಳೆ ಕೂಡಾ ಸೇವಿಸಿಕೊಂಡು ಬರಕೂಡದು.

19 ಹಸುವನ್ನು ಹಾರ ಕಟ್ಟಿಸಿ ಉಳಕೂಡದು.

20 ಒಂದು ಲಗ್ನಕ್ಕೆ ಹನ್ನೆರಡು ಕಂಬಗಳನ್ನು ನಿರ್ಮಿಸಿ ಒಂದು ಮಂಟಪದಲ್ಲಿ ಒಂದೇ ಧಾರೆ ವಿನಹ 2–3 ಧಾರೆ ಮಾಡಕೂಡದು.

21 ಪ್ರತಿಯೊಬ್ಬ ವಧೂವರರಿಗೂ ಪಟ್ಟ ಬಾಸಿಂಗವಾಗಲೇಬೇಕು.

22 ಶುಭ ಶೋಭಾನ ಮುಂತಾದ ಕಾರ್ಯಗಳಲ್ಲಿ ಅನ್ಯಜಾತಿಯಸ್ತರನ್ನು ಕೂಡಿಕೊಂಡು ಒಂದು ಚಪ್ಪರ ದಡಿಯಲ್ಲಿ ಭೋಜನ ಮಾಡಕೊಡದು.

23 ಶುಭಕಾರ್ಯಗಳಲ್ಲಿ ಆರತಿ ಮುಂತಾದ ಪ್ರಾಮುಖ್ಯ ಕೆಲಸಗಳಲ್ಲಿ ವಿಧವೆಯರು ಹಾಗೂ ಎರಡನೇ ಗಂಡರನ್ನು ವಹಿಸಿರುವ ಸ್ತ್ರೀಯರು ಪ್ರವೇಶಿಸಬಾರದು.

24 ಸ್ವಜಾತಿಯವರಲ್ಲಿ ನಡೆಯಬಹುದಾದ ಆಯಾಯ ಕಾರ್ಯಗಳಲ್ಲಿ ಗಂಡಸರೂ, ಹೆಂಗಸರೂ ಕೂಡಾ ಪ್ರತ್ಯೇಕ ಪ್ರತ್ಯೇಕ ಕುಳಿತುಕೊಳ್ಳುವುದಾಗ್ಲಿ ಯಾ ಹೋಗುವುದಾಗ್ಲಿ ಕೂಡಾ ಗಂಡಸರ ಸಭೆಗೆ ಹೆಂಗಸರೂ ಹೆಂಗಸರ ಸಭೆಗೆ ಗಂಡಸರೂ ಕೂಡಾಡಿ ವರ್ತಿಸಬಾರದು.

25 ಶುಭ ಶೋಭಾನ ಕಾರ್ಯಗಳಲ್ಲಿ ಮದ್ದು ಮಾಂಸವನ್ನು ಸೇವಿಸಕೂಡದು.

26 ಹುಡುಗಿಯನ್ನು ಹುಡುಗನ ಮನೆಗೂ ಹುಡುಗನನ್ನು ಹುಡುಗಿಯ ಮನೆಗೂ ಕೂಡಾ ತಂದು ಯಾ ಕೊಂಡು ಹೋಗಿ ಧಾರೆ ಮಾಡಿದ್ದಾದರೆ ಚಪ್ಪರದ ಖರ್ಚನ್ನು ಕೊಡಲೂ ಯಾ ತೆಕ್ಕೊಳ್ಳಲೂಕೂಡದು.

27 ಗುರು ವೀಳ್ಯವನ್ನು ಸ್ವಜಾತಿಯ ಆಚಾರ ವಿಚಾರ ಅಧಿಕಾರ ಪಟ್ಟ ಕಟ್ಟಿಮನೆಯವರಿಗೆ ಕೊಡ ತಕ್ಕದ್ದು.

28 ಗಂಡಿನ ತಾಯಿ ಮುಂತಾದವರು ವರನಿಗೆ ಶಾಸ್ತ್ರ ಆಗುವ ಸಮಯಕ್ಕೆ ಸೆರಗು ಹಾಕಿ ಕುಳಿತುಕೊಳ್ಳುವುದು ಅಗತ್ಯವಿರುವುದಿಲ್ಲ.

29 ಈ ಮೇಲಿನ ನಿರ್ಣಯಗಳಿಗೆ ವಿರೋಧವಾಗಿ ನಡೆದರೆ ಸ್ವಜಾತಿ ನೀತಿಗೆ ವಿರೋಧವಾದ ನೀತಿಯಾಗಿರುತ್ತದೆ.



# ಗೌಡರ ಪದ್ಧತಿಗಳು

(ಕೊಡಗಿನಲ್ಲಿ)

ಲೇಖಕರು : ಡಾ|| ಗುಡ್ಡೇರ ಪಿ. ಗಣಪತಿ, ಕೊಡಗು.

(ಡಾ|| ಗುಡ್ಡೇರ ಪಿ. ಗಣಪತಿಯವರು ದಕ್ಷಿಣಕೊಡಗಿನ ಬಲಮುರಿ ಗ್ರಾಮದ ಕೊಡಗಿನ ವಯೋವೃದ್ಧ ಹಾಗೂ ಜ್ಞಾನವೃದ್ಧರಲ್ಲೊಬ್ಬರು. ಶ್ರೀಯುತರು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನಲ್ಲಿ ವ್ಯಾಸಂಗ ಮಾಡಿದ ನಂತರ ಬೆಂಗಳೂರಿನಲ್ಲಿ ಎಲ್. ಎಂ. ಪಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ಸೋಮವಾರಪೇಟೆಯ Mangles Brothers ಕಂಪೆನಿಯಲ್ಲಿ ಡಾಕ್ಟರರಾಗಿ ಕೆಲಸ ಮಾಡಿದ್ದಾರೆ. ನಂತರ ಸಾರ್ವಜನಿಕ ಸೇವೆಯಲ್ಲಿ ತೊಡಗಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಇವರು ಕೊಡಗು ಇಂಗ್ಲೀಷರ ಆಳ್ವಿಕೆಗೊಳಪಟ್ಟಿದ್ದಾಗ ಗೌರವ ಮೇಜಿಸ್ಟ್ರೇಟ್ ಹುದ್ದೆಯನ್ನು ಸಮರ್ಪಕವಾಗಿ ನಿರ್ವಹಿಸಿದರು. ಕೊಡಗು ಗೌಡ ವಿದ್ಯಾಸಂಘದ ಉತ್ಕರ್ಷಕ್ಕಾಗಿ ಹಲವಾರು ವರ್ಷ ದುಡಿದಿದ್ದಾರೆ. ವಿದ್ಯಾ ಪ್ರಸಾರದಲ್ಲಿ ಆಸಕ್ತರಾದ ಇವರು ನಾಪೋಕ್ಲು ಮತ್ತು ಪಾರಾಣೆ ಪ್ರೌಢಶಾಲೆಗಳ ಸ್ಥಾಪನೆಗಾಗಿ ಹಗಲಿರುಳು ಶ್ರಮಿಸಿದ್ದಾರೆ. ತಮ್ಮೂರಿನ ಹಿತಕ್ಕಾಗಿ ಮೂರ್ನಾಡು–ಬಲಮುರಿ ರಸ್ತೆಯ ಪುನರ್ ನಿರ್ಮಾಣ, ಬಲಮುರಿ ಗ್ರಾಮರಸ್ತೆ ಮತ್ತು ಬಲಮುರಿ ಸೇತುವೆಗಳ ನಿರ್ಮಾಣಗಳಿಗಾಗಿ ಉತ್ಸಾಹದಿಂದ ದುಡಿದಿದ್ದಾರೆ. ಇವರ ಪರಿಶ್ರಮದ ಫಲವಾಗಿ ಬಲಮುರಿ ಇಂದು ಕೊಡಗಿನ ಒಂದು ಮಾದರಿ ಗ್ರಾಮವೆನ್ನಿಸಿದೆ. ಎಪ್ಪತ್ತೈದು ವರ್ಷ ಪ್ರಾಯ ಮೀರಿದ ಈ ಪಿತಾಮಹರು ಯುವಕರ ಹುಮ್ಮಸ್ಸಿನಿಂದ ಬರೆದ ಲೇಖನದಿಂದಾಗಿ ನಮಗವರ ವಿಶಾಲ ಜ್ಞಾನದ ಲಾಭ ದೊರಕಿದೆ.) —ಸಂ.

ಪೂರ್ವ ಕಾಲದಲ್ಲಿ ಈ ಕೊಡಗು ದೇಶವನ್ನು ಲಿಂಗಾಯಿತ ಅರಸರು ರಾಜ್ಯಭಾರ ಮಾಡುತ್ತಿದ್ದರು. ಈ ದೇಶದಲ್ಲಿ ಜನಸಂಖ್ಯೆ ಬಹಳ ಕಡಿಮೆ ಇದ್ದು ದಟ್ಟವಾದ ಅಡವಿಯಾಗಿತ್ತು. ಈ ಅಡವಿಯಲ್ಲಿ ಅನೇಕ ವಿಧವಾದ ವನ್ಯ ಜಂತುಗಳು, ಹಾವುಗಳು ತುಂಬಿಕೊಂಡು ಜನರಿಗೆ ತುಂಬಾ ಕಷ್ಟ ಕೊಡುತ್ತಿದ್ದವು.

ಆ ಕಾಲದಲ್ಲಿ ಕೊಡಗಿನ ಲಿಂಗರಾಜರಿಗೆ ಇಕ್ಕೇರಿ ಸಂಸ್ಥಾನದ, ಐಗೂರು, ಸುಳ್ಯ, ಅಮರ ಸೀಮೆಗಳಲ್ಲಿ ಲಿಂಗಾಯಿತ ಪಾಳೆಯಗಾರರಿದ್ದರು. ಅವರಿಗೂ ಕೊಡಗಿನ ಲಿಂಗರಾಜನಿಗೂ ಬಂಧು ಸಂಬಂಧವಿತ್ತು. ಹಿಂದಿನ ಕಾಲದಲ್ಲಿ ಅಮರ ಮತ್ತು ಸುಳ್ಯ ಸೀಮೆಗಳೆರಡು ಕೊಡಗಿಗೆ ಸೇರಿತ್ತು. ಆ ಎರಡು ಊರುಗಳನ್ನು ದಕ್ಷಿಣ ಕನ್ನಡ

ಜಿಲ್ಲೆಗೆ ಬಿಟ್ಟುಕೊಟ್ಟು ಸಂಪಾಜೆ ಮತ್ತು ಪೆರಾಜೆ ಎಂಬೆರಡು ಊರುಗಳನ್ನು ಕೊಡಗಿಗೆ ಸೇರಿಸಿಕೊಂಡರು. ಈ ಮೇಲ್ಕಂಡ ರಾಜರುಗಳ ನೆಂಟು ಸಂಬಂಧ ಮೇಲೆ ಹೇಳಿದ ಊರುಗಳಿಂದ ಅಲ್ಲಿಯ ಗೌಡ ಜನಾಂಗದವರನ್ನು ಏನಾದರೂ ವರ್ತಮಾನವನ್ನು ತಿಳಿಸಲಿಕ್ಕಾಗಿಯೂ ಮತ್ತು ಇತ್ತರ ಕೆಲಸಕಾರ್ಯಗಳಿಗೆ ಪದೇ ಪದೇ ಕಳುಹಿಸಿ ಎಲ್ಲಾ ಸಮಾಚಾರಗಳನ್ನು ತಿಳಿದುಕೊಳ್ಳುತ್ತಿದ್ದರು. ಹಾಗೆ ಬರುತ್ತಿದ್ದ (ಗೌಡ ಜನಾಂಗದವರು ಕೊಡಗಿನ ರಾಜರಾದ ಲಿಂಗರಾಜನಿಗೆ ತುಂಬಾ ವಿಧೇಯರಾಗಿ ನಡೆಯುತ್ತಿದ್ದರು. ಇವರ ವಿಧೇಯತ್ವಕ್ಕೂ, ಸತ್ಯ, ಸಾಧು ಸ್ವಭಾವ ರಾಜಭಕ್ತಿಗೂ ಲಿಂಗರಾಜನು ಮೆಚ್ಚಿಕೊಂಡಿದ್ದನು. )

ಹೇಗೂ ಮೇಲಿನ ಊರುಗಳಿಂದ ಕೊಡಗಿಗೆ ಐದು ಸಾವಿರ ಗೌಡರುಗಳನ್ನು ಅವರ ಸಂಸಾರ ಸಮೇತ ಕೊಡಗಿಗೆ ಕಳುಹಿಸಿಕೊಡಬೇಕೆಂದು ಹಾಗೆ ಕಳುಹಿಸಿಕೊಟ್ಟಲ್ಲಿ ಅವರಿಗೆ ಜಮ್ಮ, ಜಾಹಗಿರು, ಉಂಬಳಿಯಾಗಿ ಅವರವರು ಬಂದು ನೆಲೆಸುವ ಗ್ರಾಮಗಳಲ್ಲು ಬಿಟ್ಟು ಕೊಡುವುದಾಗಿ ವಾಗ್ದಾನ ಮಾಡಿದನು. ಅದೇ ಪ್ರಕಾರ ಮೇಲ್ಕಂಡ ಊರುಗಳಿಂದ ಅವರ ಮುಖ್ಯಾಧಿಕಾರಿಗಳು ಬಿಟ್ಟುಕೊಟ್ಟರು. ಹಾಗೆಯೇ ಐಗೂರು, ಇಕ್ಕೇರಿ ಸಂಸ್ಥಾನಗಳಿಂದ ಕನ್ನಡ ಭಾಷೆಯನ್ನಾಡತಕ್ಕ ಒಕ್ಕಲಿಗ ಗೌಡುಗಳು, ಲಿಂಗಾಯಿತರು ಮತ್ತು ಅಮರಸುಳ್ಯ ಸೀಮೆಗಳಿಂದ ಅರ್ಧ ಕನ್ನಡ ಭಾಷೆಯನ್ನಾಡುವ ಗೌಡುಗಳು ಬಂದು ನೆಲಸಿದರು. ಹೀಗೆ ಬಂದವರಲ್ಲಿ ಕೊಡಗಿನ ಪಶ್ಚಿಮ ಭಾಗದಲ್ಲು ನೆಲಸಿರುವ ಒಕ್ಕಲಿಗ ಗೌಡುಗಳು ಈಗಿನ ಜಮ್ಮ ಕೊಡಗರೆ. ಇನ್ನು ಕೆಲವು ಜನರು ಕೊಡಗಿನ ದಕ್ಷಿಣ ಮತ್ತು ಪೂರ್ವ ಭಾಗದಲ್ಲು ಇದ್ದಾರೆ. ಆಗಿನ ಕೊಡಗಿನ ಅರಸನಾದ ಲಿಂಗರಾಜನು ಈ ಜನರಿಗೆಲ್ಲಾ ತನ್ನ ಆಳತೆಕೋಲಿನಿಂದ ಭೂಮಿಯನ್ನು ಅವರವರಿಗೆ ನಿಂಗಡಿಸಿಕೊಟ್ಟು ಅದನ್ನು ಜಮ್ಮ, ಜಾಹಗೀರು, ಉಂಬಳಿ ಎಂಬುದಾಗಿ ದಾಕ್ಲೆ ಮಾಡಿ ಪ್ರತಿ ಒಂದು ಹುಕುಕಮ್ಮ ನಿರೂಪ, ಶಿಸ್ತುಗಳು ದಯಪಾಲಿಸಿದನು. ಇವು ಎರಡರಲ್ಲೂ ಮೇಲ್ಕಂಡ ಸೊತ್ತುಗಳು ವಿವರವಾಗಿ ಅಡಕವಾಗಿವೆ.

**ಲಿಂಗರಾಜನ ಹುಕುಂ :**—ಪ್ರತಿ ಒಬ್ಬ ಮತಸ್ಥನು ರಾಜನ ಆಸ್ಥಾನಕ್ಕೆ ಬರುವಾಗ ಒಂದೇ ನಮೂನೆ ಉಡುಪು (ಡ್ರೆಸ್)ನಿಂದ ಬರಬೇಕು. ಆ ಡ್ರೆಸ್ಸಿನ ವಿವರ ; ಉದ್ದ ಕೈಯಿಂದ ಕೂಡಿದ ಕುಪ್ಪಸ (ನಿಲುವಂಗಿ), ಸೊಂಟಕ್ಕೆ ಕಪ್ಪು ಬಣ್ಣದ ಪಟ್ಟಿ, ತಲೆಗೆ ಕಪ್ಪು ಬಣ್ಣದ ಪಾನಿಕಟ್ಟು (ರುಮಾಲೆ), ಕೈಗೆ ಒಡಿಕತ್ತಿ, ಸೊಂಟದ ದಟ್ಟಿಗೆ ಸಿಕ್ಕಿಸಲಿಕ್ಕೆ ಚೂರಿಕತ್ತಿ (ಪೀಚೆಕತ್ತಿ) ಅಂದಿನ ಕಾಲದಲ್ಲು ಕೊಟ್ಟಂತಹ ಡ್ರೆಸ್ಸು ಬ್ರಿಟೀಷರ ಕಾಲದಲ್ಲು ಖಜಾನೆ ಪಹರೆಯಲ್ಲಿದ್ದ ಬಾವುದಿಕಾರರಿಗೆ ಇತ್ತು. ಅದರೆ ಪ್ರತೀ ಒಬ್ಬ ಪ್ರಜೆಯೂ ಅವರವರ ಶುಭ ಮತ್ತು ಅಶುಭ ಸಮಯದಲ್ಲೂ ಅವರವರ ಸ್ವಂತ ಮತಾಚಾರದ ಉಡುಪುಗಳನ್ನು ಧರಿಸಿಕೊಳ್ಳಬಹುದೆಂದು ಅಂತಹ ವಿಷಯಗಳಿಗೆ ರಾಜನು ಕೈಹಾಕುವುದಿಲ್ಲವೆಂದು ಹುಕುಂ ಕೊಟ್ಟನು.

**ಕಟ್ಟಿಮನೆ ಸ್ಥಾನ ಇಲ್ಲದೆ ಜಾತಿಗೌಡ :** ಈ ಬಿರುದಾವಳಿ ಕೆಲವು ಗೌಡುಗಳಿಗೆ ಮಾತ್ರ ಇದೆ. ಇನ್ನು ಕೆಲವರಿಗೆ ಇಲ್ಲ. ಇದು ಅಂದಿನಿಂದ ಇಂದಿನವರೆಗೂ ಗೌಡುಗಳಲ್ಲಿ ತುಂಬಾ ತೊಂದರೆಯನ್ನುಂಟುಮಾಡಿದೆ. ಪ್ರತೀ ಒಂದು ಶುಭಕಾರ್ಯಗಳಲ್ಲಿ ಆಯಾಯ ಗ್ರಾಮಗಳಲ್ಲಿ ಅವರು ಮಾತ್ರ ಜಾತಿಗೌಡರು ; ನಾವು ಏನು ಜಾತಿಗೆಟ್ಟ ಗೌಡಗಳೊ? ಎಂದು ಕೆಲಕಡೆಗಳಲ್ಲಿ ಹೊಡೆದಾಟ ಬಡೆದಾಟಗಳು ನಡೆದಿವೆ. ಆದರೆ ಪಾಪ ಅಂಥವರಿಗೆ ಹೇಗೆ ತಾನೆ ತಿಳಿಯಬೇಕು? ನಮ್ಮ ಹಿರಿಯರ ಕಾಲದಲ್ಲಿ ಶೃಂಗೇರಿ ಮಠದ ಗುರುಗಳಿಗೆ ಗುರುಕಾಣಿಕೆ ಕಟ್ಟುವ ಪದ್ಧತಿ ಇತ್ತು. ಈ ಗುರುಕಾಣಿಕೆಯನ್ನು ಕಟ್ಟಿ ಗುರುಗಳಿಂದ ಆಶೀರ್ವಾದ ಪಡೆದು ತನ್ನ ಕುಲದ ಪದ್ಧತಿ ಮೇರೆ ಶುಭ ಅಶುಭ ಕಾಲಗಳಲ್ಲು ನಮ್ಮ ಗೌಡ ಜನಾಂಗದವರು ಹೇಗೆ ನಡಕೊಳ್ಳಬೇಕು ಎಂಬುದಾಗಿ ಕೇಳಿದ ಸಂದರ್ಭದಲ್ಲು ಅವರು ಸಂಪೂರ್ಣ ಅಭಿಪ್ರಾಯ ಕೊಟ್ಟಿರುತ್ತಾರೆ. ಇದು ಮುಂದೆ ವಿವರಿಸಲ್ಪಡುತ್ತದೆ.

**ಕಟ್ಟಿಮನೆ ಸ್ಥಾನ ಯಾ ಜಾತಿಗೌಡ:** ಪೂರ್ವಕಾಲದಲ್ಲು ಗುರುಕಾಣಿಕೆ ಕಟ್ಟಲಿಕ್ಕೆ ಪ್ರತಿಯೊಂದು ಗ್ರಾಮದಿಂದ ಒಬ್ಬ ಮನುಷ್ಯನನ್ನು ಆ ಗ್ರಾಮದ ಜನರು ಚುನಾಯಿಸಿ ಬುದ್ಧಿವಂತನಾಗಿಯೂ ತುಂಬಾ ತಿಳಿವಳಿಕೆ ಇರು

ವಂತಹವನನ್ನು ಚುನಾಯಿಸುತ್ತಿದ್ದನು. ಹಾಗೆಯೇ ತೊಂಬತ್ತಾರು (96) ಗೌಡುಗಳನ್ನು ಚುನಾಯಿಸಿ ಗುರು ಕಾಣಿಕೆ ಕಟ್ಟಲಿಕ್ಕೆ ಕಳುಹಿಸಿದರು. ಅಲ್ಲಿ ಶೃಂಗೇರಿ ಮಠದ ಗುರುಗಳು ಜನರ ಭಕ್ತಿಗೆ ಮೆಚ್ಚಿ ಗುರುಕಾಣಿಕೆ ತೆಗೆದು ಕೊಂಡರು ಆಗ ನೀವು ಗೌಡುಗಳಲ್ಲಿ ತಿಳುವಳಿಕೆ ಇರುವ ಜನರು ನಿಮಗೆ ಶುಭ ಕಲ್ಯಾಣದಲ್ಲು ಗೌಡ ಆರತಿ ಎಂದು ಬೆಳಗಬೇಕು. ನಿಮ್ಮ ಗುರು ವೆಂಕಟರಮಣದೇವನ ಪೂಜೆ ಯಲ್ಲು ನಿಮ್ಮ ನಿಮ್ಮ ಗ್ರಾಮಗಳಲ್ಲೂ ಇತರ ಗ್ರಾಮ ಗಳಲ್ಲೂ ಒಂದು ಜೋಡು ತೆಂಗಿನ ಒಡೆ, ಹಣ್ಣು ಇವು ಗಳನ್ನು ಕೊಡಬೇಕು. ಗ್ರಾಮಗಳಲ್ಲಿ ಉಂಟಾಗುವ ಕಲಹ ಇತರ ವಿಷಯಗಳಲ್ಲೂ ಜಾತಿಪದ್ಧತಿಗೆ ವಿರೋಧ ನಡೆಯುವ ಸಂದರ್ಭದಲ್ಲು ಪಂಚಾಯಿತಿ ಮೂಲಕ ಬಗೆಹರಿಸುವ ಹಕ್ಕು ನಿಮಗಿರಬೇಕೇದು ಆಶೀರ್ವದಿಸಿ ಕಳುಹಿಸಿದರು. ಅದೇ ರೀತಿಯಾಗಿ ಅಂದು ಗ್ರಾಮಗಳಲ್ಲಿ ಇರುವ ಗುರುಕಾಣಿಕೆ ಕಟ್ಟ ಬಂದಂತಹ ವ್ಯಕ್ತಿಯನ್ನು ಬಹುಮಟ್ಟಿಗೆ ಗೌರವಿಸುತ್ತಿದ್ದರು. ಆದುದರಿಂದ ಕಟ್ಟೆ ಮನೆ ಸ್ಥಾನ ಮತ್ತು ಜಾತಿಗೌಡ ಎಂಬುದು ಡಂಬ ಚಾರಿಗಳು ಆಡುವ ಮಾತಲ್ಲ.

ಹೆರಿಗೆ:—ಕುಟುಂಬದಲ್ಲು ಒಬ್ಬಳು ಹೆಂಗಸು ಹೆತ್ತರೆ ಸೂತಕವು ಐದು ದಿವಸ. ಆ ಐದನೆ ದಿವಸದಲ್ಲು ಮನೆಯನ್ನು ಶುದ್ಧ ಮಾಡಿ ದೇವಸ್ಥಾನದಿಂದ ಒಂದು ಚೆಂಬಿನಲ್ಲು ಪುಣ್ಯಾರ್ಚಣೆ (ದೇವರ ಬಿಂಬದ ಮೇಲೆ ಅರ್ಚಕನು ಸ್ನಾನ ಮಾಡಿಸಿದ ನೀರು) ಆದನ್ನು ನೆರೆಮನೆ ಯವನಿಂದ ತರಿಸಿ ಮಾವಿನ ಎಲೆಗಳಿಂದ ಮೊದಲು ಮುಡಿಪಿಗೆ ಚಿಮುಕಿಸಿ ನಂತರ ಇಡೀ ಮನೆಗೂ ಆ ಮನೆಯ ಜನರ ಮೇಲು ಚಿಮಿಕಿಸಬೇಕು. ನಂತರ 40ನೇ ದಿವಸದಲ್ಲು ಬಾಣಂತಿಯು ಎಂದಿನಂತೆ ಸ್ನಾನ ಮುಗಿಸಿಕೊಂಡು ಒಂದು ತುದಿ ಬಾಳೆ ಎಲೆಯ ಮೇಲೆ ಸ್ವಲ್ಪ ಅಕ್ಕಿ, ' ಹೂ ', ತುಳಸಿ, ವೀಳ್ಯದೆಲೆ, ಕುಂಕುಮ ಇವುಗಳನ್ನು ತೆಗೆದುಕೊಂಡು ಹರಿಯುವ ನೀರು (ಹೊಳೆ, ತೋಡು) ಇವುಗಳಲ್ಲಿ ಗಂಗಾದೇವಿಯನ್ನು ಧ್ಯಾನಿಸಿ ಆ ಹರಿಯುವ ನೀರಲ್ಲು ಆ ಬಾಳೆ ಎಲೆ ಸಮೇತ ಬಿಟ್ಟು ವಾಪಾಸು ಮನೆಗೆ ಬರುವಾಗ ಒಂದು ಬಿಂದಿಗೆ ನೀರನ್ನು ಬಾವಿಯಿಂದ ತಂದು ಅಡಿಗೆ ಮನೆಯಲ್ಲು ಇಟ್ಟು ಅಡಿಗೆ ಮಾಡುವ ಎಲ್ಲಾ ಸಾಮಾನುಗಳಿಗೂ ನಮಸ್ಕಾರ ಮಾಡಿ ಕೈಯಲ್ಲಿ ಸ್ವಲ್ಪ ಅಕ್ಕಿಯನ್ನು ತೆಗೆದುಕೊಂಡು ತನ್ನ ಕುಲ ಗುರುವಿಗೆ (ಮುಡಿಪು) ಹಾಕಿ ನಮಸ್ಕರಿಸಿ ನಂತರ ಕುಟುಂಬದ ಹಿರಿಯರ ಪಾದವನ್ನು ಮುಟ್ಟಿ ನಮಸ್ಕರಿಸ ಬೇಕು. ಆಮೇಲೆ ಬಾಣಂತಿತನ ಮುಗಿಯಿತು.

### ಮಗುವನ್ನು ತೊಟ್ಟಿಲಲ್ಲಿ ಇಡುವ ವಿಚಾರ ಮತ್ತು ನಾಮಕರಣ :

ಮಗುವು ಹುಟ್ಟಿದ ಮಾಸದಲ್ಲಾಗಲಿ, ಮೂರು, ಐದನೇ ಮಾಸದಲ್ಲಾಗಲಿ ಗುರು, ಬುಧ, ಶುಕ್ರ, ಚಂದ್ರ, ವಾರಗಳಲ್ಲಿ ಪಕ್ಷ, ಚಿದ್ರ. ಸರ್ವ ತಿಥಿಗಳನ್ನು ಬಿಟ್ಟು ಮಿಕ್ಕ ತಿಥಿಗಳಲ್ಲಿಯೂ ರೇವತಿ, ಪುನರ್ವಸು, ಹಸ್ತ, ಚಿತ್ತ, ಸ್ವಾತಿ, ಅಶ್ವಿನಿ, ಮೃಗಶಿರ, ಅನುರಾಧ, ಜೇಷ್ಟ, ವಿಶಾಖ, ಈ ನಕ್ಷತ್ರ ತಾರಾಬಲವುಳ್ಳ ನಕ್ಷತ್ರಗಳಲ್ಲಿಯೂ ಲಗ್ನಕ್ಕೆ ಅಷ್ಟಮ ಶುದ್ಧಿ ಇರುವಾಗಲೂ ಮಗುವನ್ನು ಜೋಗುಳ ಪದ ಹಾಡಿ ಮುತ್ತೈದೆಯವರಿಂದ ತೊಟ್ಟಿಲಲ್ಲಿ ಇರಿಸಿ ತೂಗಿಸಬೇಕು. ಅದೇ ಸಮಯದಲ್ಲಿ ನಾಮಕರಣ ಮಾಡುವುದು. (ಮಗು ಹುಟ್ಟಿದ 11, 12, 16, 20 ಹಾಗೂ 22ನೇ ದಿನಗಳಲ್ಲಿ).

### ರುತುಶಾಂತಿ

ಸ್ತ್ರೀಯರು ಪ್ರಥಮ ರಜಸ್ವಲೆಯಾದರೆ ಯಾವು ದಾದರೂ ಒಂದು ಫಲ ವೃಕ್ಷದ ಅಡಿಯಲ್ಲು ಕೂತುಕೊಂಡಿ ರುತ್ತಾಳೆ. ಆ ಸಮಯದಲ್ಲು ಅವಳ ಸಂಬಂಧಿಕರು ಪತ್ತೆ ಹಚ್ಚುತ್ತಾರೆ. ನಂತರ ನೆರೆಮನೆ ಕುಲಸ್ಥರ ಹೆಂಗ ಸರಿಗೆ ತಿಳಿಸುತ್ತಾರೆ. ಅವರೆಲ್ಲರು ಬಂದು ಅವಳ ತಲೆಗೆ ನೀರು ಹೊಯ್ಯುತ್ತಾರೆ. ನಂತರ ಅವಳಿಗೆ ಊಟ ಕೊಟ್ಟು ಐನ್ ಮನೆಯಿಂದ ಹೊರಗಿರುವ ಲೈನು ಮನೆಯಲ್ಲಿ ವಾಸಕ್ಕೆ ಏರ್ಪಾಡು ಮಾಡುತ್ತಾರೆ. ನಂತರ ಮೂರನೆ ದಿವಸ ಅಗಸಗಿತ್ತಿಯನ್ನು ಬರಮಾಡಿ ಪುಣ್ಯಾರ್ಚಣೆ ತರಿಸಿ ಶಾಸ್ತ್ರೋಕ್ತವಾಗಿ ಕ್ರಮವನ್ನು ಜರುಗಿಸುತ್ತಾರೆ. ನಂತರ ಮನೆಯನ್ನು ಚವುಳು ನೀರು ಹಾಗೂ ಪುಣ್ಯಾರ್ಚಣೆ ಗಳಿಂದ ಶುದ್ಧಿಗೊಳಿಸಿ ಹುಡುಗಿಗೆ ಸ್ನಾನ ಮಾಡಿಸಿ

ಹೊಸ ವಸ್ತ್ರಗಳನ್ನು ಉಡಿಸಿ ಗ್ರಹ ಪ್ರವೇಶ ಮಾಡಿಸುತ್ತಾರೆ. ಅವಳು ಹಿರಿಯರ ಪಾದ ಮುಟ್ಟಿ ನಮಸ್ಕರಿಸುತ್ತಾಳೆ.

## ರುತುಶಾಂತಿ ಲಗ್ನ

ಇದು ಹಿಂದಿನ ಕಾಲದ ಪದ್ಧತಿ. ಇದು ಅಷ್ಟು ಸಮರ್ಪಕವಾದುದಲ್ಲ. ಅದನ್ನು ಪ್ರತಿ ಒಬ್ಬ ಗೌಡನು ಬಿಡಬೇಕೆಂಬುದೇ ನನ್ನ ಅಭಿಪ್ರಾಯ. ಆದರೂ ಅದನ್ನು ಸ್ವಲ್ಪ ಮಟ್ಟಿಗೆ ವರ್ಣಿಸುತ್ತೇನೆ. ಆ ಲಗ್ನವನ್ನು ನಿಶ್ಚಯಿಸಿಕೊಂಡ ದಿವಸ ಅದಕ್ಕೆ ಮುಂಚೆಯೇ ಬಂಧು ಮಿತ್ರರಿಗೂ ನೆರೆಮನೆಯವರಿಗೂ ಪತ್ರ ಮೂಲಕ ತಿಳಿಸುತ್ತಾರೆ. ಆ ದಿವಸ ಅವರೆಲ್ಲರೂ ಬರುತ್ತಾರೆ. ಹುಡುಗಿಗೆ ಸ್ನಾನ ಮಾಡಿಸಿ ಒಳ್ಳೆ ಬಟ್ಟೆಗಳನ್ನು ಧರಿಸಿ ಆಭರಣಗಳಿಂದ ಅಲಂಕರಿಸಿ ಗಂಗೆಪೂಜೆ ಮಾಡಿಸಿ ಮನೆಗೆ ಕರೆದುಕೊಂಡು ಬಂದು ನೆಲ್ಲಕ್ಕಿ ಅಡಿಯಲ್ಲಿ ಕೂಡಿಸುತ್ತಾರೆ. ನಂತರ ಹುಡುಗಿಯ ತಾಯಿ ತಂದೆಯವರು ಹಣ ಕಟ್ಟುತ್ತಾರೆ. ನಂತರ ಅಲ್ಲಿ ಕೂಡಿದ ಜನರೆಲ್ಲರೂ ಹಣ ಕಟ್ಟುತ್ತಾರೆ. ಆಮೇಲೆ ಊಟದ ಏರ್ಪಾಡು ಆಗುತ್ತೆ. ಈ ಊಟಕ್ಕೆ ಈಗಿನ ಮದುವೆಯ ಮುಹೂರ್ತ ಊಟದ ಖರ್ಚಾಗುತ್ತಿತು.

## ಶಿವಕಲ್ಯಾಣ (ಮದುವೆ)

ಮದುವೆಗಳಲ್ಲು ಮೂರು ವಿಧಗಳುಂಟು. 1. ಶಿವ ಕಲ್ಯಾಣ. 2. ಗಾಂಧರ್ವ ವಿವಾಹ. 3. ತಾಳಿ ಕಟ್ಟುವ ಮದುವೆ-ತಾಳಿ (ಮಾಂಗಲ್ಯ) ಅಡೋಡಿ (ಗಡಿಬಿಡಿ) ಮದುವೆ. ಗಾಂಧರ್ವ ವಿವಾಹ-ಇದು ಗಂಡು ಹೆಣ್ಣು ಒಪ್ಪಿಕೊಂಡು ರಿಜಿಸ್ಟರ್ ಮೂಲಕ ಮಾಡುವ ಮದುವೆ. ಮೂರನೆಯದು ಸಾಧಾರಣ ಒಂದು ಶತಮಾನಗಳ ಹಿಂದೆ ತೊಟ್ಟಿಲಲ್ಲಿನ ಹೆಣ್ಣು ಮಗುವಿನಿಂದ ಪ್ರಾಯಕ್ಕೆ ಬಂದ ಹುಡುಗಿಯವರೆಗೆ ತಾಳಿ ಕಟ್ಟಿ ತನ್ನ ಹಕ್ಕು ಎಂದು ಹೇಳಿ ನಂತರ ಮದುವೆ ಮಾಡಿಕೊಳ್ಳುತ್ತಿದ್ದರಂತೆ. ಇವುಗಳಲ್ಲಿ ಶ್ರೇಷ್ಠವಾದ ಮದುವೆ ಶಿವಕಲ್ಯಾಣ :— ಇಲ್ಲಿ ತಾಯಿ ತಂದೆಯರು ತಮ್ಮ ಮಗಳಿಗೂ, ಮಗನಿಗೂ ಮದುವೆ ಏರ್ಪಾಡು ಮಾಡುತ್ತಿದ್ದರು. ತಮಗೆ ಸರಿ ತೋರುತ್ತಿದ್ದವರಲ್ಲಿ ಈ ನೆಂಟಸ್ಥಿಕೆ ಬೆಳೆಸುತ್ತಿದ್ದರು. ಇದರಲ್ಲು ಬಿಳಿ ಹೂ ಬಿದ್ದರೆ ಶುಭವೆಂತಲೂ ಕೆಂಪು ಹೂ ಬಿದ್ದರೆ ಅಶುಭವೆಂದು ತಿಳಿದು ಲಗ್ನ ಕಟ್ಟುತ್ತಿದ್ದರು. ನಂತರ ವೀಳ್ಯಶಾಸ್ತ್ರಕ್ಕೆ ಗಂಡಿನ ಕಡೆಯವರನ್ನು ಇಂತಹ ಒಂದು ದಿವಸ ಬರಬೇಕೆಂದು ತಿಳಿಸುತ್ತಾರೆ. ಅದೇ ರೀತಿಯಾಗಿ ಗಂಡಿನ ಕಡೆಯಿಂದ ಐದು ಜನರು ಪದ್ಧತಿ ಮೀರೆ ನಮ್ಮ ಜನಾಂಗದ ಪದ್ಧತಿಗೆ ಅನುಸಾರವಾದ ಉಡುಪಿನಿಂದ ಬರುತ್ತಾರೆ. ಹಾಗೆ ಬಂದ ಅವರಿಗೆ ಮನೆಯ ಯಜಮಾನನು ಅತಿಥಿ ಸತ್ಕಾರ ಮಾಡಿ ಯೋಗಕ್ಷೇಮಗಳನ್ನು ಪರಸ್ಪರ ತಿಳಿಸಿಕೊಳ್ಳುತ್ತಾರೆ. ನಂತರ ಮನೆಯ ಕೈಶಾಲೆ (ಕಯ್ಯಾಲೆ) ಯಲ್ಲು ಒಂದು ಹೊಸ ಚಾಪೆಯನ್ನು ಹಾಸಿ ಒಂದು ಮುಕ್ಕಾಲಿಯ ಮೇಲೆ ಒಂದು ಕಂಚಿನ ಬಟ್ಟಲಿನಲ್ಲಿ ಸ್ವಲ್ಪ ಅಕ್ಕಿ, ಐದು ವೀಳ್ಯದೆಲೆ, ಐದು ಹಣ್ಣು ಅಡಿಕೆ ಮತ್ತು ಚೆನ್ನಾಗಿ ಉರಿಯುತ್ತಿರುವ ಒಂದು ಮಣ್ಣಿನ ದೀಪ, ಇನ್ನೊಂದು ಕಡೆ ಅಥವಾ ಚಾಪೆಯ ಮಧ್ಯಭಾಗದಲ್ಲು 'ಮುಕ್ಕಾಲಿಯ' ಮೇಲೆ ಒಂದು ಹರಿವಾಣ, ಅದರಲ್ಲು ಸ್ವಲ್ಪ ಅಕ್ಕಿ, ಎರಡು ವೀಳ್ಯದೆಲೆ, ಹಣ್ಣು ಅಡಿಕೆ ಅದರ ಕೆಳಗೆ ಒಂದು ತಂಬಿಗೆಯಲ್ಲಿ ನೀರು, ನಂತರ ಕುಲಪದ್ಧತಿ ಉಡುಪಿನ ಮೇರೆ ಹೆಣ್ಣಿನ ಕಡೆಯಿಂದ ಮೂರು ಜನರು ಗಂಡಿನ ಕಡೆಯಿಂದ ಮೂರು ಜನರು ಇದಿರು ಬದಿರಾಗಿ ಕೂತುಕೊಂಡು 1) ಮಾತಿನ ಕರಾರು ವೀಳ್ಯ 2) ವೀಳ್ಯಶಾಸ್ತ್ರದ ವೀಳ್ಯ, 3) ಬಣ್ಣ ಬಂಗಾರದ ವೀಳ್ಯ, 4) ಮದುವೆ ಕುರಿ ವೀಳ್ಯ-ಎಂಬುದಾಗಿ ನಾಲ್ಕು ವೀಳ್ಯಗಳನ್ನು ಗಂಡಿನ ಕಡೆಯವರು ಹರಿವಾಣದಲ್ಲಿ ವೀಳ್ಯವನ್ನು ತುಂಬಿ ಎದ್ದು ನಿಂತು ಚೆಂಬಿನಲ್ಲಿರುವ ನೀರನ್ನು ಮುಟ್ಟಿ 1ನೇ ವೀಳ್ಯ, ಹತ್ತು ಕುಟುಂಬ ಹದಿನೆಂಟು ಗೋತ್ರ, ಕುಲಸ್ತರ ಸಭೆ ಸಮಸ್ತರ ಸಂಗಡ ಕೇಳಿ ಮಾತಿನ ಕರಾರು ವೀಳ್ಯ ಎತ್ತಿಕೊಡುತ್ತೇವೆ ಎಂದು ಹೇಳುವರು. ಕುಲಸ್ತರು ಒಳ್ಳೆ ಕಾರ್ಯ ಅನ್ನುತ್ತಾರೆ. ಹೀಗೆಯೇ ಮೇಲಿನಂತೆ ಹೇಳಿ ವೀಳ್ಯಶಾಸ್ತ್ರದ ವೀಳ್ಯ. 4ನೇ ವೀಳ್ಯ ಮದುವೆ ಕುರಿವೀಳ್ಯ—ಇದರಲ್ಲು ಇಂಥ ಗಂಡಿಗೆ ಇಂತಹ ಹೆಣ್ಣು ಮಾತು ಕಂಡಿತವಾಯಿತು, 3ನೇ ಬಣ್ಣ ಬಂಗಾರದ ವೀಳ್ಯ ಹುಡುಗಿಗೆ ಬೇಕಾದ ಚಿನ್ನ, ಬೆಳ್ಳಿಯ [illegible], ಸೀರೆ,

ತುಂಡು ಕೈಯ ರವಕೆ (ಮಾಂಗಲ್ಯದ ವಿಷಯ ಕೇಳ ಬಾರದು) ಉಳಿದ ಎಲ್ಲವನ್ನು ಹುಡುಗಿಯ ಸಂಬಂಧಿಕರು ಹೇಳಿ ಬಣ್ಣ ಬಂಗಾರು ತರುವಾಗ ವಿಚಾರಿಸಿಕೊಳ್ಳ ಬಹುದು. 4ನೇ ಮದುವೆ ಕುರಿ ವೀಳ್ಯ, ಇಂತಹ ದಿವಸ ಮದುವೆ ಎಂದು ತಿಳಿಸುತ್ತದೆ. ಇಲ್ಲಿಗೆ ವೀಳ್ಯಶಾಸ್ತ್ರ ಮುಗಿಯಿತು. ಇನ್ನು ಮೂರು ವೀಳ್ಯಗಳು ಇವೆ. ಅವು ಯಾವುವು ಎಂದರೆ 1) ತಂದೆ ಗೋತ್ರ ವೀಳ್ಯ 2) ತಾಯಿ ಗೋತ್ರ ವೀಳ್ಯ 3) ಮಹಾನಾಡು ವೀಳ್ಯ. ಇವುಗಳನ್ನು ದಿಬ್ಬಣ ಬಂದು ಧಾರೆಗೆ ಮುಂಚೆ ಬಣ್ಣ ಬಂಗಾರ ಇಡುವ ಸಮಯದಲ್ಲು ಮುಗಿಸುತ್ತಾರೆ. ವೀಳ್ಯ ಶಾಸ್ತ್ರ ಮುಗಿಸಿ ಹೋಗುವಾಗ ಅವರಿಗೆ ಒಕ್ಕಲು ಯಜಮಾನನು ಲಗ್ನ ಪತ್ರಿಕೆ ಕೊಟ್ಟು ಕಳುಹಿಸುತ್ತಾನೆ. ಅದಕ್ಕೆ ಅಲ್ಲಿ ಸೇರಿದ ಜನರೆಲ್ಲರು ರುಜು ಮಾಡುತ್ತಾರೆ.

## ಚಪ್ಪರ

ಮುಹೂರ್ತಕ್ಕೆ ಒಂದು ದಿವಸಕ್ಕೆ ಮುಂಚೆ ಚಪ್ಪರ ಹಾಕಬೇಕು. ಆ ಸಮಯದಲ್ಲು ಊರಿನ ಕುಲಸ್ಥರು ಗಂಡು ಹೆಣ್ಣು ಬಂದು ಸೇರಬೇಕು. ಹನ್ನೆರಡು ಕಂಬ ದಾರೆ ಮಂಟಪದ ಕಂಭಗಳ ಜೊತೆಗೆ ಒಂದು ಹಾಲೆ ಮರದ ಕಂಭ ಸೇರಿಸಿ ಅಂತು 12 ಕಂಭಗಳಿರಬೇಕು, ಇದಕ್ಕೆ ಸರಿಯಾಗಿ 12 ಗುಂಬಗಳಿರಬೇಕು ಮಣ್ಣಿನ ಕುಡಿಕೆಗಳನ್ನು ಕುಂಬಾರರು ತಯಾರಿಸಿ ನಾನಾತರದ ಬಣ್ಣಗಳಿಂದ ಅಲಂಕರಿಸಿ ಪ್ರತಿ ಒಂದು ಕಂಭಗಳ ಬುಡ ದಲ್ಲು ಒಂದೊಂದು ಕುಡಿಕೆ, ಇಡಬೇಕು. ಊರಿನವರು (ಕುಲಸ್ತರು) ಚಪ್ಪರ ಹಾಕಿ ಧಾರೆ ಮಂಟಪದ ಕೆಲಸ ಸಹ ಪೂರೈಸುತ್ತಾರೆ. ಧಾರೆ ಮಂಟಪದ ಮೇಲ್ಗಡೆ ಬ್ರಹ್ಮವಿಷ್ಣು ಮಹೇಶ್ವರರ ಭಾವಚಿತ್ರ (ಫೋಟೋ) ಗಳನ್ನು ಇಟ್ಟು ಪುಷ್ಪ ಮಾಲಿಕೆಗಳಿಂದಲೂ ತಳಿರು ತೋರಣಗಳಿಂದಲೂ ಅಲಂಕರಿಸಬೇಕು. ನಂತರ ಹನ್ನೆರಡು ಕಂಭ, ಗುಂಬಗಳಿಗೂ ಗಂಧಧೂಪ ಮೊದಲಾ ದುವುಗಳ ಪೂಜೆಯನ್ನು ಕೊಟ್ಟು ಎಲ್ಲರೂ ಕುಲದೇವರನ್ನು, ಶಿವನನ್ನು ಧ್ಯಾನಿಸಿ ಪೂಜೆ ಮಾಡುತ್ತಾರೆ. ನಂತರ ಮನೆಯ ನೆಲ್ಲಕ್ಕಿ ಅಡಿಯ ಗೋಡೆಯ ಮೇಲೆ ಹಸೆ ಬರೆ ಯುವಂತೆ ಕುಲಸ್ತರಿಗೆ ಒಕ್ಕಲು ಯಜಮಾನರು ವೀಳ್ಯ ಕೊಡಬೇಕು. ಕುಲಸ್ತರು ಸದ್ರಿ ಗೋಡೆಯ ಮೇಲೆ ಹೆಣ್ಣು ಹಸೆ ಮತ್ತು ಗಂಡು ಹಸೆ ಬರೆಯುತ್ತಾರೆ. ಹೆಂಗಸರು ಶೋಭಾನೆ ಹಾಡುತ್ತಾರೆ. ಇದು ಮುಗಿದಮೇಲೆ ಅಲ್ಲಿ ಸೇರಿದ ಎಲ್ಲಾ ಜನರಿಗೂ ರಾತ್ರಿ ಊಟ ಹಾಕು ತ್ತಾರೆ. ಅದು ಮುಗಿದಮೇಲೆ ಮದುಮಗ ಅಥವಾ ಮದುಮಗಳಿಗೆ ಇವರನ್ನು ಪ್ರಥಮ ಎಣ್ಣೆ ಅರಿಸಿನ ಶಾಸ್ತ್ರಕ್ಕೆ ಕೂರಿಸಬೇಕು. ಹಸೆ ಚಾಪೆ, ಹಸೆಮಣೆಗಳನ್ನು ಅಲ್ಲಿ ತಂದು ಹಾಸುತ್ತಾರೆ. ಸೋದರಮಾವನಿಗೆ ಒಂದು ಚೆಂಬು ನೀರು ಕೊಟ್ಟು ಮದುಮಕ್ಕಳಿಗೆ ಕಾಸ್ತಾಳಿ ಕಟ್ಟು ವಂತೆ ಒಕ್ಕಲು ಯಜಮಾನರ ಹೇಳುತ್ತಾರೆ. ಹಾಗೆಯೇ ಮದುಮಕ್ಕಳು ಬಂದು ಕುಲ ದೇವರಿಗೆ ಅಕ್ಕಿಯನ್ನು ಹಾಕಿ ಅಲ್ಲಿ ತಾಯಿ ತಂದೆಯರ ಪಾದಕ್ಕೆ ನಮಸ್ಕರಿಸಿ ನಂತರ ಎಲ್ಲಾ ಜನರ ಪಾದಗಳಿಗೆ ನಮಸ್ಕರಿಸಿ ನಂತರ ಹಸೆ ಚಾಪೆಯಲ್ಲು ಮದುಮಕ್ಕಳನ್ನು ನಿಲ್ಲಿಸಿಕೊಂಡು ಸೋದರಮಾವನ ಕಾಸ್ತಾಳಿಯನ್ನು ಕೈಯಲ್ಲಿ ಹಿಡಿದುಕೊಂಡು, ಹತ್ತು ಕುಟುಂಬ-ಹದಿನೆಂಟು ಗೋತ್ರ ಕುಲಸ್ತರ ಸಭೆ ಸಮಸ್ತರನ್ನು ಕೇಳಿ ಸೋದರ ಮಾವನು ಮದುಮಕ್ಕಳಿಗೆ ಕಾಸ್ತಾಳಿ ಕಟ್ಟುತ್ತೇನೆಂದು ಕೂಗಿ ಹೇಳಬೇಕು. ಕುಲಸ್ತರು ಒಳ್ಳೆ ಕಾರ್ಯವೆಂದು ಹೇಳುತ್ತಾರೆ. ಹೀಗೆ ಮೂರು ಭಾರಿ ಹೇಳಿ ಸೋದರ ಮಾವನು ಕಾಸ್ತಾಳಿ ಕಟ್ಟುತ್ತಾನೆ. ನಂತರ ಅವರನ್ನು ಹಸೆ ಮಣೆಗಳ ಮೇಲೆ ಕೂರಿಸುತ್ತಾರೆ. ಅಷ್ಟರಲ್ಲೇ ಒಂದು ಮುಕ್ಕಾಲಿನಮೇಲೆ ಒಂದು ಬಟ್ಟಲಲ್ಲಿ ಎಣ್ಣೆ ಅರಿಸಿನ ಮಿಶ್ರ ಮಾಡಿ ಗರಿಕೆ ಹುಲ್ಲು ತಂದು ಇಟ್ಟಿರುತ್ತಾರೆ. ಮುತ್ತೈದೆಯರು ಶಾಸ್ತ್ರ ಮಾಡಲಿಕ್ಕೆ ಶುರು ಮಾಡು ತ್ತಾರೆ. ಹೆಂಗಸರು ಶೋಭಾನೆ ಹಾಡುತ್ತಾರೆ. ಇದು ಮುಗಿದ ಮೇಲೆ ಮದುಮಕ್ಕಳನ್ನು ಸ್ನಾನ ಮಾಡಿಸು ತ್ತಾರೆ. ನಂತರ ಹೊಸ ಉಡುಪುಗಳನ್ನು ಧರಿಸಿ ಕಹಳೆ ವಾದ್ಯಗಳಿಂದ ಮನೆಗೆ ಕರೆತರುತ್ತಾರೆ. ಚಪ್ಪರದ ಅಡಿ ಯಲ್ಲು ಅವರಿಗೆ ಆರತಿ ಬೆಳಗಿ ಮನೆಗೆ ಬಂದು. ಹಸೆ ಚಾಪೆಯ ಮೇಲೆ ಕೂರಿಸಿ ಮದುರಂಗಿ ಎರಡು ಕೈಗಳಿಗೂ ಇಟ್ಟು ನಿದ್ರೆ ಮಾಡುವಂತೆ ಹೇಳುತ್ತಾರೆ.

## ಮುಹೂರ್ತ

ಚಪ್ಪರದ ಮಾರನೆ ದಿವಸ ಮುಹೂರ್ತ. ಅಂದಿನ ದಿವಸ ಮುತ್ತೈದೆಯರು ಚಪ್ಪರದ ಧಾರೆಮಂಟಪಮೊಳಗೆ

ಅಕ್ಕಿ ಹಸೆಯನ್ನು ಬರೆದು ಹಸೆಮಣೆಗಳನ್ನು ತಂದಿರಿಸುವರು. ಮುಕ್ಕಾಲಿಯ ಮೇಲೆ ಒಂದು ಬಟ್ಟಲಲ್ಲಿ ಅಕ್ಕಿ ಒಂದು ದೀಪವನ್ನಿಡುವರು. ಇನ್ನೊಂದು ಬಟ್ಟಲಲ್ಲಿ ಎಣ್ಣೆ, ಅರಶಿನ ಸ್ವಲ್ಪ ಗರಿಕೆ ಹುಲ್ಲುಗಳನ್ನು ತಂದಿಡುವರು. ಇದರ ಹಿಂದಿನ ದಿವಸ ಅಗಸನು ಮಡಿ ಬಟ್ಟೆಗಳಿಂದ ಮೇಲ್ ಕಟ್ಟುಗಳನ್ನು ಕಟ್ಟಿರುವನು. ಮದುಮಕ್ಕಳನ್ನು ಕರೆತಂದು ಚಪ್ಪರದ ಧಾರೆ ಮಂಟಪದಲ್ಲಿ ಎಣ್ಣೆ ಅರಸಿನ ಶಾಸ್ತ್ರ ಮಾಡುತ್ತಾರೆ. ಕಹಳೆ ವಾದ್ಯಗಳಿರುತ್ತವೆ. ಆ ಸಮಯದಲ್ಲು ಊರಿನ ಜನರು, ನೆಂಟರು, ಸ್ನೇಹಿತರು ಬಂದು ನೆರೆದಿರುತ್ತಾರೆ. ಹೆಂಗಸರು ಶೋಭಾನೆ ಹೇಳುತ್ತಿರುತ್ತಾರೆ. ಆ ಶಾಸ್ತ್ರ ಮುಗಿದ ಮೇಲೆ ಮದುಮಗನಿಗೆ ಕ್ಷೌರಿಕನು ಕ್ಷೌರ ಮಾಡುತ್ತಾನೆ. ನಂತರ ಸ್ನಾನಕ್ಕೆ ಹೋಗುತ್ತಾರೆ. ಸ್ನಾನ ಮುಗಿಸಿ ಮದುಮಕ್ಕಳಿಗೆ ಕುಲ ಪದ್ಧತಿಯ ಉಡುಪುಗಳನ್ನು ತೊಡಿಸುತ್ತಾರೆ. ಎಂದರೆ ಮದುಮಗನಿಗೆ ಉದ್ದವಾದ ನಿಲುವಂಗಿ, ಧೋತ್ರ, ರುಮಾಲೆ ಹಣೆಗೆ ಚಿನ್ನದ ಪಟ್ಟಿ. ಅದರಲ್ಲು 'ಓಂ' ಎಂಬ ಬೀಜ ಅಕ್ಷರವನ್ನು ಬರೆದಿರುತ್ತಾರೆ. 'ಬಾಸಿಂಗ' ಎಂದರೆ ನಾಯಿ ಕಬ್ಬಿನ ಬೆಂಡಿನಿಂದ ತಯಾರಿಸಿದ ಗೊಂಡೆಗಳ 'ಹೂ'ಗಳು ಅವುಗಳನ್ನು ತಲೆಯ ಮೇಲಿನ ರುಮಾಲಿನಿಂದ ಕೆಳಗೆ ತೂಗಾಡುವಂತೆ ಧರಿಸುತ್ತಾರೆ. ಕೈಗೆ ಅದೇ ಬೆಂಡಿನಿಂದ ತಯಾರಿಸಿ ಗಿಳಿ ಪಕ್ಷಿ ಇರುತ್ತದೆ. ಮದುಮಗಳಿಗೆ ಚಿನ್ನಾಭರಣಗಳು ತುಂಬಾ ಹಾಕಿ ಹೆಚ್ಚು ಜೀಲಿ ಬಾಳುವ ಸೀರೆ ಮತ್ತು ತುಂಡು ಕೈರವಕೆ, ತೊಡಿಸುತ್ತಾರೆ. ಬಾಸಿಂಗ ಹಣೆ ಮೇಲೆ ನಿಲ್ಲುವಂತೆ ಮಾಡುತ್ತಾರೆ. ಬಟ್ಟೆ ಬರೆ ಇವುಗಳನ್ನು ಧರಿಸಿದ ನಂತರ ಫಲವೃಕ್ಷದಡಿಗೆ ಬಂದು ಗಂಗೆಪೂಜೆಯನ್ನು ಮಾಡುತ್ತಾರೆ. ನಂತರ ವಾದ್ಯದೊಡನೆ ಚಪ್ಪರದಡಿಗೆ ಬರುತ್ತಾರೆ. ಅಲ್ಲಿ ಮುತ್ತೈದೆಯರು ಏಳು ಆರತಿಗಳನ್ನು ಬೆಳಗುತ್ತಾರೆ. ನಂತರ ಸಣ್ಣ ಬಾಲಕಿಯರು ಅವರ ಪಾದಗಳನ್ನು ತೊಳೆಯುತ್ತಾರೆ. ಆಗ ಮತ್ತೊಬ್ಬರು ಒಂದು ತೆಂಗಿನಕಾಯಿಯನ್ನು ತಲೆ ಸುತ್ತು ತಂದು ಒಡೆಯುತ್ತಾರೆ. ಇದಕ್ಕೆ ದೃಷ್ಟಿಕಾಯಿ ಒಡೆಯುವುದೆಂದು ಹೇಳುತ್ತಾರೆ. ನಂತರ ಅಗಸರವನು ಮಡಿಬಟ್ಟೆ ಹಾಸುತ್ತಾರೆ. ಮದುಮಕ್ಕಳು ಆ ಮಡಿಯನ್ನು ತುಳಿದುಕೊಂಡು ಗೃಹಪ್ರವೇಶ ಮಾಡುತ್ತಾರೆ. ನಂತರ ಹಸೆ ಚಾಪೆಯಿಂದ ಪೂರ್ವಕ್ಕೆ ಮುಖ ಹಾಕಿ ನಿಲ್ಲಬೇಕು. ಒಕ್ಕಲು ಯಜಮಾನನು ಕೈಯಲ್ಲಿ ಒಂದು ಚೆಂಬಿನಲ್ಲಿ ನೀರು ಹಿಡಿದುಕೊಂಡು ಅಲ್ಲಿ ಸೇರಿದ ಜನರಿಗೆಲ್ಲಾ 'ಕುಲದೇವರಿಗೆ ಹರಿಕೆ ಹಣ ಕಟ್ಟುತ್ತೇವೆ' ಎಂದು ಎಲ್ಲರನ್ನು ಕರೆಯುತ್ತಾನೆ. ನಂತರ "ಹತ್ತು ಕುಟುಂಬ ಹದಿನೆಂಟು ಗೋತ್ರ ಕುಲಸ್ತರ ಸಭೆ ಸಮಸ್ತರನ್ನು ಕೇಳಿ ಕುಲದೇವರಿಗೆ ಹರಿಕೆ ಹಣ ಕಟ್ಟುತ್ತೇವೆ" ಎಂದು ಮೂರಾವರ್ತಿ ಕೂಗಿ ಹೇಳಬೇಕು. ಯಜಮಾನನು ಎರಡು ವಾಟೆ ಗುತ್ತಿಗಳನ್ನು ತಯಾರಿಸಿ ಇಟ್ಟುಕೊಂಡಿರುತ್ತಾನೆ. ಮದುಮಕ್ಕಳ ಕೈಯಲ್ಲಿ ಎರಡು ಆಣೆ ಪಾವಲಿ (ಬೆಳ್ಳಿಯ) ನಾಲ್ಕು ಒಳ್ಳೆ ಮೆಣಸುಗಳನ್ನು ಇಟ್ಟು ಆ ಗುತ್ತಿಯೊಳಗೆ ತುಂಬಿಸಿ ಮಾವಿನ ಎಲೆಯ ದಿಮ್ಮು (ಗಟಕು) ಗಳಿಂದ ಒಂದು ಸಣ್ಣ ಕೋಲಿನಿಂದ ಜಡಿದು ಬಂದು ಮಾಡುತ್ತಾರೆ. ನಂತರ ಅದನ್ನು ಮುಡಿಪಿನ ಸಮೀಪದಲ್ಲಿ ಕಟ್ಟಿಟ್ಟು ಹರಿಸೇವೆ ಮಾಡುವಾಗ ಮುಡಿಪಿನೊಳಗೆ ತುಂಬುತ್ತಾರೆ. ನಂತರ ಕರೆದುಕೊಂಡು ಬಂದು ಹಣ ಕಟ್ಟುವ ಮುಹೂರ್ತಕ್ಕೆ ಚಪ್ಪರದಡಿಯಲ್ಲಿ ಕೂರಿಸುತ್ತಾರೆ. ನಂತರ ಸೇರಿದ ಜನರು ಮದುಮಕ್ಕಳ ತಲೆಗೆ ಅಕ್ಕಿ ಹಾಕಿ, ಆಶೀರ್ವದಿಸಿ ಕೈಗೆ ಹಣ ಕೊಡುತ್ತಾರೆ. ನಂತರ ಕೂಡಿದ ಜನರೆಲ್ಲರಿಗೂ ಊಟ ಹಾಕುತ್ತಾರೆ.

## ದಿಬಣ, ಧಾರೆ ಮುಹೂರ್ತ

ಅದೇ ದಿನಸ ಸಾಯಂಕಾಲಕ್ಕೆ ಬಣ್ಣ ಬಂಗಾರವನ್ನು ಸಿದ್ಧಪಡಿಸಿಕೊಂಡು, ಚೀಲದಲ್ಲಿ ವೀಳ್ಯದೆಲೆ, ಹಣ್ಣು ಅಡಿಕೆ ಒಂದು ಹರಿವಾಣ ಸೇರಿಸಿ ಕಟ್ಟು ಮಾಡುತ್ತಾರೆ. 'ಹಿಂಗಾರು' (ಇದು ಅಡಿಕೆ ಮರದ 'ಹೂವು') ಹೀಗೆ ಕಳಶ ಕನ್ನಡಿ ಹುಪ್ಪಿನೇಳಗೆ (ಇದು ಒಂದು ಚಿಕ್ಕ ಪೆಟ್ಟಿಗೆ ಚಿತ್ತ ಯಾ ವಾಟೆಯಿಂದ ತಯಾರಿಸುತ್ತಾರೆ) ಇದರೊಳಗೆ ಒಂಭತ್ತು ತೆಂಗಿನಕಾಯಿ, ಒಂದು ಸೇರು ಅಕ್ಕಿ, ಒಂಭತ್ತು ಬಾಳೆಹಣ್ಣು, ಇದಕ್ಕೆ ಮಡಿಲು ಅಕ್ಕಿ ತುಂಬಿಸುವುದು ಎಂದು ಹೇಳುತ್ತಾರೆ. (ಮದುಮಕ್ಕಳು ಚಪ್ಪರಕ್ಕೆ ಎರಡು ದಿವಸಕ್ಕೆ ಮುಂಚೆಯೇ ಮದ್ಯ ಮಾಂಸಗಳನ್ನು ಸೇವಿಸಬಾರದು) ಹಾಗೂ ಮದುಮಗನ ದಿಬ್ಬಣ ಮದುಮಗಳ ಮನೆಗೆ ತಲುಪುತ್ತದೆ. ಹೆಂಗಸರು ಶೋಬಾನೆ ಹೇಳುತ್ತಿರುತ್ತಾರೆ. ಹೆಣ್ಣಿನ ಮನೆಯವರ ಮನೆಯ

ಹೊರ ಪಾರ್ಶ್ವದಲ್ಲಿ ದಿಬ್ಬಣದವರಿಗೆ ಸ್ಥಳ ಒದಗಿಸಿ ಕೊಡುತ್ತಾರೆ. ನಂತರ ಮನೆಯವರು ನೀರು ಚಾಪೆಗಳನ್ನು ತೆಗೆದುಕೊಂಡು ಹೆಣ್ಣಿನ ಪರಿವಾರದೊಂದಿಗೆ ದಿಬ್ಬಣ ಮಾತಾಡಿಸಲಿಕ್ಕೆ ಹೋಗುತ್ತಾರೆ. ಮದುಮಗಳ ತಾಯಿಯು ಹಾಲು ತುಪ್ಪ ತೆಗೆದುಕೊಂಡು ಹೋಗಿ ಮದುಮಗನಿಗೆ ಕೊಡುತ್ತಾಳೆ. ಮತ್ತು ಇದಕ್ಕೆ ಮದು ಮಗನಿಗೆ ನೆರವು ತೆಗೆದುಕೊಂಡು ಹೋಗುವುದೆಂದು ಹೆಸರು. ಹಾಗೂ ದಿಬ್ಬಣ ಮಾತಾಡಿಸಿ ಬಂದನಂತರ ಬಣ್ಣ ಬಂಗಾರ ತರುವಂತೆ ಹೆಣ್ಣಿನ ಕಡೆಯಿಂದ ದಿಬ್ಬಣದ ಮುಖ್ಯಸ್ಥರಿಗೆ ತಿಳಿಸುತ್ತಾರೆ. ಆಗ ಅವರು ಬಣ್ಣ ಬಂಗಾರು ತುಂಬಿದ ಪೆಟ್ಟಿಗೆ ಹುವ್ವಿನೇಳಿಗೆ, ಕಂಚಿಮಿ (ಕಲಶಕನ್ನಡಿ) ಸಮೇತ ಚಪ್ಪರದಡಿಗೆ ಬರುತ್ತಾರೆ. ಅಲ್ಲಿ ನಿಂತುಕೊಂಡು ಇಂಥ ನಾಡು, ಇಂಥ ಗ್ರಾಮದ ಇಂತಹವರ ಮನೆಗೆ ಬಂದ ದಿಬ್ಬಣದ ಮುಖ್ಯಸ್ಥರು ಬಣ್ಣ ಬಂಗಾರ ತಂದಿದ್ದೇವೆ ಎಂದು ಮೂರು ಸಾರಿ ಕೂಗಿ ಹೇಳಬೇಕು. ಇದ ನಂತರ ಅವರು ಚಪ್ಪರದ ಮೇಲ್ಕಟ್ಟು ಅಡಿಗೆ ಬರಲಿಕ್ಕೆ ಅನುಮತಿ ಕೇಳುತ್ತಾರೆ. ಅನುಮತಿ ಕೊಡುತ್ತಾರೆ. ಪುನಃ ಅಲ್ಲಿಂದ ದೇವಸಭೆಗೆ ಅನುಮತಿ ಕೇಳುತ್ತಾರೆ, ಅನುಉಂಟು. ಪುನಹ ಬಣ್ಣ ಬಂಗಾರು ಇಟ್ಟು ಕೂತುಕೊಳ್ಳಲಿಕ್ಕೆ ಅನುಮತಿ ಕೇಳುತ್ತಾರೆ. ಅನುಉಂಟು (ದೇವಸಭೆಗೆ ನಮಸ್ಕಾರ ಮಾಡ್ಬೇಕು) ಎನ್ನುತ್ತಾರೆ. ಬಣ್ಣ ಬಂಗಾರ ಬಳಸಲಿಕ್ಕೆ ಅನು ಕೇಳುತ್ತಾರೆ. ಅನುಮತಿ ಉಂಟು. ಮೊದಲಿಗೆ ಒಂದು ಕಂಚಿನ ಬಟ್ಟಲಲ್ಲಿ ಬಣ್ಣ ಬಂಗಾರ ಇಡುತ್ತಾರೆ. ಶುರುವಿನಲ್ಲಿ ಮೂಗುತಿ, ಮುತ್ತೈದೆತನ, ವಾಲೆ—ವಾಲೆ ಭಾಗ್ಯ ಎಂದು ಹೇಳಿ ಬಟ್ಟಲಲ್ಲಿ ಇಡಬೇಕು. ಎರಡನೆಯದಾಗಿ ಎಲ್ಲಾ ತರದ ಆಭರಣಗಳನ್ನಿಟ್ಟು ಅದರ ಮೇಲೆ ಧಾರೆ ಸೀರೆ ತುಂಡು ಕೈರವಕೆ ಅದರ ಮೇಲೆ ಹಿಂಗಾರು ಹೂವು ನಂತರ ಡಾಬು ಇವುಗಳನ್ನೆಲ್ಲಾ ಅಜಮಾಯಿಸಿ "ಸರಿಯಾಗಿ ಇದೆಯೋ ?" ಎಂದು ಒಕ್ಕಲು ಯಜಮಾನರನ್ನು ಕೇಳುತ್ತಾರೆ. ಸರಿ ಎಂದು ಒಪ್ಪಿ ಕೊಂಡರೆ ಅಲ್ಲಿಗೆ ಮುಗಿಯಿತು. ಇಲ್ಲವಾದರೆ ಚರ್ಚೆ ಶುರುವಾಗುತ್ತೆ. ನಂತರ ಹೆಣ್ಣಿನ ಕಡೆಯಿಂದ ಒಬ್ಬಳು ಹೆಂಗಸು ದಿಬ್ಬಣದವರ ಕಡೆಯಿಂದ ಒಬ್ಬಳು ಹೆಂಗಸು ಎದುರು ಬದುರಾಗಿ ನಿಂತುಕೊಂಡು ಮೂರು ಮೂರು ಸರ್ತಿ ಹಿಂದಕ್ಕೂ ಮುಂದಕ್ಕೂ ನಮಸ್ಕರಿಸಿ ದಿಬ್ಬಣದ ಹೆಂಗಸರು ಸೋಬಾನೆ ಹಾಡುತ್ತಾ ಕಂಚಿಮಿ, ಹುವ್ವಿನೇಳಿಗೆ ಇವು ಸಮೇತ ಹಸೆ ಚಾಪೆಗೆ ಹೋಗುವರು. ಅಲ್ಲಿ ತಮಾಷೆಗಾಗಿ ಮದುಮಗಳ ಸಂಗಡ ಎಂಟುಹತ್ತು ಹುಡುಗಿಯರು ಕೂತುಕೊಂಡು ಉದ್ದಕ್ಕೂ ಚಾಪೆ ಮುಚ್ಚಿಕೊಂಡು ಕೂತಿರುತ್ತಾರೆ. ಅವರ ಪೈಕಿ ಇಂಥವಳೇ ಮದುಮಗಳೆಂದು ದಿಬ್ಬಣದ ಹೆಂಗಸರು ಗುರ್ತು ಹಿಡಿದು ಅವಳನ್ನು ಏಳಿಸಿ ಬಣ್ಣ ಬಂಗಾರ ತೊಡಿಸುತ್ತಾರೆ. ನಂತರ ಹುವ್ವಿನೇಳಿಗೆಯಲ್ಲಿದ್ದ ಮಡಿಲಕ್ಕಿ ಎಂದರೆ ಸ್ವಲ್ಪ ಅಕ್ಕಿ, ಒಂದು ತೆಂಗಿನಕಾಯಿ, ಬಾಳೆಹಣ್ಣು ಮದುವೆ ಹುಡುಗಿಗೆ ಮಡಲು ತುಂಬಿ ಉಳಿದ ಎಂಟು ಮಡಿಲುಗಳನ್ನು ಆ ಹುಡುಗಿಯ ಸಮ್ಮಂಧಿಕರಿಗೂ, ನೆರೆಮನೆಯ ಒಬ್ಬ ಹೆಂಗಸಿಗೂ ತುಂಬುತ್ತಾರೆ.

ತೆರೆ :—ಚಪ್ಪರದ ಧಾರೆ ಮಂಟಪದಡಿಯಲ್ಲಿ ಕುಳಿತ ದಿಬ್ಬಣದ ಮುಖ್ಯಸ್ಥರು ರೂಪಾಯಿ 6-2-ನ್ನು ಒಂದು ಕಂಚಿನ ಬಟ್ಟಲಲ್ಲಿಟ್ಟು ಒಕ್ಕಲು ಯಜಮಾನನಿಗೆ "ಕಂಚು ಎತ್ತಿಕೊಡುತ್ತೇವೆ"ಂದು ಹೇಳಿಕೊಡುತ್ತಾರೆ. ಈ ಆರು ರೂಪಾಯಿ ಎರಡು ಆಣೆಯ ತೆರದ ವಿವರ ಹೀಗಿದೆ : ರೂ $4\frac{1}{2}$ ಹುಡುಗಿಯ ಮುತ್ತೈದೆತನಕ್ಕೆ ಕಟ್ಟುವ ಹಣ; ಎಂಟು ಆಣೆ ಎಲೆ ಅಡಿಕೆ ಖರ್ಚು. ಎಂದರೆ ಹಿಂದಿನ ಕಾಲದಲ್ಲಿ ಕಾಗದ ಬರೆಯುವ ಪದ್ಧತಿ ಇಲ್ಲದ ಕಾರಣ ಪ್ರತಿ ಒಬ್ಬ ನೆಂಟನಿಗೂ ಸ್ನೇಹಿತರಿಗೂ ಮತ್ತು ನೆರೆಮನೆಯವರಿಗೂ ವೀಳ್ಯ ಕೊಟ್ಟು ಮದುವೆ ಹೇಳುತ್ತಿದ್ದರು. ಎಂಟು ಆಣೆ ಸ್ಥಳ ಮರ್ಯಾದೆ. ನಾಲ್ಕು ಆಣೆ ಗೌಡ ಆರತಿ, ನಾಲ್ಕು ಆಣೆ ತಾಯಿ ಆರತಿ, ಎರಡು ಆಣೆ ಬೀಡು ಆರತಿ, ಜುಮ್ಲ ರೂ. 6–2–0.

ನಂತರ ಮೂರು ವೀಳ್ಯಗಳನ್ನು ಈ ಹಿಂದೆ ಹೇಳಿದ ರೀತಿಯಲ್ಲಿ ಎತ್ತಿಕೊಡುತ್ತಾರೆ – ತಂದೆ ಗೋತ್ರ, ತಾಯಿ ಗೋತ್ರ. ಮಹಾನಾಡು ವೀಳ್ಯ ನಂತರ ಪುರೋಹಿತರು ವೇದ ಶಾಸ್ತ್ರಗಳನ್ನು ಹೇಳುತ್ತಾ ಕೊಂಬಿನ ಗಿಂಡಿಯಲ್ಲಿ ನೀರು ತುಂಬಿಸಿ ಅದರಲ್ಲು ಮಾವಿನ ಎಲೆಗಳು ಅದರ ಮೇಲೆ ತೆಂಗಿನಕಾಯಿಯಿಟ್ಟು ಮಂತ್ರಗಳನ್ನು ಉಚ್ಚರಿಸುತ್ತಾ ವಧುವಿನ ತಂದೆ–ಕೈಗೆ ಕೊಡುತ್ತಾನೆ. ನಂತರ ದಿಬ್ಬಣದವರು ವರನನ್ನು ಕರೆತಂದು ಧಾರೆ ಮಂಟಪದಲ್ಲು

ನಿಲ್ಲಿಸಿ ಸ್ತ್ರೀಯರು ಹನ್ನೊಂದು ಆರತಿಗಳನ್ನು ಬೆಳಗುತ್ತಾರೆ. ಅಕ್ಕಿಗಳ್ಲಿ ಎರಡು ಆರತಿ: ಗೌಡ ಆರತಿ. ತಾಯಿ ಆರತಿಗಳನ್ನು ಬಾಲಕಿಯರು ಮನೆ ಮುಂದುಗಡೆ ಹಿಡಿದು ನಿಂತುಕೊಳ್ಳುತ್ತಾರೆ. ನಂತರ ಚಿಕ್ಕಬಾಲಕಿ ಒಬ್ಬಳು ಒಂದು ತಂಬಿಗೆ ನೀರು ತಂದು ಮದುಮಗನ ಕಾಲು ತೊಳೆಯುತ್ತಾಳೆ ಆ ತಂಬಿಗೆಗೆ ಒಂದು ಹಣ (ಮೂರಾಣೆ) ಹಾಕಿ ಕಳುಹಿಸುತ್ತಾರೆ. ಎರಡು ಕಡೆಯಿಂದಲೂ ವಾದ್ಯವಾಗುತ್ತಿರುತ್ತದೆ. ಮದುಮಗಳ ಸೋದರಮಾವನು ಮದುಮಗಳಿಗೆ ಹಣ ಕೊಟ್ಟು ಧಾರೆಗೆ ಎತ್ತಿಕೊಂಡು ಬರುತ್ತಾನೆ. ಆಮೇಲೆ ವಧೂವರರನ್ನು ಎದುರು ಬದಿರಾಗಿ ನಿಲ್ಲಿಸಿ ವರನ ಕೈಯನ್ನು ವಧುವಿನ ಕೈ ಅಡಿಗೆ ಮಾಡಿ ತಂದೆಯು ಗಿಂಡಿಯಲ್ಲಿದ್ದ ನೀರನ್ನು ವಧುವಿನ ಕೈಗೆ ಬಿಡುತ್ತಾನೆ. ಪುರೋಹಿತರು ಶಾಸ್ತ್ರಗಳನ್ನು ಹೇಳುತ್ತಾ "ಕಲ್ಯಾಣ ಮಸ್ತುಂ ಶುಭಮಸ್ತುಂ" ಅನ್ನುತ್ತಾರೆ. ನಂತರ ಸಭಿಕರು "ಹತ್ತು ಕುಟುಂಬ ಹದಿನೆಂಟು ಗೋತ್ರ ಕುಲಸ್ತರ ಸಭೆ ಸಮಸ್ತರ ಸಂಗಡ ಕೇಳಿ ಇಂಥ ಗೋತ್ರದ ಗಂಡಿಗೂ ಇಂಥ ಗೋತ್ರದ ಹೆಣ್ಣಿಗೂ ಕನ್ಯೆಕೈದಾರೆ ಎರೆಯುತ್ತೇವೆ" ಎಂದು ಮೂರಾವರ್ತಿ ಹೇಳಿ ವಧೂವರರ ಕೈಗಳನ್ನು ಮೂರಾವರ್ತಿ ಕೆಳಗೂ, ಮೇಲೂ ಮಾಡಿ ಧಾರೆ ಎರೆಯುತ್ತಾರೆ. ನಂತರ ವರನು ತನ್ನ ಕೈಯಿಂದ ಮಾಂಗಲ್ಯವನ್ನು ವಧುವಿನ ಕುತ್ತಿಗೆಗೆ ಕಟ್ಟುತ್ತಾನೆ. ಆ ಸಮಯದಲ್ಲಿ ಮೇಲೆ ಹೇಳಿದ ರೀತಿ ಹತ್ತು ಕುಟುಂಬ ಎಂಬ ವಾಕ್ಯಗಳನ್ನು ಮೂರಾವರ್ತಿ ಹೇಳಬೇಕು. ನಂತರ ಅಗಸನು ಮಡಿ ಬಟ್ಟೆಗಳನ್ನು ಧಾರೆ ಮಂಟಪದ ಸುತ್ತು ಮನೆ. ಕೈಸಾಲೆವರೆಗೂ ಹಾಸಬೇಕು. ಆಮೇಲೆ ವರನು ವಧುವಿನ ಕೈ ಹಿಡಿದುಕೊಂಡು ಧಾರೆ ಮಂಟಪಕ್ಕೆ ಮೂರಾವರ್ತಿ ಪ್ರದಕ್ಷಿಣೆ ಬಂದು ವಧುವಿನ ಗೃಹಪ್ರವೇಶ ಮಾಡಿ ಅಲ್ಲಿಯ ಹಸೆ ಚಾಪೆಯ ಮೇಲೆ ಕೂರುತ್ತಾನೆ. ಹೆಂಗಸರು ಸೋಬಾನೆ ಹೇಳುತ್ತಾ ಒಂದು ಬಟ್ಟಲಲ್ಲಿ ಹಾಲು ಅದ್ದುತ್ತಾ ಮಂಗಳಾರತಿ ಎತ್ತುತ್ತಾರೆ. ನಂತರ ಎಲ್ಲರಿಗೂ ಊಟ ಹಾಕುತ್ತಾರೆ.

ಎಲ್ಲವೂ ಮುಗಿದ ಮೇಲೆ ದಿಬ್ಬಣ ವಾಪಾಸು ವರನ ಮನೆಗೆ ವಧು ಸಮೇತ ಹೊರಡುತ್ತದೆ. ವಧುವಿನ ಮನೆಯ ಚಪ್ಪರದಡಿಯಲ್ಲಿ ನಿಂತು ನಾಗವಳಿ ಶಾಸ್ತ್ರಕ್ಕೆ ಮಾರನೆ ದಿವಸ ಬರಬೇಕೆಂದು ವಧುವಿನ ಸಂಬಧಿಕರಿಗೆಲ್ಲರಿಗೂ ವಧೂವರರಿಬ್ಬರು ವೀಳ್ಯ ಕೊಡುತ್ತಾರೆ. ನಂತರ ದಿಬ್ಬಣದ ಮುಖ್ಯಸ್ಥರಿಗೆ ಹೆಣ್ಣು ಗಂಡು ವಹಿಸಿ ಕೊಡುತ್ತಾರೆ.

## ನಾಗೋಳಿ ಶಾಸ್ತ್ರ

ಇದನ್ನು ಹೆಣ್ಣು ಕರೆದುಕೊಂಡು ಹೋದ ಮಾರನೆ ದಿವಸವೇ ನೆರವೇರಿಸುತ್ತಾರೆ. ವಧುವಿನ ಮನೆ ಸಂಸಾರಸ್ತರು ಬಂಧು ಬಳಗದವರು ಮಾರನೆ ದಿವಸ ಬೆಳಿಗ್ಗೆ 10 ಗಂಟೆಗೆ ವರನ ಮನೆಗೆ ತಲಪುತ್ತಾರೆ. ಚಪ್ಪರದ ಅಡಿಯಲ್ಲಿ ಒಂದು ಬೋಗುಣಿಯಲ್ಲಿ ಅರಸಿನ ಮಿಶ್ರ ಮಾಡಿದ ನೀರನ್ನು ತುಂಬಿಸಿ ಅದರೊಳಗೆ ಒಂದು ಚಿನ್ನದ ಉಂಗುರ ಹಾಕಿರುತ್ತಾರೆ. ಗಂಡು ಹೆಣ್ಣು ಇಬ್ಬರು ಅದರೊಳಗೆ ಕೈಗಳನ್ನು ಹಾಕಿ ಹುಡುಕುತ್ತಾರೆ. ಆ ಉಂಗುರ ಸಿಕ್ಕಿದವರ ಪಾಲಿಗಾಯಿತು. ನಂತರ ಎರಡು ದೊಡ್ಡ ಪಾತ್ರೆಗಳಲ್ಲಿ ಅರಸಿನ ನೀರು ತುಂಬಿಸಿ ಇಟ್ಟಿರುತ್ತಾರೆ. ಗಂಡು ಹೆಣ್ಣು ಎದುರು ಬದಿರಾಗಿ ಸಾಧಾರಣ ಹತ್ತು ಅಡಿ ದೂರದಲ್ಲಿ ಕುಳಿತುಕೊಂಡು ಇಕ್ಕಡೆಯವರು ಆ ನೀರನ್ನು ಗಂಡು ಹೆಣ್ಣಿನ ಮೇಲೆ, ಹೆಣ್ಣು ಗಂಡಿನ ಮೈ ಮೇಲೂ ಎರಚಿಕೊಳ್ಳುತ್ತಾರೆ. ಆಮೇಲೆ ನಾನು ಈ ಹಿಂದೆ ಹೇಳಿದ ರೀತಿಯಲ್ಲಿ ಹನ್ನೆರಡು ಚಪ್ಪರದ ಕಂಭಗಳ ಜೊತೆಗೆ ಒಂದು ಹಾಲೆ ಮರದ ಕಂಭ ಇರುತ್ತದೆ. ಮತ್ತು ಅದರ ಅಡಿ ಭಾಗದಲ್ಲಿ ಒಂದು ಚಿಕ್ಕ ಬುಟ್ಟಿಯಲ್ಲಿ ಗೊಬ್ಬರ ತುಂಬಿಸಿ ಇಟ್ಟಿರುತ್ತಾರೆ. ವರನು ಆ ಕಂಭವನ್ನು ಹೆಗಲ ಮೇಲೆ ಹೊತ್ತುಕೊಳ್ಳುತ್ತಾನೆ. ವಧು ಆ ಗೊಬ್ಬರದ ಬುಟ್ಟಿಯನ್ನು ಹೊತ್ತುಕೊಂಡು ಹೋಗಿ ಅವರ ಮನೆ ಹಿತ್ತಲಲ್ಲಿ ನೆಡುತ್ತಾನೆ. ವಧು ಅದಕ್ಕೆ ಈ ಗೊಬ್ಬರ ಹಾಕುತ್ತಾಳೆ. ನಂತರ ಸ್ನಾನ ಮುಗಿಸಿಕೊಂಡು ಹೊಸ ಉಡುಪುಗಳನ್ನು ಧರಿಸಿಕೊಂಡು ಗೃಹ ಪ್ರವೇಶ ಮಾಡುತ್ತಾರೆ. ಅಲ್ಲಿಯೇ ಮನೆ ಎದುರುಗಡೆ ಬಾಗಿಲಲ್ಲಿ ವರನ ಅಕ್ಕ ತಂಗಿಯರು ಬಾಗಿಲು ತಡೆಯುತ್ತಾರೆ. ಹೆಂಗಸರು ಸೋಬಾನೆ ಹಾಡುತ್ತಾರೆ. ದಂಪತಿಗಳು ಒಪ್ಪುತ್ತಾರೆ. ನಂತರ ಬಾಗಿಲು ಬಿಡುತ್ತಾರೆ. ಸಿಹಿ ಪದಾರ್ಥಗಳನ್ನು ಊಟಕ್ಕೆ ಕೂಡಿಸಿರುತ್ತಾರೆ. ಮೊದಲು ಹನ್ನೆರಡು ತುದಿ ಬಾಳ ಎಲೆಗಳನ್ನು ಹನ್ನೆರಡು ಕಂಭಗಳಿರುವ ಕಂಭಗಳ

ಬುಡದಲ್ಲಿ ಹಾಕಿರುತ್ತಾರೆ. ವಧು ಆ ಕಂಭದ ಬುಡದಲ್ಲಿ ಹಾಕಿರುವ ಎಲೆಗಳಿಗೆ ಪಾಯಸ, ತುಪ್ಪ, ಹಪ್ಪಳ, ಸಂಡಿಗೆ ಮೊದಲಾದ ಪದಾರ್ಥಗಳನ್ನು ಬಡಿಸುತ್ತಾಳೆ. ವರನು ಅವು ಗಳಿಗೆಲ್ಲಾ ಗಂಧ, ಧೂಪಗಳಿಂದ ಹೊಗೆ ಹಾಕುತ್ತಾನೆ. ಎಲ್ಲರೂ ಸೇರಿ ಪರಮಾತ್ಮನಾದ ಶಿವನನ್ನು ಧ್ಯಾನಿಸುತ್ತಾರೆ. ನಂತರ ಎಲ್ಲರೂ ಊಟಕ್ಕೆ ಕೂರುತ್ತಾರೆ. ವಧುವು ಬಡಿಸು ತ್ತಾಳೆ. ನಂತರ ತನ್ನ ಪತಿಯಲ್ಲಿ ಸಟ್ಟುಗದ ಹಣ ಕೇಳು ತ್ತಾಳೆ. ವರನು ಸಟ್ಟುಗದ ಮೇಲೆ ಹಣ ಇರಿಸುತ್ತಾನೆ. ಊಟ ಮುಗಿದ ಮೇಲೆ ನಾಗೋಳಿ ಶಾಸ್ತ್ರ ಮುಗಿಯಿತು.

### ತುಪ್ಪದ ಕಟ್ಲೆಯ ಪದ್ಧತಿ

ಇದನ್ನು ಮನೆಯಿಂದ ಹೆಣ್ಣು ಇಳಿದ ಐದನೆ ಅಥವಾ ಆರನೇ ದಿವಸಗಳಲ್ಲಿ ಗಂಡಿನ ಮನೆಯಿಂದ ಹೆಣ್ಣಿನ ಮನೆಗೆ ಬರುವಾಗ ಗಂಡು ಒಂದು ಸೇರು ತುಪ್ಪ, ಹೆಣ್ಣು ಅರ್ಧ ಸೇರು ತುಪ್ಪ, ಒಂದೊಂದು ತಂಬಿಗೆಗಲ್ಲಿ ತಂದು ಸೆಲ್ಲಕ್ಕೆ ಅಡಿಯಲ್ಲು ಇಟ್ಟು ಕುಲಗುರು ಪ್ರಾರ್ಥನೆ ಮಾಡಿ ಹಿರಿಯರ ಪಾದಗಳನ್ನು ಮುಟ್ಟಿ ನಮಸ್ಕರಿಸುತ್ತಾರೆ. ಈ ತುಪ್ಪವನ್ನು ತನ್ನ ಕುಲಗುರುವಿಗೂ ಮತ್ತು ಮುಂದೆ ನಿಂತಿರುವ ಹಿರಿಯ ರಿಗೂ ಅರ್ಪಿಸಿ ಎಲ್ಲರೂ ಊಟ ಮಾಡುತ್ತಾರೆ. ಊಟಕ್ಕೆ ಒಂದು ಬಗೆಯ 'ಹೆಸರು ಹೇಳುವ ಪಜ್ಜಿ(ಚಟ್ನಿ) ಮಾಡಿರು ತ್ತಾರೆ. ಅದನ್ನು ಸಭೆಯವರು ಅದರ ಹೆಸರು ಹೇಳಿ ಊಟ ಮಾಡಬೇಕು. ಮಾರನೆ ದಿವಸ ಬೆಳಿಗ್ಗೆ ಗಂಡು,, ಹೆಣ್ಣು, ಗಂಡಿನ ಮನೆಗೆ ಹೋಗುತ್ತಾರೆ. ಹೋಗುವಾಗ ಮದುವೆ ಚಪ್ಪರದ ಒಂದು ಸೊಪ್ಪಿನ ಕೊಂಬೆಯನ್ನು ಮದುವೆ ಚಪ್ಪರದಿಂದ ತೆಗೆದು ಎಸೆದು ಹೋಗುತ್ತಾರೆ. ಇಲ್ಲಿಗೆ ಶಿವಕಲ್ಯಾಣ ಮುಗಿಯಿತು.

(**ಇನ್ನೊಂದು ವಿಷಯ** :—ಹಿಂದೆ ಸುಳ್ಯ ಸೀಮೆ ಯಲ್ಲಿ ಒಂದು ಮದುವೆ ನಡೆಯಿತಂತೆ. ಹೆಣ್ಣು ಧಾರೆ ಆಗುವ ಹೊತ್ತಿಗೆ ಪುರೋಹಿತರು ಬರಲಿಲ್ಲ. ಕಾರಣ, ಆ ಸುಳ್ಯ ಸೀಮೆಗೆ ಬರಬೇಕಾದ ಸೆರೆ ಪುರೋಹಿತರಿಗೆ ಮಧ್ಯ ಒಂದು ಹೊಳೆ ದಾಟಲಿಕ್ಕಿತ್ತಂತೆ. ಆ ದಿವಸ ಆ ಹೊಳೆಯಲ್ಲಿ ದೊಡ್ಡ ಪ್ರವಾಹ ಬಂದುದರಿಂದ ದೋಣಿ ಇಲ್ಲದ ಕಾರಣ ಪುರೋಹಿತರಿಗೆ ಸಕಾಲಕ್ಕೆ ಧಾರೆ ಮೂರ್ತಕ್ಕೆ ತಲ್ಪಲು ಸಾಧ್ಯವಾಗಲಿಲ್ಲ. ಸಮಯ ಮೀರುತ್ತಾ ಬಂತು. ಹಿಂದಿನ ಕಾಲದಲ್ಲಿ ಒಬ್ಬ ಮುಖ್ಯಾಧಿಕಾರಿಯಾಗಿದ್ದ ಒಬ್ಬ ಬಂಟ ಜಾತಿಯವನು ಸಿಟ್ಟಿನಿಂದ "ಬ್ರಾಣೆ, ದಾಯಿತ ಬ್ರಾಣೆ ಅಪ್ಪೆ, ಅಮ್ಮ ಧಾರೆಮಯಿ ಪುಲೆ" ಎಂದು ಗಟ್ಟಿಯಾಗಿ ಗರ್ಜಿಸಿದನಂತೆ. ಅದೇ ರೀತಿಯಾಗಿ ತಾಯಿ ತಂದೆ ಧಾರೆ ಎರೆದರು. (ಇದಕ್ಕೆ ಈಗಲೂ ಕೊಡಗಿನಲ್ಲೂ ಬಂಟಧಾರೆ) ಎಂದು ಹೆಸರಿದೆ. ಈ ವರ್ತಮಾನವನ್ನು ಅಮರ ಸೀಮೆ ಯವರು ಶೃಂಗೇರಿ ಗುರುಗಳಿಗೆ ತಿಳಿಸಿದರು. ಆಗ ಅವರು "ಸುಳ್ಯ ಸೀಮೆಯವರಿಗೆ ಇನ್ನು ಮುಂದೆ ನಾನು ಗುರು ಅಲ್ಲ. ಅವರು ಇನ್ನು ಮುಂದೆ ಶಿವಕಲ್ಯಾಣ ಪದ್ಧತಿಯನ್ನು ನುಸರಿಸಬಾರದು. ಅಮರದವರು ಸುಳ್ಯದವರ ನೆಂಟಸ್ಥನ ಅನುಮಾಡಬಾರದು" ಎಂದು ಆಜ್ಞೆಕೊಟ್ಟರಂತೆ. ಆಮೇಲೆ ಕೊಡಗಿನಲ್ಲಿ ಸಹ ಈ ಎರಡು ಊರುಗಳಿಗೆ ನೆಂಟಸ್ಥಾನ ನಿಂತುಹೋಯಿತು. ಕಾಲಚಕ್ರ ಉರುಳುತ್ತಾ ಬಂದಹಾಗೆ ಪುನಃ ಇಲ್ಲಿ ಗೌಡುಗಳಿಗೆ ನೆಂಟಸ್ತಾನ ನಡೆಯುತ್ತಾ ಬಂದಿದೆ. ಆದರೆ ಸುಳ್ಯ ಸೀಮೆ ಗೌಡುಗಳಿಗೆ ಶಿವಕಲ್ಯಾಣ ಪದ್ಧತಿಯೇ ಇಲ್ಲ, ಯಾವ ಶಾಸ್ತ್ರ ಕ್ರಮವೂ ಇಲ್ಲ.)

**ಹತ್ತು ಉಳಿಯುವುದು** :—ಹೊಸದಾಗಿ ಮದುವೆಯಾದ ಹುಡುಗಿ ತನ್ನ ತವರಿನಲ್ಲಿ ಇದ್ದುಕೊಂಡು ಸಂಸಾರದೊಂದಿಗೂ ತಾಯಿ ತಂದೆಯವರಲ್ಲಿ ಬಹು ಪ್ರೀತಿ ಯಲ್ಲಿದ್ದು, ಈಗ ಗಂಡನ ಮನೆ ಸೇರಿ ತನ್ನ ಸಂಸಾರ, ತಾಯಿ, ತಂದೆಯವರನ್ನು ಯೋಚಿಸಿ ಬೇಸರಪಟ್ಟು ಕೊಳ್ಳುತ್ತಾಳೆ. ಇದಕ್ಕಾಗಿ ತನ್ನ ತವರು ಮನೆಯವರು 10–15 ದಿವಸ ಗಂಡನ ಮನೆಯಲ್ಲಿ ಕಳೆದನಂತರ ತವರಿಗೆ ಹತ್ತು ಉಳಿಯಲಿಕ್ಕೆ ಕರೆದುಕೊಂಡು ಬರುತ್ತಾರೆ.

**ಆಟಿ ಕೂರುವುದು** :—ಕರ್ಕಾಟಕ (ಆಟಿ) ತಿಂಗಳು ತುಂಬಾ ಶೂನ್ಯಮಾಸವಾಗಿರುತ್ತೆ. ಈ ತಿಂಗಳಲ್ಲಿ ಯಾವ ಶುಭಕಾರ್ಯವನ್ನು ಮಾಡಬಾರದು. ನೂತನ ದಂಪತಿಗಳು ಒಬ್ಬರ ಮುಖ ಒಬ್ಬರು ನೋಡಬಾರದು. ಇದಕ್ಕಾಗಿ ತವರು ಮನೆಯವರು ಕರೆದುಕೊಂಡು ಬಂದು ಒಂದು ತಿಂಗಳು ತವರಿನಲ್ಲಿ ಉಳಿಸಿಕೊಳ್ಳುತ್ತಾರೆ

# ಗೌಡಸಮಾಜದ ಮಕ್ಕಳ ಬಾಲ್ಯ ವಿಧಿಗಳು

ಲೇಖಕರು : ಶ್ರೀ ಎಂ. ಗಂಗಾಧರ B.A.B.Ed., ಮಂಡೆಕೋಲು, ಸುಳ್ಯ, ದ.ಕ.

---

ಶ್ರೀ ಎಂ. ಗಂಗಾಧರನವರು ದಕ್ಷಿಣ ಕನ್ನಡ ಜಿಲ್ಲೆಯ ಬೋರ್ಡು ಹೈಸ್ಕೂಲು, ಸುಳ್ಯದಲ್ಲಿ ಅಧ್ಯಾಪಕರಾಗಿದ್ದಾರೆ. ಇವರಿಗೆ ವಿದ್ಯಾರ್ಥಿಯಾಗಿರುವಾಗಲೇ ಕವನಗಳನ್ನು ಬರೆಯುವ ಹವ್ಯಾಸವಿತ್ತು. ಇವರೊಬ್ಬ ಉದಯೋನ್ಮುಖ ಲೇಖಕರಾಗಿದ್ದಾರೆ. ಇವರು ಬರೆದ "ಶಿವಕಾವ್ಯ" ಎಂಬ ಕವನ ಸಂಕಲನವು ಈ ಹಿಂದೆಯೇ ಪ್ರಕಟವಾಗಿದೆ. ಇವರು ಬರೆದ "ನೊಂದ ಹೃದಯ" ಮತ್ತು "ಸಾಹಿತ್ಯ ಪ್ರೇಮಿ" ಎಂಬೆರಡು ನಾಟಕಗಳು "ಕಾಡೂರ ಬಾಳು" ಎಂಬ ಕಾದಂಬರಿಯು ಪ್ರಕಟಣೆಗೆ ಸಿದ್ಧವಾಗಿವೆ. ಇದೇ ಸಂಚಿಕೆಯಲ್ಲಿ ಅವರ "ಗೌಡ ಸಮಾಜದ ವಿವಾಹ ಪದ್ಧತಿಗಳು" ಎಂಬ ಇನ್ನೊಂದು ಲೇಖನವೂ ಪ್ರಕಟಸಲ್ಪಟ್ಟಿದೆ.

---

ಕೊಡಗಿನ ಗೌಡ ಸಮಾಜವು ಮುಖ್ಯವಾಗಿ ಕನ್ನಡ ನಾಡಿನದು. ಈ ಸಮಾಜದವರು ಕನ್ನಡ ಭಾಷೆಯನ್ನೇ ಆಡುತ್ತಿದ್ದಾರೆ. ಇವರಲ್ಲಿ ಕೆಲವರು ಮೈಸೂರು ಕನ್ನಡವನ್ನೂ, ಕೆಲವು ಕಡೆಯವರು ಅರೆಗನ್ನಡವನ್ನೂ, ಮಂಗಳೂರಿನ ಬಳಿಯವರು ತುಳು ಭಾಷೆಯನ್ನೂ ಮಾತಾಡುತ್ತಿದ್ದಾರೆ. ಪುರಾತನ ಕಾಲದ ವರ್ಣಾಶ್ರಮ ಧರ್ಮ ಪ್ರಕಾರ ಗೌಡ ಸಮಾಜದವರು ಕ್ಷತ್ರಿಯ ವಂಶಕ್ಕೆ ಸೇರಿದವರೆಂತಲೂ ಹೇಳುತ್ತಾರೆ. ಅಂತೂ ಈಗ ಇವರ ಪ್ರಧಾನ ಕಸಬು ಕೃಷಿಯೇ ಆಗಿರುವುದು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಾಗೂ ಕೊಡಗು ಜಿಲ್ಲೆಯಲ್ಲಿ ಇರುವ ಕೊಡಗು ಗೌಡ ಸಮಾಜವು ಉಳಿ ಜಿಲ್ಲಾ ಗೌಡ ಸಮಾಜಕ್ಕಿಂತಲೂ ಮುಂದುವರಿದವರೆಂತ ಅವರ ಸಂಸ್ಕೃತಿಯಿಂದ ತಿಳಿಯಬಹುದು. ಈ ಜಾತಿಯ ಬಾಲ್ಯ ಸಂಪ್ರದಾಯಗಳನ್ನು ನಾವು ತಿಳಿಯುವುದು ಅತೀ ಅಗತ್ಯ-ಇದರಲ್ಲಿ ಹಿಂದೂ ವೈದಿಕ ತತ್ತ್ವಗಳು ಅಡಕವಾಗಿರುವುದನ್ನು ನಾವು ಕಾಣಬಹುದು.

ಗೌಡಜಾತಿಯ ಒಂದು ಕುಟುಂಬದಲ್ಲಿ ಒಂದು ಮಗುವು ಹುಟ್ಟಿದರೆ, ಆ ಕುಟುಂಬಕ್ಕೆ ಹದಿನಾರು ದಿನ ಸೂತಕ (ಅಪವಿತ್ರತೆ) ಇರುತ್ತದೆ. ಆ ಸಮಯದಲ್ಲಿ ಅವರ ಮನೆಯವರು ದೇವಸ್ಥಾನ ಹಾಗೂ ಭೂತಸ್ಥಾನಗಳಿಗೆ ಪ್ರವೇಶಿಸಕೂಡದು. ಅಲ್ಲದೆ ಕುಲದೈವಗಳಿಗೆ ನಿತ್ಯ ದೀಪಗಳನ್ನು ಉರಿಸಲೂ ಕೂಡದು. ಮಗುವಿನ ತಾಯಿಯು ಹೆಚ್ಚಾಗಿ ತನ್ನ ತವರು ಮನೆಯಲ್ಲಿಯೇ ಪ್ರಸವಿಸುವ ಕ್ರಮವಿದೆ. ಮಗುವು ಹುಟ್ಟಿದ ಮೇಲೆ ಏಳನೇ ದಿನ ಗ್ರಾಮದ ಮಡಿವಾಳ ಹೆಂಗಸು ಬಂದು, ತಾಯಿ ಮತ್ತು ಮಗುವನ್ನು ಮೀಯಿಸಿ 'ಆಮೆ' ಎಂಬ

ಶುದ್ಧಿಕ್ರಿಯೆಯನ್ನು ಮಾಡುತ್ತಾಳೆ. ಅಂದು ದೇವಸ್ಥಾನ ದಿಂದ ಪುಣ್ಯ ನೀರನ್ನು ತಂದು ಮನೆಗೆ ಚಿಮುಕಿಸುತ್ತಾರೆ. ಮಗುವಿಗೂ ಚಿಮುಕಿಸಿ, ಮನೆಯ ಎದುರು ಇರುವ ತುಳಸಿ ಕಟ್ಟೆಯಲ್ಲಿ ಇಡುತ್ತಾರೆ. ಮಡಿವಾಳಗಿತ್ತಿಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎರಡೂವರೆ ಸೇರು ಅಕ್ಕಿ, ನಾಲ್ಕು ತೆಂಗಿನಕಾಯಿ ಮತ್ತು ನಾಲ್ಕಾಣೆ ಕೊಡುತ್ತಾರೆ. ಗಂಡು ಮಗುವಾದರೆ ನಾಲ್ಕಾಣೆಯ ಬದಲು ಎಂಟಾಣೆ ಕೊಡುತ್ತಾರೆ. ಅದು ಆಯಾಯ ಊರಿನ ಹಳೆಯ ಸಂಪ್ರದಾಯದಂತೆ ಕೊಡುವ ಪದ್ಧತಿ. ಹದಿನಾರನೇ ದಿನ ಮಗುವನ್ನು ತೊಟ್ಟಿಗೆ ಹಾಕುತ್ತಾರೆ. ಧೂಪ ದೀಪಗಳಿಂದ ಹೊಸ ತೊಟ್ಟಿಲನ್ನು ಶುದ್ಧ ಮಾಡಿ ಮಗುವನ್ನು ಮಲಗಿಸುತ್ತಾರೆ. ಆಗ ಕುಟುಂಬಸ್ಥರು ಹಾಜರಿರಬೇಕು. ಹೆಂಗಸು ತನ್ನ ತವರು ಮನೆಯಲ್ಲಿದ್ದು ಬಾಣಂತಿಯಾಗಿದ್ದರೆ ತನ್ನ ಕುಟುಂಬಸ್ಥರು ಬಾರದೆ ಮಗುವನ್ನು ತೊಟ್ಟಲಿಗೆ ಹಾಕಬಾರದು. ಒಪ್ಪಿಗೆ ಯಿದ್ದಲ್ಲಿ ಹಾಕಬಹುದು ಸಾಮಾನ್ಯವಾಗಿ ಮಗುವಿಗೆ ಅದೇ ದಿನ ನಾಮಕರಣ ಮಾಡುತ್ತಾರೆ. ತಂದೆಯ ಅನು ಮತಿ ಇದ್ದರೆ ಮಗುವಿನ ಅಜ್ಜ ಅಥವಾ ಅಜ್ಜಿಯ ಹೆಸರನ್ನು ಇಡುವ ಸಂಪ್ರದಾಯ ಎಲ್ಲೆಡೆಯಲ್ಲಿಯೂ ಇದೆ. ಪಂಚಾಂಗದಲ್ಲಿರುವ ನಾಮ ನಕ್ಷತ್ರದ ಆಧಾರದಿಂದಲೂ ಹೆಸರನ್ನು ಇಡುವರು. ಸಾಧಾರಣ ನಲ್ವತ್ತು ದಿನ ಕಳೆದ ಬಳಿಕ ಬಾಣಂತಿಯನ್ನು ಶುಭ ಸ್ನಾನ ಮಾಡಿಸಿ ದೇವ ಸ್ಥಾನಕ್ಕೆ ಕರಕೊಂಡು ಹೋಗುತ್ತಾರೆ. ಆ ಬಳಿಕ ತವರು ಮನೆಯಿಂದ ಗಂಡನ ಮನೆಗೆ ತೊಟ್ಟಲು ಮಗುವನ್ನು ಕರಕೊಂಡು ಹೋಗುತ್ತಾರೆ. ಆಗ ಮಗುವಿನ ತಂದೆಯ ಮನೆಯಿಂದ ಯಾರಾದರೂ ಒಬ್ಬರು ಹೆಂಗಸರು ಬರಬೇಕು.

ತೊಟ್ಟಿಲು ಮಗುವನ್ನು ಮನೆಗೆ ತಂದಾಗ, ಅಲ್ಲಿ ದೀಪ ದೇವರಿಗೆ ಉರಿಸಿಟ್ಟು, ಅರಿಸಿನ ನೀರನ್ನು ತಯಾ ರಿಸಿ ಮಗುವಿನ ತಾಯಿ ಪಾದಗಳ ಪಾರ್ಶ್ವಗಳಿಗೆ ದೃಷ್ಟಿ ತೆಗೆಯುವ ಬಗ್ಗೆ ಅಲ್ಲಿನ ಕುಟುಂಬದ ಹೆಂಗಸರಲ್ಲಿ ಒಬ್ಬಳು ಹೊಯ್ಯುತ್ತಾಳೆ. ಆಮೇಲೆ ಮನೆಯ ಯಜಮಾನನು ತೊಟ್ಟಿಲನ್ನು ಹಿಡಿದುಕೊಂಡು ಮನೆಯೊಳಗೆ ಕೊಂಡು ಹೋಗುವನು.

ಅನ್ನ ಪ್ರಾಶನ ವಿಧಿಯನ್ನು ಮಗುವಿಗೆ ಆ ವರ್ಷದ ದಿನ ಮಾಡುತ್ತಾರೆ. ಅಷ್ಟರತನಕ ಅಕ್ಕಿಯ ಆಹಾರವನ್ನು ಮಗುವಿಗೆ ಉಣ್ಣಿಸುವುದಿಲ್ಲ. ಸಾಧಾರಣ ನಾಲ್ಕು ವರ್ಷ ಕಳೆದ ಬಳಿಕ ಮಗುವಿನ ಕರ್ಣಭೇದ ಶಾಸ್ತ್ರವನ್ನು ಮಾಡು ತ್ತಾರೆ. ಹೆಚ್ಚಾಗಿ ಊರಿನ ಅಕ್ಕಸಾಲಿಗ (ಚಿನಿವಾರ)ನಿಂದ ಕೊಡಂಗೆ ಎಂಬ ಉಂಗುರಾಕೃತಿಗೆ ಚಿನ್ನದ ಕಟ್ಟೆಯನ್ನು ಮಾಡಿಸುತ್ತಾರೆ. ಅಕ್ಕಸಾಲಿಗನು ಅದರ ಒಂದು ಬದಿ ಯನ್ನು ಚೂಪಾಗಿ ಮಾಡಿ ಇಟ್ಟಿರುತ್ತಾನೆ. ಆಮೇಲೆ ಗಣಪತಿ ದೇವರಿಗೆ ಅಕ್ಕಿ ತೆಂಗಿನಕಾಯಿಯನ್ನು ಮಗುವಿನ ತಂದೆಯು ಇಡುತ್ತಾನೆ. ಆಮೇಲೆ ಅಕ್ಕಸಾಲಿಗನು ಕಿವಿ ಯನ್ನು ಚುಚ್ಚಿ, ಕೊಡಂಗೆಯನ್ನು ಇಕ್ಕುಳದಿಂದ ಮಡುಚಿ ಸರಿಪಡಿಸುವನು. ಅಕ್ಕಿ ತೆಂಗಿನಕಾಯಿ ಹಾಗೂ ಕಾಣಿಕೆಯ ಹಣವನ್ನು ಅಕ್ಕಸಾಲಿಗನು ತೆಗೆದುಕೊಂಡು ಹೋಗುತ್ತಾನೆ. ಕೆಲವು ರಕ್ಷಕರು ಕಿವಿಯ ನೋವು ವಾಸಿಯಾದ ಕೂಡಲೇ ಬೇರೆ ಕುಂಡಲವನ್ನು ಮಾಡಿಸಿ ಮಗುವಿನ ಕಿವಿಗೆ ತೊಡಿಸು ತ್ತಾರೆ.

ಪ್ರಾಚೀನ ಕಾಲದಲ್ಲಿ ಯಜ್ಞೋಪವೀತ ಧಾರಣೆಯ ಕ್ರಮ ಗೌಡ ಸಮಾಜದಲ್ಲಿಯೂ ಇದ್ದಿತೆಂದು ಹಿಂದಿನವರು ಹೇಳುತ್ತಾರೆ, ಕ್ರಮೇಣ ಕೃಷಿ ವ್ಯವಹಾರ ಯುದ್ಧ ಕಾರ್ಯಗಳಿಗೆ ತೊಂದರೆಯಾದುದರಿಂದ ಅದನ್ನು ಧರಿಸು ವುದನ್ನು ಬಿಟ್ಟರು. ಕ್ರಮೇಣ ಆ ಸಂಪ್ರದಾಯವು ನಿಂತು ಹೋಯಿತು, ಹಾಗೂ ಅದು ಅಗತ್ಯವಿಲ್ಲವೆಂಬುದನ್ನು ಹಿರಿ ಯರು ಸ್ಪಷ್ಟವಾಗಿ ಮನಗಂಡು ಅದನ್ನು ಬಿಟ್ಟುಬಿಟ್ಟರು.

ಸಾಧಾರಣ ೧೬ನೇ ವರ್ಷ ಪ್ರಾಯದಲ್ಲಿ ಗಂಡು ಹುಡುಗನಿಗೆ ಊರಿನ ಕ್ಷೌರಿಕನನ್ನು ಕರಿಸಿ, ಕ್ಷೌರವಿಧಿ ಮಾಡಿ ಕ್ಷೌರ ಕತ್ತಿಯಿಂದ ತಲೆಯನ್ನು ಬೋಳಿಸುವ ಅಥವಾ ತಲೆಯ ಬದಿಯನ್ನು ಸರಿಪಡಿಸುವ ವ್ಯವಸ್ಥೆಯನ್ನು ಹಿರಿಯರು ಮಾಡಿಸುತ್ತಾರೆ. ಆಗಲೂ ದೇವರಿಗೆ ಇಟ್ಟ ಅಕ್ಕಿ ತೆಂಗಿನಕಾಯಿಗಳನ್ನು ಕ್ಷೌರಿಕನು ಕೊಂಡುಹೋಗು ತ್ತಾನೆ. ಆದರೆ ಈ ಸಂಪ್ರದಾಯವು ಕೆಲವು ಹಳ್ಳಿಗಳಲ್ಲಿ ಮಾತ್ರ ಈಗ ಇದ್ದು ಕೆಲವರು ಆಚರಿಸುತ್ತಿಲ್ಲ.

ಹೆಣ್ಣು ಮಗು ಸಾಧಾರಣ ಹದಿಮೂರು ಯಾ ಹದಿನೆಂಟು ವರ್ಷ ಪ್ರಾಯದಲ್ಲಿ ರಜಸ್ವಲೆಯಾಗುವಳು.

ಇಂತಹ ಕನ್ನಿಕೆಯನ್ನು ಹೊಲೆ ಕಂಡವಳು ಯಾ ಮದುಮಗಳಾದವಳು ಎಂದು ಹೇಳುವುದುಂಟು. ಆ ಹುಡುಗಿಯನ್ನು ಮನೆಯೊಳಗೆ ಬಿಡದೆ ಒಂದು ಕೊಟ್ಟಡಿಗೆ ಅಥವಾ ಪ್ರತ್ಯೇಕ ಕೋಣೆಯಲ್ಲಿ ಕುಳ್ಳಿರಿಸುತ್ತಾರೆ. ಪ್ರಥಮ ರಜಸ್ವಲೆಯಾದ ಇಂತಹ ಕನ್ನಿಕೆಯನ್ನು ಕುಟುಂಬದ ಕೆಲವು ಹೆಂಗಸರು ಕೂಡಿ ಮಿಂಯಿಸುತ್ತಾರೆ. ಆಮೇಲೆ ಮಡಿವಾಳ ಕೊಟ್ಟ ಮಡಿಬಟ್ಟೆ ಚೂರಿನೊಂದಿಗೆ ಅವಳ ತಲೆಗೆ ನೀರನ್ನು ಹೊಯ್ಯುತ್ತಾರೆ, ಹೆಚ್ಚಾಗಿ ಈ ಕಾರ್ಯಕ್ರಮಕ್ಕೆ ಊರಿನ ಮಡಿವಾಳ ಹೆಂಗಸು ಬರಲೇಬೇಕಾಗಿದೆ. ಆ ಬಳಿಕ ಶುಭ ಮುಹೂರ್ತದಂದು 'ಋತುಶಾಂತಿ' ಎಂಬ ಉತ್ಸವವನ್ನು ಆಚರಿಸುತ್ತಾರೆ.

ಋತುಶಾಂತಿ ಕ್ರಮವನ್ನು ಆಚರಿಸುವಂದು, ರಜಸ್ವಲೆಯಾದ ಕನ್ನಿಕೆಯನ್ನು ಮಿಂಯಿಸಿ, ಒಳ್ಳೆ ಸೀರೆ ರವಿಕೆಗಳನ್ನು ತೊಡಿಸಿ ಅಂಗಳದಲ್ಲಿ ನಿಲ್ಲಿಸಿ ವಿಧಿವತ್ತಾಗಿ ದೇವರಿಗೆ ಕೈ ಮುಗಿಸುತ್ತಾರೆ. ಆ ಬಳಿಕ ಒಂದು ಕಡೆ ಮಣೆಯ ಮೇಲೆ ಕುಳ್ಳಿರಿಸುತ್ತಾರೆ. ಈ ಕಾರ್ಯಕ್ರಮಗಳನ್ನೆಲ್ಲಾ ಹೆಚ್ಚಾಗಿ ಹೆಂಗಸರೇ ನಡೆಯಿಸುತ್ತಾರೆ. ನಂತರ ಬಂಧುಗಳು ಅವಳ ಕೈಯಲ್ಲಿ ಉಡುಗೊರೆ ಮತ್ತು ಹಣವನ್ನು ಪ್ರೀತಿಯಿಂದ ಕೊಡುತ್ತಾರೆ. ಆಮೇಲೆ ಔತಣವನ್ನು ಎಲ್ಲರೂ ಉಣ್ಣುತ್ತಾರೆ. ಇಂತಹ ಔತಣದಲ್ಲಿ ಪಾಯಸ, ಅವಲಕ್ಕಿ, ಕೆಲವು ಪಲ್ಯ ಪದಾರ್ಥಗಳು ಮಾತ್ರ ಇರುತ್ತವೆ.

ಸಾಮಾನ್ಯವಾಗಿ ಋತುವಾಗದ ಕನ್ನಿಕೆಯನ್ನು ವಿವಾಹ ಮಾಡಿಕೊಡುವುದಿಲ್ಲ. ಸಾಮಾನ್ಯ ಎರಡು ಯಾ ಮೂರು ವರ್ಷ ಕಳೆದ ಬಳಿಕ ಅಂದರೆ ಪ್ರೌಢೆಯಾದ ತರುಣಿಯನ್ನು ವಿವಾಹ ಮಾಡಿಕೊಡುವ ಸಂಪ್ರದಾಯವು ಈಗ ಎಲ್ಲೆಡೆಗಳಲ್ಲಿಯೂ ಇದೆ.

ಪ್ರಪಂಚದ ಅತೀ ಪ್ರಾಚೀನ ಧರ್ಮವಾದ ವೈದಿಕ ಯಾ ಹಿಂದೂ ಧರ್ಮದ ವಿಧಿ ನಿಯಮಗಳೆ ಬ್ರಾಹ್ಮಣ ಸಂಗಡದಷ್ಟು ಗೌಡ ಸಮಾಜದಲ್ಲಿ ಕಂಡು ಬಾರದಿದ್ದರೂ ಹೆಚ್ಚಿನ ನಿಯಮಗಳು ಪಾಲಿಸಲ್ಪಡುತ್ತವೆ. ಇದಕ್ಕೆ ಮೇಲಿನ ಸಂಪ್ರದಾಯಗಳೇ ನಿದರ್ಶನವಾಗಿವೆ. ಹಿಂದಿನ ಸಂಪ್ರದಾಯಗಳು ನಮ್ಮ ನಾಡಿನ ಹಾಗೂ ಧರ್ಮದ ಸಂಸ್ಕೃತಿಯ ತಿರುಳಾಗಿ ಈಗಲೂ ಬೆಳಗುತ್ತಿವೆ. ಇಂತಹ ಹಳೆ ಸಂಸ್ಕೃತಿಗಳನ್ನು ಮರೆಯುವುದು ಎಂದಿಗೂ ಸರಿಯಲ್ಲ. ಪರದೇಶಿಯ ಸಂಸ್ಕೃತಿಗಳಿಗೆ ಮಾರು ಹೋಕ್ಕು, ಕೆಲವು ಸಂಪ್ರದಾಯಗಳನ್ನು ಹಿಂದೂ ಸಮಾಜದ ಈಗಿನ ಪುರುಷರು ಆಚರಿಸುತ್ತಿಲ್ಲ. ಇದು ಬಹಳ ಬೇಸರದ ಸಂಗತಿ. ಇದು ಸಾಂಸ್ಕೃತಿಕ ದಾಸ್ಯವನ್ನು ಸೂಚಿಸುತ್ತದೆ. ಪರರನ್ನು ನಾವುಯಾವಾಗಲೂ ಅಂಧರೀತಿಯಲ್ಲಿ ಅನುಸರಿಸಬಾರದು. ಉಚಿತ ಕ್ರಮಗಳನ್ನು ಮಾತ್ರ ನಾವು ಇತರರಿಂದ ಕಲಿಯಬಹುದು. ಅಯೋಗ್ಯ.ಹಾಗೂ ಅನಾವಶ್ಯಕದ ಆಚಾರಗಳಿದ್ದರೆ ಅವುಗಳಿಗೆ ಹೊಸ ರೂಪವನ್ನು ಕೊಡಬೇಕು.

ಕಿವಿಯಲ್ಲಿ ಆಭರಣವನ್ನು ಧರಿಸುವುದು ಹಿಂದೂ ಧರ್ಮದ ಸಂಕೇತವಲ್ಲದೆ ಅದರಿಂದ ಶರೀರಕ್ಕೆ ಶಾಂತಿ ಹಾಗೂ ತೇಜಸ್ಸು ಬರುತ್ತದೆ. ಬಂಗಾರದ ಮೇಲಿನಿಂದ ಹಾದು ಬಿದ್ದ ನೀರು ಶರೀರಕ್ಕೆ ಹಿತಕಾರಿ ಎಂತ ವಿಜ್ಞಾನಿಗಳೂ ಹೇಳುತ್ತಿದ್ದಾರೆ. ಹೀಗೆ ಹಲವು ಬಾಲ್ಯವಿಧಿಗಳನ್ನು ಗೌಡ ಸಮಾಜದವರು ಆಚರಿಸುತ್ತಿರುವುದು ಯುಕ್ತೋಚಿತವಾಗಿದೆ.



- ವಿಯೋಗದ ಗಳಿಗೆ ಬರದ ಹೊರತು ಪ್ರೀತಿಗೆ ತನ್ನ ಅಗಾಧತೆಯ ಅರಿವು ಆಗಲಾರದು.

—ಖಲೀಲ್ ಗಿಬ್ರಾನ್

- ತಿನ್ನಬೇಕೆನಿಸಿದರೆ ಮಾಂಸ ತಿನ್ನಿ, ದೇವರ ಹೆಸರು ತಿನ್ನಬೇಡಿ.

—ಗೌತಮ ಬುದ್ಧ

- ಪ್ರಾರ್ಥನೆಯು ಮುಂಜಾನೆ ಬಾಳ ಬಾಗಿಲ ಕೀಲಿ ಕೈ; ಸಂಜೆ ಆ ದ್ವಾರದ ಅಗಳಿ.

—ಮಹಾತ್ಮ ಗಾಂಧಿ

# ಗೌಡ ಸಮಾಜದ ವಿವಾಹ ಪದ್ಧತಿಗಳು

ಲೇಖಕರು : ಶ್ರೀ ಎಂ. ಗಂಗಾಧರ, ಬಿ.ಎ., ಬಿ.ಇಡಿ., (ಸುಳ್ಯ, ದ.ಕ.)

ಗೌಡ ಸಮಾಜದಲ್ಲಿ ಮೊತ್ತಮೊದಲು ಹತ್ತು ಕುಟುಂಬಗಳು ಇದ್ದುವು ಎಂತ ಹಿರಿಯರು ಹೇಳುತ್ತಿದ್ದಾರೆ. ಆ ಕುಟುಂಬಗಳು ತುಂಡಾಗಿ ಹದಿನೆಂಟು ಕುಟುಂಬಗಳಾದವು. ಇವುಗಳಿಗೆ ಒಂದೊಂದು ಹೆಸರನ್ನು ಇಟ್ಟರು. ಅವುಗಳೇ ಗೋತ್ರಗಳು. ಈ ಗೋತ್ರಗಳನ್ನು ಗ್ರಾಮ್ಯ ಭಾಷೆಯಲ್ಲಿ 'ಬಿಳಿ' ಎನ್ನುತ್ತಾರೆ. ಸ್ವಗೋತ್ರದ ಕನ್ನಿಕೆಯನ್ನು ಮದುವೆಯಾಗುವುದು ನಿಷಿದ್ಧವಾಗಿದೆ. ಸ್ವಗೋತ್ರದ ಕನ್ನಿಕೆಯು ಸಹೋದರಿಯೆಂದು ಅಭಿಪ್ರಾಯವಾಗಿದೆ. ಸಮಾಜದ ಪ್ರತಿಯೊಬ್ಬ ಯುವಕನು ಅನ್ಯ ಗೋತ್ರದ ಕನ್ನಿಕೆಯನ್ನು ಹುಡುಕಿ, ಲಗ್ನವಾಗುವನು. ಕೊಡಗು ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಈ ಕೆಳಗಿನ ಗೋತ್ರಗಳು ವಾಡಿಕೆಯಲ್ಲಿವೆ.

೧. ನಂದರಗೋತ್ರ, ೨. ಹೆಮನಗೋತ್ರ, ೩, ಸೆಟ್ಟಿಗೋತ್ರ (ಹಾಲು ಗುಂಡರ), ೪. ಕಬರ್ ಗೋತ್ರ, ೫. ಚಾಬ್ಯರ ಗೋತ್ರ, ೬. ಮೌಲ್ಯರ ಗೋತ್ರ, ೭. ಬಂಗಾರ ಗೋತ್ರ, ೮. ಗೌಡ ಗೋತ್ರ, ೯. ಗೋಳಿ ಗೋತ್ರ, ೧೦. ನಾಲೆ ಗೋತ್ರ, ೧೧. ಬಳಸನ್ನ ಗೋತ್ರ, ೧೨. ಕರ್ಬನ್ನ ಗೋತ್ರ, ೧೩. ಔದನ್ನ ಗೋತ್ರ, ೧೪. ನಾಯರ್ ಗೋತ್ರ, ೧೫. ಕರೆಂಬೆರ್ ಗೋತ್ರ, ೧೬. ಚಿತ್ತೆರ ಗೋತ್ರ, ೧೭. ಗುಂಡರ ಗೋತ್ರ, ೧೮. ಲಿಂಗಾಯಿತ ಗೋತ್ರ.

ಯೋಗ್ಯ ಮನೆತನದ ಅಂದರೆ ಕುಲೀನ ಕುಟುಂಬದವರು ತಮಗೆ ಸರಿಸಮಾನವಾದ ಕುಟುಂಬದೊಂದಿಗೆ ವಿವಾಹ ಸಂಬಂಧವನ್ನು ಬೆಳೆಸುತ್ತಾರೆ. ಸಾಮಾನ್ಯವಾಗಿ ಕೆಳಮನೆತನದವರಿಗೆ ಕನ್ನಿಕೆಯನ್ನು ಇವರು ಕೊಡುವುದಿಲ್ಲ.

## ಕನ್ನಿಕೆಯನ್ನು ಅರಸುವುದು

ವಿವಾಹವಾಗುವವರು ಮೊತ್ತಮೊದಲು ಹುಡುಗನ ಕಡೆಯಿಂದ ಅಥವಾ ಹುಡುಗಿಯ ಕಡೆಯಿಂದ ಒಬ್ಬ ಹಿತಚಿಂತಕನು ಮದುವೆಯಾಗಬಹುದಾದ ಸಮಾನ ಹಂತದ ಕುಳ ನೋಡಿ ಹುಡುಗ ಮತ್ತು ಹುಡುಗಿಯ ಮನೆಯಲ್ಲಿ ಸಂಬಂಧವ ವಿಚಾರವನ್ನು ಪ್ರಸ್ತಾಪಿಸುತ್ತಾನೆ. ಹುಡುಗಿಯ ಭಾಗದವರಿಗೆ ಸಮ್ಮತವಾದರೆ, ಅವರು ಹುಡುಗನನ್ನು ಆಮಂತ್ರಿಸುತ್ತಾರೆ.

ಮದುವೆಯಾಗಲಿರುವ ತರುಣನು ತನ್ನ ಕುಟುಂಬದ ಹಿರಿಯರೊಂದಿಗೆ ಕನ್ನಿಕೆಯನ್ನು ನೋಡಲು ಹೋಗುವ ವಾಡಿಕೆ ಇದೆ. ಕೆಲವು ವೇಳೆ ಸ್ವಜಾತಿಯ ಗೆಳೆಯರೊಂದಿಗೆ ಹೋಗುವುದುಂಟು. ಹುಡುಗನಿಗೆ ಹುಡುಗಿಯನ್ನು ನೋಡಿ ಮೆಚ್ಚಿಕೆಯಾದರೆ, ಅವನು ಹುಡುಗಿಯ ಅಭಿಪ್ರಾಯವನ್ನು ತಿಳಿಯುತ್ತಾನೆ. ಹುಡುಗಿಯು ತನಗೆ ಈತನು ವರನಾಗಬಹುದೆಂದು ತಿಳಿಸಿದರೆ ಅಥವಾ ಹಸನ್ಮುಖಿಯಾಗಿದ್ದರೆ, ಕನ್ನಿಕೆಯ ತಂದೆಯು ಹುಡುಗನ ಹಿರಿಯರ ಪ್ರಸ್ತಾಪಕ್ಕೆ ಉತ್ತರಕೊಡುವನು. ಹುಡುಗನಿಗೂ ಹುಡುಗಿಗೂ ಪರಸ್ಪರ ಒಪ್ಪಿದರೆ ವಿವಾಹವು ನಿಶ್ಚಯವಾದಂತೆಯೇ ಸರಿ. ಕನ್ನಿಕೆಯ ತಾಯಿಯು ಒಪ್ಪದಿದ್ದರೆ ಹುಡುಗನ ಭಾಗದವರು ಅಂತಹ ಸಂಬಂಧದಲ್ಲಿ ಹೆಚ್ಚು ಪ್ರಯತ್ನಿಸುವುದಿಲ್ಲ.

ಕಾರಣ ತರುಣಿಯು ತನ್ನ ಭಾರವನ್ನು ಹೆಚ್ಚಾಗಿ ತನ್ನ ತಾಯಿಯ ಮೇಲೆಯೇ ಹಾಕುತ್ತಾಳೆ. ಆದುದರಿಂದ ತರುಣಿಯ ತಾಯಿಯನ್ನು ಮೊದಲು ಒಪ್ಪಿಸಬೇಕಾಗುತ್ತದೆ: ಇದಾದ ಬಳಿಕ ಹುಡುಗನು ಭಾವೀಪತ್ನಿಗೆ ಉಂಗುರವನ್ನು ಕೊಡುವ ಸಂಪ್ರದಾಯವು ಕೆಲವೆಡೆ ಇದೆ. ಪರಸ್ಪರ ಒಪ್ಪಿಗೆಯಾಗದಿದ್ದರೆ ಹುಡುಗನ ಭಾಗದವರು ಬೇರೆ ಕಡೆಗೆ ಕನ್ಯಾನ್ವೇಷಣೆಗೆ ಹೋಗುತ್ತಾರೆ. ಹುಡುಗಿಯ ಭಾಗದವರು ಸಂಬಂಧದಲ್ಲಿ ಇಷ್ಟವಿಲ್ಲವಾದರೆ, ನೋವಾಗದ ರೀತಿಯಲ್ಲಿ ನೆಪವನ್ನು ಹೇಳಿ, ಹುಡುಗನ ಭಾಗದವರು ಸನ್ಮಾನಿಸಿ ಕೊಟ್ಟು ಕಳುಸುತ್ತಾರೆ.

ಪರಸ್ಪರ ಸಂಬಂಧದಲ್ಲಿ ಒಪ್ಪಿಗೆಯಾದರೆ, ಹುಡುಗಿಯ ಹಿರಿಯರು ವಿವಾಹ ನಿಶ್ಚಯದ ಬಗ್ಗೆ, ಹುಡುಗನ ಮನೆಯನ್ನು ನೋಡಲು ಹೋಗುತ್ತಾರೆ. ಆ ಬಳಿಕ ನಿಶ್ಚಯದ ದಿನವನ್ನು ಹುಡುಗನ ಕಡೆಯವರಿಗೆ ತಿಳಿಸುತ್ತಾರೆ. ಅಂದು ಹುಡುಗನು ಹೋಗುವಂತಿಲ್ಲ. ಅವನ ಹಿರಿಯವರು ಮತ್ತು ಊರಿನ ಗೌಡ ಪುರೋಹಿತರು ಕನ್ನಿಕೆಯ ಮನೆಗೆ ಹೋಗುತ್ತಾರೆ. ಅಲ್ಲಿ ವಧುವಿನ ಕಡೆಯವರು ವೀಳ್ಯ ಕೊಟ್ಟು ನಿಶ್ಚಯವನ್ನು ಕೊಡುತ್ತಾರೆ. ಆಗಲೇ ಮದುವೆಯ ಪದ್ಧತಿ ಹಾಗೂ ಮುಹೂರ್ತವನ್ನು ನಿಶ್ಚಯಿಸುತ್ತಾರೆ.

ಆ ಬಳಿಕ ಎರಡು ಭಾಗದವರು ಲಗ್ನಪತ್ರಿಕೆಗಳನ್ನು ಮುದ್ರಿಸಿ, ತಮ್ಮ ಬಂಧು, ಮಿತ್ರರಿಗೆ ಕಳುಹಿಸಿಕೊಡುವರು.

### ಸಾಮಾನ್ಯ ವಿವಾಹ ಪದ್ಧತಿ

ವಿವಾಹದ ಮುಹೂರ್ತಕ್ಕೆ ಒಂದು ದಿನ ಮುಂಚಿತ ವರನ ಮನೆಯಲ್ಲಿ ಅವನ ಸಮೀಪದ ಬಂಧುಗಳು ಸೇರುತ್ತಾರೆ. ಶೃಂಗಾರ ಮಾಡಿದ ಮದುವೆ ಚಪ್ಪರದ ಕೆಳಗೆ ಹುಡುಗನಿಗೆ ಮದುರಂಗಿ ಶಾಸ್ತ್ರ ಮಾಡಿಸುತ್ತಾರೆ. ಆಮೇಲೆ ಸ್ನಾನ ಮಾಡಿಸಿ, ನವೀನ ಉಡುಪುಗಳನ್ನು ತೊಡಿಸಿ, ರುಮಾಲು ಸುತ್ತಿ, ಮುಹೂರ್ತದ ಮಣಿಯೆಂಬ ಸರವನ್ನು ಪುರೋಹಿತನು ಕಟ್ಟುತ್ತಾನೆ. ಆಮೇಲೆ ಊಟ, ಫಲಹಾರ ತೀರಿಸಿದ ಮೇಲೆ, ವರನ ದಿಬ್ಬಣವು ವಾದ್ಯಘೋಷದೊಂದಿಗೆ ವಧುವಿನ ಮನೆಗೆ ಹೋಗುತ್ತದೆ. ಆಗ ದಾರಿಯಲ್ಲಿ ಅಲ್ಲಲ್ಲಿ ಎಲೆ ಅಡಿಕೆಗಳನ್ನು ಒಬ್ಬರು ಕೊಡುತ್ತಾ ಹೋಗುತ್ತಾರೆ. ಬಹಳ ದೂರದ ಪ್ರಯಾಣವಾದರೆ ವಾಹನದಲ್ಲಿ ಹೋಗುತ್ತಾರೆ. ಹಾಗೆ ಹೋದಲ್ಲಿ ವಧುವಿನ ಮನೆಯ ಸಮೀಪ ವಾಹನದಿಂದ ಇಳಿದು, ಬಳಿಕ ವಾದ್ಯಘೋಷದೊಂದಿಗೆ ದಿಬ್ಬಣ ನಡೆಯುತ್ತದೆ.

ವಧುವಿನ ಕಡೆಯವರು ದಿಬ್ಬಣವನ್ನು ಸ್ವಾಗತಿಸಿ ಪ್ರತ್ಯೇಕ ಚಪ್ಪರದ ಕೆಳಗೆ ಅವರನ್ನು ಕುಳ್ಳಿರಿಸಿ ಪಾನೀಯವನ್ನು ಕುಡಿಯಲು ಕೊಡುತ್ತಾರೆ. ಮದುಮಗನಿಗೆ ಹುಡುಗಿಯ ತಾಯಿಯೂ ಹಿರಿಯ ಹೆಂಗಸು ಹಾಲು ತಂದು ಕೊಡುತ್ತಾಳೆ. ಅದನ್ನು ಅವನು ಕುಡಿದಾಗ, ಹಾಲಿನ ಲೋಟದಲ್ಲಿ ನಾಲ್ಕಾಣೆ ನಾಣ್ಯವನ್ನು ಕಾಣಿಕೆಯಾಗಿ ಹಾಕಬೇಕು. ಅಂದರೆ ಧಾರಾಮುಹೂರ್ತವಾಗುವವರೆಗೆ ವರನು ವಧುವಿನ ಮನೆಯ ಹಂಗಿನದಾಗ ಬಾರದೆಂದು ವಿಧಿಯಾಗಿದೆ.

ಇದಾದಬಳಿಕ ವಧುವಿಗೆ ಮದುರಂಗಿ ಶಾಸ್ತ್ರ ಪ್ರಾರಂಭ ಮಾಡುತ್ತಾರೆ. ವರನ ದಿಬ್ಬಣ ಬಾರದೆ ವಧುವಿನ ಶೃಂಗಾರ ಮಾಡುವುದಿಲ್ಲ. ಕಾರಣ ಹಿಂದಿನ ಕಾಲದಲ್ಲಿ ಕೆಲವು ವೇಳೆ ವಿವಾಹವೇ ಎರಡು ಭಾಗದ ವೈಮನಸ್ಸಿನಿಂದಾಗಿ ನಿಂತು ಹೋಗುತ್ತಿತ್ತು. ಆದ್ದರಿಂದ ಈ ಪದ್ಧತಿ ಬಂತು. ಮದುರಂಗಿ ಶಾಸ್ತ್ರವಾಗಿ ಮುಹೂರ್ತ ಮಣಿ ಅಥವಾ ಬಾಸಿಂಗವನ್ನು ಕಟ್ಟಿದ ವರ ಮತ್ತು ವಧುವು ವಿವಾಹವಾಗಲೇಬೇಕು. ಒಂದು ಭಾಗದವರು ತಪ್ಪಿದರೆ ಕೂಡಲೇ ಹೊಸ ಸಂಬಂಧ ಮಾಡಿಯಾದರೂ ಮುಹೂರ್ತಕ್ಕೆ ಮದುವೆಯಾಗದಿದ್ದರೆ, ಅಪಶಕುನವೆಂದು ಶಾಸ್ತ್ರ ನಿಯಮವಿದೆ. ಆದ್ದರಿಂದ ಒಂದು ಭಾಗದವರು ಬಂದಮೇಲೆಯೇ ಇನ್ನೊಂದು ಭಾಗದ ತಯಾರು ಆಗುತ್ತದೆ. ಇದರಿಂದ ವಿವಾಹ ಪ್ರಮಾದವು ಆಗಲು ಎಡೆಯಿಲ್ಲದಂತಾಗಿದೆ.

ವರನ ದಿಬ್ಬಣದೊಂದಿಗೆ, ವರನ ಸಹೋದರಿಯಾದವಳು ಕಲಶ ಕನ್ನಡಿ ಎಂಬ ಹರಿವಾಣದೊಂದಿಗೆ ಬಂದಿರುತ್ತಾಳೆ. ಅವಳು ವರನ ಸಮೀಪವೇ ಇರುವ ಕ್ರಮ ವಧುವಿನ ಶೃಂಗಾರವಾದ ಬಳಿಕ ಅವಳಿಗೆ ವರನ ಕಡೆ

ಉಡುವ ಸೀರೆ ರವಕೆ ಆಭರಣಗಳನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ಕೊಡುತ್ತಾರೆ. ವಧುವಿನ ಕಡೆಯ ಮುಖ್ಯಸ್ಥರು ಅದನ್ನು ಪಡೆದು ವಧುವಿನ ಪೈಕಿಯ ಹಿರಿಯ ಹೆಂಗಸಿನೊಡನೆ ಕೊಡುವನು. ಆ ಬಳಿಕ ಭಾವೀ ಪತಿಯು ಉಡುಪು, ಚಿನ್ನಾಭರಣಗಳನ್ನು ಧರಿಸಿ, ವಧುವಿಗೆ ವಿವಾಹಕ್ಕೆ ತಯಾರಾಗಲು ಹೇಳುತ್ತಾರೆ

ಇದಾದ ಬಳಿಕ ಸಭಿಕರಲ್ಲಿ ವಧುವಿನ ಕಡೆಯ ಪುರೋಹಿತನು ಧಾರಾಮುಹೂರ್ತಕ್ಕೆ ಸಿದ್ಧತೆಯಾಗಲು ಕೇಳಿಕೊಳ್ಳುತ್ತಾನೆ. ಧಾರಾ ಮಂಟಪಕ್ಕೆ ಎರಡು ಪಕ್ಕಗಳಲ್ಲಿ ಮಡಿಬಟ್ಟೆಯನ್ನು ಹಾಡಚಿ, ಉದ್ದಕ್ಕೆ ಮಡಿವಾಳನು ಹಾಸುತ್ತಾನೆ. ಹೆಜ್ಜೆಯಿಡುತ್ತಾ ಒಂದು ಬಟ್ಟೆಯ ಮೇಲೆ ವರನೂ, ಇನ್ನೊಂದು ಬಟ್ಟೆಯ ಮೇಲೆ ವಧುವೂ ತಮ್ಮ ಹಿರಿಯರೊಂದಿಗೆ ಬರುವರು. ಅವರು ಧಾರಾ ಮಂಟಪದ ಒಳಕ್ಕೆ ಬಂದಕೂಡಲೇ, ಒಂದು ಬಟ್ಟೆಯ ಪರದೆಯನ್ನು ಅಡ್ಡ ಹಿಡಿಯುತ್ತಾರೆ. ಧಾರೆಯೆರೆಯುವ ತನಕ ಅವರಿಬ್ಬರು ಸತಿಪತಿಗಳಾಗುವುದಿಲ್ಲ. ಆದ್ದರಿಂದ ಅವರು ಒಬ್ಬರು ಇನ್ನೊಬ್ಬರನ್ನು ನೋಡಬಾರದೆಂದು ಹಿಂದಿನ ನಿಯಮವಾಗಿದೆ.

ಆಮೇಲೆ ವಧುವಿನ ಕಳಶ ಕನ್ನಡಿಯ ಗಿಂಡಿಗೆಯನ್ನು ವಧುವಿನ ತಂದೆಯು ಬಂಧುಗಳಿಗೆ ಮುಟ್ಟಲು ಕೊಡುತ್ತಾನೆ. ತಂದೆಯಿಲ್ಲದ ಕನ್ನಿಕೆಯಾದರೆ ಸೋದರಮಾವನು ಆ ಕಾರ್ಯವನ್ನು ಮಾಡಬಹುದು. ಆಮೇಲೆ ಗಿಂಡಿಯ ನೀರುಗಳನ್ನು ಅದಲುಬದಲು ಮಾಡುತ್ತಾರೆ. ಬಳಿಕ ತಂದೆಯಾ ಹಿರಿಯವನು ಧಾರೆಯೆರೆಯುವ ಕೆಲಸ ಮಾಡುತ್ತಾನೆ. ವಧುವಿನ ಕೈಗಳನ್ನು ವರನ ಕೈಯಲ್ಲಿ ಇಟ್ಟು ನೀರನ್ನು ಹೊಯ್ದು ತಂದೆ ಅಥವಾ ಹಿರಿಯವನು ಧಾರಾ ಕೆಲಸವನ್ನು ಮುಗಿಸುತ್ತಾನೆ. ಆಗ ಊರಿನ ಗೌಡನು ಈ ಕೆಳಗಿನ ವಾಕ್ಯವನ್ನು ಹೇಳುತ್ತಾನೆ.

' ಹತ್ತು ಕುಟುಂಬ ಹದಿನೆಂಟು ಗೋತ್ರ ಸಭೆ ಸರ್ವರಲ್ಲಿಯೂ....ಗೋತ್ರದ ರಾಮನೆಂಬ ವರನಿಗೆ....ಸೀತೆಯೆಂಬ ವಧುವನ್ನು ಧಾರೆ ಹೊಯ್ಯುತ್ತೇವೆ ' ಇದನ್ನು ಮೂರು ಬಾರಿ ಗೌಡನು ಹೇಳುತ್ತಾನೆ. ಆ ಬಳಿಕ ಪರದೆಯನ್ನು ತೆಗೆದುಬಿಡುತ್ತಾರೆ. ನಂತರ ಕಳಸಕನ್ನಡಿಯಲ್ಲಿರುವ ಮಂಗಳಸೂತ್ರವನ್ನು ವರನು ತೆಗೆದು ಕನ್ನಿಕೆಯ ಕೊರಳಿಗೆ ಕಟ್ಟುತ್ತಾನೆ. ಕೆಲವು ಕಡೆ ವಧುವು ವರನ ಕಂಠಕ್ಕೆ ಹೂವಿನ ಹಾರವನ್ನು ಹಾಕುವುದುಂಟು. ಆಗ ವರನೂ ಒಂದು ಹೂಮಾಲೆಯನ್ನು ವಧುವಿಗೆ ತೊಡಿಸುತ್ತಾನೆ. ಹೂವಿನ ಹಾರಗಳನ್ನು ಪರಸ್ಪರ ಹಾಕುವ ಸಂಪ್ರದಾಯ ಈಗ ಕೆಲವೆಡೆ ಬಳಕೆಗೆ ಬಂದಿರುತ್ತದೆ.

**ವಿವಾಹದಲ್ಲಿ ಎರಡು ಪದ್ಧತಿಗಳಿವೆ :** ೧. ಬ್ರಾಹ್ಮಣ ವಿಧಿ. ೨. ಕ್ಷತ್ರಿಯ ವಿಧಿ. ಬ್ರಾಹ್ಮಣ ವಿಧಿಯಲ್ಲಿ ವಿವಾಹದ ಎಲ್ಲಾ ಕಾರ್ಯಕ್ರಮಗಳಿಗೆ ಬ್ರಾಹ್ಮಣ ಪುರೋಹಿತನು ಬೇಕು. ಅವನು ಮಂತ್ರಗಳನ್ನು ಹೇಳಿಕೊಂಡು ಇರುತ್ತಾನೆ. ಬ್ರಾಹ್ಮಣ ವಿಧಿಯಲ್ಲಿ ಧಾರೆಯೆರೆದ ಬಳಿಕ, ವರನ ಶಾಲಿಗೆ ವಧುವಿನ ಸೆರಗಿನ ತುದಿಯನ್ನು ಕಟ್ಟಿ ಧಾರಾಮಂಟಪಕ್ಕೆ ಮೂರು ಸುತ್ತು ಬರಿಸುತ್ತಾನೆ. ಆಮೇಲೆ ಮಂತ್ರಾಕ್ಷತೆಯನ್ನು ಬ್ರಾಹ್ಮಣನು ವಧೂವರರ ಮೇಲೆ ಹಾಕುತ್ತಾನೆ. ವರನು ಬ್ರಾಹ್ಮಣನಿಗೆ ದಕ್ಷಿಣೆ ಕೊಟ್ಟು ಆಶೀರ್ವಾದ ಪಡೆಯುತ್ತಾನೆ. ಕ್ಷತ್ರಿಯ ವಿಧಿಯಲ್ಲಿ ಬ್ರಾಹ್ಮಣನ ಕೆಲಸವನ್ನು ಊರಿನ ಗೌಡನೇ ನೆರವೇರಿಸುತ್ತಾನೆ. ಇದಾದಬಳಿಕ ವಧೂವರರನ್ನು ವಧುವಿನ ತಂದೆಯು ತನ್ನ ಮನೆಗೆ ಕರಕೊಂಡು ಗೃಹಪ್ರವೇಶ ವಿಧಿಯನ್ನು ನೆರವೇರಿಸುತ್ತಾನೆ. ಆಗ ವರನು ವಧುವಿನ ಕೈಯನ್ನು ಹಿಡಿದುಕೊಂಡಿರಬೇಕು. ಆ ಬಳಿಕ ಒಂದು ಕೋಣೆಯಲ್ಲಿ ಅವರನ್ನು ಹೊಸ ಚಾಪೆಯಲ್ಲಿ ಕುಳ್ಳಿರಿಸುತ್ತಾರೆ. ಅಲ್ಲಿ ಗೋಡೆಯ ಮೇಲೆ ವಧೂವರರ ಹೆಸರನ್ನು ಭಸ್ಮದಿಂದ ಬರೆದಿರುತ್ತಾರೆ. ಅಲ್ಲಿಗೆ ಆಮೇಲೆ ಎರಡು ಮಣೆಗಳನ್ನು ತಂದು ಚಾಪೆಯ ಮುಂಭಾಗದಲ್ಲಿ ಇಡುತ್ತಾರೆ. ಅದರ ಮೇಲೆ ಹಾಲು, ನೀರುಗಳುಳ್ಳ ಗಿಂಡಿಗಳನ್ನು ತಂದು ಇರಿಸುತ್ತಾರೆ. ಬಂಧುಗಳು ವಧೂವರರ ಕೈಗಳನ್ನು ಅದಕ್ಕೆ ಮುಳುಗಿಸುತ್ತಾರೆ. ಇದು ವಧೂವರರ ನಾಚಿಕೆಯನ್ನು ತೆಗೆಯುವುದಕ್ಕೆ ಮಾಡುವ ನಿಯಮಗಳಾಗಿವೆ.

ಇದಾದಬಳಿಕ ವಧೂವರರನ್ನು ಮದುವೆಯ ಚಪ್ಪರದ ಕೆಳಗೆ ಉಪಚಾರದ ಬಗ್ಗೆ ಬೆಂಚಿನ ಯಾ ಕುರ್ಚಿಗಳ ಮೇಲೆ ಕುಳ್ಳಿರಿಸುತ್ತಾರೆ. ಅಲ್ಲಿ ಆರತಕ್ಷತೆ ಕ್ರಮ ನಡೆ

ಯುತ್ತದೆ. ಮುತ್ತೈದೆಯರೂ, ಬಂಧುಗಳನ್ನು ಅಕ್ಕಿಯಿಂದ ಸಮೀಪದ ದೀಪಕ್ಕೆ ಕೈ ಮುಗಿದು ವಧೂವರರ ಮೇಲೆ ಅಕ್ಷತೆ ಎಸೆಯುತ್ತಾರೆ. ಹಿರಿಯರೂ ಆಗ ಬಳುವಳಿಯಾಗಿ ವಸ್ತುಗಳನ್ನು ಮತ್ತು ಹಣವನ್ನ ಕೊಡುತ್ತಾರೆ. ಈ ರೀತಿ ಉಪಚಾರದ ಕಾರ್ಯಕ್ರಮವು ಮುಗಿದ ಬಳಿಕ, ಪಂಚಕನ್ನಿಕೆಯರು ವಧೂವರರಿಗೆ ಆರತಿ ಬೆಳಗುತ್ತಾರೆ. ವಿವಾಹದ ದಿನ ವಧೂವರರು ದೇವರಿಗೆ ಸಮಾನರಾಗುತ್ತಾರೆ ಎಂದು ಹಿಂದೂ ಧರ್ಮದ ತತ್ವವಾಗಿದೆ. ಆ ಬಳಿಕ ಊರ ಗೌಡನು ಮದುಮಕ್ಕಳನ್ನು ಅಲ್ಲಿಂದ ಎಬ್ಬಿಸಿ, ಬೇರೆಡೆ ಕುಳ್ಳಿರಿಸುವ ವ್ಯವಸ್ಥೆ ಮಾಡುತ್ತಾನೆ. ಆಮೇಲೆ ವಿವಾಹದ ಭೋಜನದ ಕಾರ್ಯಕ್ರಮವು ಪ್ರಾರಂಭವಾಗುವುದು. ಮನೆಯ ಯಜಮಾನನು ಊಟಕ್ಕೆ ಏಳುವಂತೆ ಒಂದು ಚೆಂಬಿನಲ್ಲಿ ನೀರು ತಂದು ಸಭೆಯ ಮುಂದೆ, ಊಟಕ್ಕೆ ಆಹ್ವಾನಿಸಿ, ನೀರನ್ನು ನೆಲದಲ್ಲಿ ಇಡುತ್ತಾನೆ.

ಆ ಬಳಿಕ ಚಪ್ಪರದ ಹೊರಗೆ ಇಟ್ಟ, ಹಂಡೆಗಳ ನೀರಿನಿಂದ ಸಭಿಕರು ತಮ್ಮ ಕೈಕಾಲು ಗಳನ್ನು ಶುದ್ಧಿಗೊಳಿಸಿ ಒಳಕ್ಕೆ ಬರುತ್ತಾರೆ. ಸಭೆಯಲ್ಲಿ ಸಾಲಾಗಿ ಇಟ್ಟ ಚಾಪೆ ಯಾ ಹಲಗೆಯ ಮೇಲೆ ಊಟಕ್ಕೆ ಕೂತುಕೊಳ್ಳುವರು. ಸಾಮಾನ್ಯವಾಗಿ ಭೋಜನಕ್ಕೆ ಮಾಂಸಾಹಾರವು ನಿಷಿದ್ಧವಾಗಿದೆ. ಪಾಯಸ, ಲಾಡು, ಹೋಳಿಗೆ, ಹಪ್ಪಳ, ಉಪ್ಪಿನಕಾಯಿ, ಕೆಲವು ಪಲ್ಯಗಳು ಊಟಕ್ಕೆ ತಯಾರಿಸುವರು. ಹೆಚ್ಚಾಗಿ ಅಕ್ಕಿಯ ಮತ್ತು ಹೆಸರಿನ ಪಾಯಸವು ಇರುತ್ತದೆ.

ಭೋಜನ ತೀರಿದ ಬಳಿಕ ಕೆಲವು ವಿನೋದ ಶಾಸ್ತ್ರಗಳನ್ನು ನೆರವೇರಿಸುತ್ತಾರೆ. ಉಂಗುರದಾಟ, ನಾಗೋಲೆ ಶಾಸ್ತ್ರ, ಬಾಗಿಲು ತಡೆಯುವುದು, ವರ ಮತ್ತು ವಧುವನ್ನು ಒಂದು ಕೋಣೆಯೊಳಗೆ ಹಾಕುವುದು ಇತ್ಯಾದಿ ಕ್ರಮಗಳನ್ನು ಕೆಲವೆಡೆ ಈಗಲೂ ಆಚರಿಸುತ್ತಾರೆ.

ಆ ಬಳಿಕ ಹೆಣ್ಣನ್ನು ಇಳಿಸಿಕೊಡುತ್ತಾರೆ. ಆಗ ಹೆಣ್ಣಿಗೆ ಬೋಧನೆ ಕೊಟ್ಟು, ವರನ ಕಡೆಯವರಿಗೆ ಎಚ್ಚರಿಕೆಯ ನುಡಿಗಳನ್ನು ವಧುವಿನ ಭಾಗದ ಹಿರಿಯನು ಹೇಳುತ್ತಾನೆ. ಆಗ ಹೆಚ್ಚಾಗಿ ಸುಮಂಗಲಿಯರು ಈ ಹಾಡನ್ನು ಹಾಡುತ್ತಾರೆ.

ಪ್ರೀತಿಯ ಜ್ಯೋತಿಯನು ಕುವರಿಯನು ಕುಸುಮವನು, ಕೈಯೆತ್ತಿ ಕೊಡುವ ಕುಲದೀಪವನ್ನೂ ಪ್ರೀತಿಯ ॥ ಪಲ್ಲ ॥ ತಾಯ್ಮನೆ ಬೆಳಗಿ ಸತಿಮಂದಿರವಾ, ಬೆಳಗಲು ಹೋಗುವ ಪ್ರೇಮದ ಕುವರಿಯ ನೀವು ಕೊಳ್ಳಿರಿ ಮನೆ ಮಗಳನು ॥೧॥ ಪ್ರೀತಿ ॥ ನಮ್ಮ ಹೂದೋಟದಿ ಬೆಳೆದ ರಳಿದ ಹೂವಾ ನಿಮ್ಮ ಮಡಿಲಲಿ ಇರಿಸುವೆವು । ಅಕ್ಕರೆಯಿಂದಲಿ ಚಿಕ್ಕಮಗಳನು ॥ ಪ್ರೀತಿ ॥ ಒಮ್ಮೆಗೆ ನಡೆನುಡಿ ತಪ್ಪಿದಗಮ್ಮಾ । ನಿಮ್ಮ ಮಗಳಂತೆ ಭಾವಿಸಮ್ಮಾ । ನಮ್ಮ ಮಗಳನು ನಿಮ್ಮವಳೀ ಎಂದು ॥ ಪ್ರೀತಿ ॥ ಪೋಗು ಪೋಗಲೆ ತಾಯಿ ಮಗಳೆ ಅಹಲ್ಯೆ । ನಾಗುಪತಿಯ ಮನೆ ಬೆಳಗಲಿಕೆ । ರಾಮಾಶಿವರು ಹರಸುತ ನಡೆಸಲೆ ॥ ಪ್ರೀತಿ ॥ ಸದಾ ಸುಖವ ನೀಡಲಿ ದೇವಾ । ಸೌಭಾಗ್ಯವ ನಿಮಗೆ । ದೀರ್ಘಾಯುಷ್ಯವ ನಿಮಗೆ ಸೌಭಾಗ್ಯವಾ । ಧರೆಯೊಳು ಯಶವಾತ್ಸರಿತದಿಗಳಿಗೆ ಧತೆಯೊಳು ಯೋಗವು ಒದಗಲಿ । ನಿಮಗೆ ದೀರ್ಘಾಯುಷ್ಯವಾ ಸೌಭಾಗ್ಯವ ನೀಡಲಿ ದೇವಾ ॥ ಪ್ರೀತಿ ॥ ಕೆಲವೆಡೆ ಎಮ್ಮ ಮನೆಯಂಗಳದಿ ಬೆಳದೊಂದು ಹೂವನ್ನು ನಿಮ್ಮ ಮಡಿಲೊಳು ಇರಿಸೆ ಬಂದಿರುವೆವು' ಎಂಬ ಹಾಡನ್ನು ಹಾಡುತ್ತಾರೆ.

ಆ ಬಳಿಕ ವರನ ಪಕ್ಷದವರು ಎದುರು ಬರುತ್ತಾರೆ. ವಧುವಿನ ಮನೆಯವರು ತಾವು ಕನ್ಯೆಗೆ ಕೊಡುವ ಬಳುವಳಿ ವಸ್ತುಗಳನ್ನು ಎದುರಿಗೆ ಇಟ್ಟು, ಅವುಗಳ ಪಟ್ಟಿಯನ್ನು ಸಭೆಯಲ್ಲಿ ಓದಿ ಹೇಳುವರು. ತರುವಾಯ ಕೆಲವು ವಚನ ವಾಗ್ದಾತ್ತಗಳನ್ನೂ ಹೇಳುವರು. ವಧುವಿನ ಕಡೆಯ ಹಿರಿಯವನು ವರನ ಕಡೆಯ ಕುಟುಂಬದ ಯಜಮಾನನಲ್ಲಿ ನಮ್ಮ ಬಾಲಕಿಯನ್ನು ರಕ್ಷಣೆ ಮಾಡುವವರು ಯಾರಯ್ಯಾ ಎಂದು ಪ್ರಶ್ನಿಸುತ್ತಾನೆ. ಆಗ ವರನ ಹಿರಿಯನು 'ನಾನಯ್ಯ' ಎನ್ನುತ್ತಾನೆ.

ಇದಾದ ಬಳಿಕ ವರನು ತನ್ನ ವಧುವನ್ನು ಕೂಡಿಕೊಂಡು ಹಿರಿಯರ ಪಾದಗಳಿಗೆ ವಂದಿಸಿ ಆಶೀರ್ವಾದ ಪಡೆಯಲು ತೊಡಗುವನು. ಜೊತೆಗೆ ಒಬ್ಬ ಹೆಂಗಸು

ಬಂಧುಗಳ ಪರಿಚಯವನ್ನು ವಧೂವರರಿಗೆ ಮಾಡಿಸುತ್ತಾ, ನಮಸ್ಕರಿಸಲು ಹೇಳುವಳು. ನಂತರ ವರನು ತನ್ನ ಧರ್ಮಪತ್ನಿಯೊಂದಿಗೆ ಹಾಗೂ ಹಿರಿಯರೊಂದಿಗೆ ತನ್ನ ಮನೆಗೆ ಹಿಂತಿರುಗುತ್ತಾನೆ. ಅಲ್ಲಿ ಆರತಿ ಬೆಳಗಿ ಮನೆ ಪ್ರವೇಶ ಮಾಡಿಸುತ್ತಾರೆ.

ವಿವಾಹ ಮುಗಿದ ಬಳಿಕ, ಒಂದು ವಾರ ಕಳೆದು ಯಾ ಅದಕ್ಕಿಂತ ಮುಂಚಿತವಾಗಿ ವಧುವು ನಿಶ್ಚಿತ ದಿನ ದಂದು ತವರು ಮನೆಗೆ ತುಪ್ಪ ಕೊಂಡು ಹೋಗುವ ಪದ್ಧತಿಯಿರುವುದು, ಸಾಧಾರಣ ಒಂದು ಸೇರು ದನದ ತುಪ್ಪ ಕೊಂಡು ಹೋಗಬೇಕು. ಆಗ ವರನ ಕಡೆಯಿಂದ ಕೆಲವು ಕುಟುಂಬದವರು ವಧೂವರರಜೊತೆಯಲ್ಲಿ ಪಯಣಿ ಸುತ್ತಾರೆ. ವಧುವಿನ ಕೈಯ್ಯಲ್ಲಿ ತುಪ್ಪ ಹಾಗೂ ಎರಡು ತೆಂಗಿನಕಾಯಿ ಇರುತ್ತದೆ.

ವಧುವಿನ ತವರು ಮನೆಗೆ ಮುಟ್ಟಿದ ಕೂಡಲೇ, ವಧೂವರರನ್ನು ಚಪ್ಪರದ ಪೂರ್ವಭಾಗದ ಬಾಗಿಲಲ್ಲಿ ನಿಲ್ಲಿ ಸುತ್ತಾರೆ. ಅಲ್ಲಿ ಸುಮಂಗಲೆಯರು ಆರತಿ ಬೆಳಗುತ್ತಾರೆ. ಆ ಬಳಿಕ ಮನೆಯೊಳಗೆ ವಧುವಿನ ಹಿರಿಯರು, ವಧೂವ ರರನ್ನು ಕೊಂಡೊಯ್ಯುತ್ತಾರೆ. ಅಲ್ಲಿ ಬಂಧುಗಳು ಅವ ರನ್ನು ಸತ್ಕರಿಸುತ್ತಾರೆ. ಕುಡಿಯಲು ಎಳೆನೀರು ಅಥವಾ ಹಾಲನ್ನು ಕೊಡುತ್ತಾರೆ. ಆ ಬಳಿಕ ಅನ್ನಾದಿಗಳನ್ನು ತಯಾರಿಸಿ, ರಾತ್ರೆ ಭೋಜನಕ್ಕೆ ಕುಳಿತು ಕೊಳ್ಳುವರು. ಭೋಜನಕ್ಕೆ ಪಾಯಸ ಇರುತ್ತದೆ. ಪಾಯಸ ಇಕ್ಕಿದ ಬಳಿಕ ವಧುವು ತಾನು ತಂದ ತುಪ್ಪವನ್ನು ಸಭೆಗೆ ಬಡಿಸು ತ್ತಾಳೆ. ಆ ಬಳಿಕ ಎಲ್ಲರೂ ಭೋಜನ ನೆರವೇರಿಸುವರು. ಮಾರನೇ ದಿನ ಬೆಳಿಗ್ಗೆ ಮದುಮಕ್ಕಳಿಗೆ ವಿಶೇಷ ಭೋಜನ ತಯಾರಾಗುತ್ತದೆ. ಆಗ ಮಾಂಸಾಹಾರದ ಪದಾರ್ಥವನ್ನು ಮಾಡುತ್ತಾರೆ. ದೋಸೆ, ಇಡ್ಲಿ ಮುಂತಾದ ಹಿಟ್ಟು ತಯಾರಿಸುತ್ತಾರೆ. ರೊಟ್ಟಿ, ಹಸಿ ಮೀನು ಮತ್ತು ಕೋಳಿಯ ಪದಾರ್ಥಗಳು ಭೋಜನಕ್ಕೆ ಇರುತ್ತವೆ. ಹೆಚ್ಚಾಗಿ ಕೋಳಿಯ ಮೇಲೋಗರ ಮಾಡು ವುದು ಈ ಸಮಾಜದಲ್ಲಿನ ಪದ್ಧತಿಯಾಗಿದೆ. ಇದಾದ ಬಳಿಕ ವಿಶ್ರಾಂತಿ ಪಡೆದು, ವಧೂವರರು ತಮ್ಮ ಮನೆಗೆ ವಾಹನದ ಮೂಲಕ ಯಾ ನಡೆದು ಹೋಗುವರು. ಬಂಧು ಗಳು ತಂತಮ್ಮ ಮನೆಗಳಿಗೆ ಅವರಿಗೆ ಯಶಸ್ಸನ್ನು ಕೋರಿ, ಹಿಂತೆರಳುವರು.

---

- ಕಳೆದ ಯೌವನವನ್ನು ಮರಳಿ ಪಡೆಯುವುದು, ನಮ್ಮ ಹುಚ್ಚಾಟಗಳನ್ನು ಪುನರಾವರ್ತಿಸಿದರಾಯಿತು.

**—ಆಸ್ಕರ್ ವೈಲ್ಡ್**

- ಸೋರುವ ಮನೆಯಲ್ಲಿ ಮಳೆ ಬೀಳುವಂತೆ, ಬಿಗಿ ಹಿಡಿಯದ ಮನಸ್ಸಿನಲ್ಲಿ ಆಸೆಯು ಒಳ ನುಗ್ಗುತ್ತದೆ.

**—ಭಗವಾನ್ ಬುದ್ಧ**

ಸಂಗ್ರಹಿಸಿದವರು : **ಕುಮಾರಿ ಕೂರನ ಭಾಗೀರಥಿ**
ಕುಂಜಳದಾಳು



ವರ ವಧುವಿಗೆ ಮಾಂಗಲ್ಯ ಕಟ್ಟುವುದು



ವಧುವರರಿಗೆ ಆರತಕ್ಷತೆ ಮಾಡುತ್ತಿರುವುದು



ವರ ವಧುವಿಗೆ ಪುಷ್ಪಹಾರ ಹಾಕುವುದು



ವಧುವರನಿಗೆ ಪುಷ್ಪ ಹಾರ ಹಾಕುವುದು

(ಚಿತ್ರ ಕಳುಹಿಸಿದವರು ಡಾ॥ ಕೆ. ವೀರಪ್ಪಗೌಡರು, ಬೆಂಗಳೂರು, ಶ್ರೀ ತಿರಕಜೆ ಪಾಪಯ್ಯನವರು ಬಿ.ಎಸ್‌ಸಿ., ಬೆಂಗಳೂರು,
ಕುಮಾರಿ ಕೂಡಕಂಡಿರ ಪುಷ್ಪವತಿ ಬಿ.ಎ., ಮಡಿಕೇರಿ

# ಗೌಡರ ಮೊದುವೆ

ಲೇಖಕರು : **ಶ್ರೀ ಹೊದ್ದಟ್ಟಿ ಭವಾನಿ ಶಂಕರ್‌ರವರು**

---

(ಶ್ರೀ ಹೊದ್ದಟ್ಟಿ ಭವಾನಿ ಶಂಕರ್‌ರವರು ಬೆಂಗಳೂರಿನ ಭಾರತ್ ಎಲೆಕ್ಟ್ರಾನಿಕ್ಸ್ ಕಾರ್ಖಾನೆಯಲ್ಲಿ ಉದ್ಯೋಗದಲ್ಲಿದ್ದಾರೆ. ಶ್ರೀ ಭವಾನಿ ಶಂಕರ್, ಶ್ರೀ ಕೂಡ ಕಂಡಿರ ಪೊನ್ನಪ್ಪನವರು ಮತ್ತು ಶ್ರೀ ಕುಲ್ಲಚನ ಕಾರ್ಯಪ್ಪನವರು ಅರೆ ಭಾಷೆಯಲ್ಲಿ ಪದ್ಯ ರಚಿಸಿದವರಲ್ಲಿ ಮೊದಲಿಗರು. ಶ್ರೀ ಭವಾನಿ ಶಂಕರ್‌ರವರು ಕನ್ನಡದಲ್ಲಿ ಪ್ರಾರ್ಥನೆ, ತಾಯ್ನಾಡ ರಕ್ಷಣೆಗೆ ಹೋರಾಟದ ಕರೆ, ಬೆಡಗಿನ ನಾಡು ಕೊಡಗು, ಒಂದಾದೆವು ನಾವು ಬೆಂಗಳೂರಿನಲ್ಲಿ ಮುಂತಾದ ಕವನಗಳನ್ನೂ ಬರೆದು ಕಳೆದ ಸಂಚಿಕೆಯಲ್ಲಿ ಪ್ರಕಟಗೊಂಡಿವೆ. ಅರೆ ಭಾಷೆಯಲ್ಲಿ ಅಂಬಾಡಿನ ಕಥೆ, ಪ್ರಾರ್ಥನೆ, ದ್ಯಾಪನ ಗದ್ದೆ ಗೋರಿ ಜೋಮನ ಕೋಳಿಕಟ್ಟ, ಅಜ್ಜಿ ಸಾಂಕಿದ ಮಂಞ....ಆಕಿಲೆ, ಗೌಡರ ಮೊದುವೆ ಒಗ್ಗಟ್ಟ್ ನಮ್ಮಲ್ಲಿ ಲ್ಲಿಟ್ಟ್ ಎಂಬ ಕವನಗಳನ್ನೂ ತುಳು ಭಾಷೆಯಲ್ಲಿ ದಾಯೇ ಪೋಡಿಪೆಯಾ, ಆಣ್ ಆವ್ರ ಪೊಣ್ಣ್ ಅಂಗರನ ಪಂಜಿ ಜೋಂಟಿ ಮೊದಲಾದ ಕವನಗಳನ್ನು ಬರೆದು ಮೂರು ಭಾಷೆಯಲ್ಲಿ ಕವನವನ್ನು ರಚಿಸಿದ ಒಬ್ಬ ತ್ರಿಭಾಷಾ ಕವಿಗಳಾಗಿದ್ದಾರೆ.

ಶ್ರೀ ಭವಾನಿ ಶಂಕರ್‌ರವರು ಗೌಡರ ಮದುವೆಯ ಕವನವನ್ನು ಬರೆದು ಗೌಡರ ಮದುವೆಯ ಚಿತ್ರವನ್ನು ಸೂಕ್ಷ್ಮವಾಗಿ ಕವಿತಾ ರೂಪದಲ್ಲಿ ಸಮಾಜ ಜನರಿಗೆ ಅರ್ಪಿಸಿದ್ದಾರೆ. ಪದ್ಧತಿಗಳ ವಿಷಯ ಲೇಖನಗಳನ್ನು ಬರೆಯುವುದೇ ಕಷ್ಟ ಅದನ್ನು ಕವನವನ್ನಾಗಿ ಬರೆಯುವುದು ಇನ್ನೂ ಕಷ್ಟ ಅದರಲ್ಲೂ ಅರೆ ಭಾಷೆಯಲ್ಲಿ ಕವನ ರಚಿಸಿ ನಮ್ಮ ಜನರ ಮದುವೆ ಪದ್ಧತಿಯನ್ನು ಸ್ವಾರಸ್ಯವಾದ ರೀತಿಯಲ್ಲಿ ರಚಿಸಿದ ಶ್ರೀ ಭವಾನಿ ಶಂಕರ್‌ರವರ ಕವಿತಾಚಾತುರ್ಯವನ್ನು ಕೊಂಡಾಡ ತಕ್ಕದಾಗಿದೆ. ಶ್ರೀ ಭವಾನಿ ಶಂಕರ್‌ರವರು ರಚಿಸಿರುವ ' ಪೋಟಿ ಗೂಡೆನ ಮದುವೆ, ಅಜ್ಜಿ ಸಾಂಕಿದ ಮಂಞ, ಅಂಗರನ ಪಂಜಿ ಜೋಂಟಿ ಕವನಗಳಲ್ಲಿ ಹಳ್ಳಿಯ ಸಾಮಾನ್ಯ ಜನಜೀವನದ ಆಗು ಹೋಗುಗಳ ನೈಜ ಚಿತ್ರವನ್ನು ಬಣ್ಣಿಸಿದ್ದಾರೆ. ಯುವಕರಾದ ಶ್ರೀ ಭವಾನಿ ಶಂಕರರಿಗೆ ತಕ್ಕ ಪ್ರೋತ್ಸಾಹ ದೊರೆತರೆ ಕನ್ನಡ, ಅರೆ ಭಾಷೆ ಮತ್ತು ತುಳುಭಾಷೆಗಳಲ್ಲಿಒಬ್ಬ ಶ್ರೇಷ್ಠ ಕವಿಯಾಗಿ ಕನ್ನಡಮ್ಮನ ಶ್ರೇಷ್ಠ ಕುವರನಾಗಿ ಕನ್ನಡ ಕವಿ ಶ್ರೇಷ್ಠರ ಸಮೂಹದಲ್ಲಿ ಆದಷ್ಟು ಬೇಗನೆ ಸೇರಿ ಕೊಳ್ಳುವರೆಂಬುದರಲ್ಲಿ ಸಂಶಯವೇ ಇಲ್ಲ.

ಸಂ.)

---

ಗೌಡ ಜನಾಂಗದ ಮೊದುವೆ ಕ್ರಮನ
ಅರೆ ಭಾಸೆಲಿ ಪದ್ಯನ ಬರಿಯೊಕುಂತ
ಯಾರೆಲ್ಲ ನಂಗೆ ಒತ್ತಾಯಮಾಡ್ದೊ
ಬರ್ದೀ ಬುಟ್ಟಿನ ನೋಡೊಮುಂತ ॥

ಸಂಗತಿ ನಮ್ಮರೆ ಭಾಸೆಲಿ ಬರೆಕೊರೆ
ಬಾರಿನೆ ಉಟ್ಟು ಕಷ್ಟಾಂತ ।
ಇನ್ನೊಂದುಕಡೆ ತೊಪ್ಪನು ಇದ್ದರೆ
ಹೆದ್‍ರಿಕೆನಂಗಾದೆ ಬೊಯ್ಯುವಂತ ॥

ಹೇಂಗೂ ಇಲ್ಲದೆ ಸುರುಮಾಡಿನು ಆತ್
ನಮ್ಮರೆ ಭಾಸೆನ ಬುಡಿಕೆಲೆಂತ ।
ಮೊದುವೆನ ಕ್ರಮ ಇದ್ ತೊಪ್ಪಾಗಿದ್ದರು
ಬ್ಯೊಬಡಿ ನೀವೆಲ್ಲ ನಂಗೆಂತ ॥

ಪ್ರಾಯಕೆ ಬಾಕನ ಗೂಡೆಗು ಹೈದಂಗು
ಮೊದುವೆನ ಮಾಡುವ ಕ್ರಮ ಉಟ್ಟು
ಹಿರಿಯರ ಜತೆಗೆ ಗಂಡುನು ಹೋಗಿ
ಗೂಡೆನ ಹುಡುಕವೆ ಎಲ್ಯುಟ್ಟು ॥

ಗೂಡೆನ ನೋಡಿದ್ ಹೈದನ ಕೇಳಿವೆ
ನೋಡ್‍ದ ಗೂಡೆದ್ ಹೇಂಗುಟ್ಟು.
ಗೂಡೆಗೂ ಕೇಳಿವೆ ಗಂಡನು ಇವನೆ
ಒಪ್ಪಿಯಂತಾದರೆ ಹೂಂ ಕುಟ್ಟ್ ॥

ಗೂಡೆಗೆ ಹೇಳಿಕೆ ನಾಚಿಕೆ ಆದರೆ
ಹೇಳ್ಸಿಕೆ ಒಂದದ್ ಕಿಣಿ ಉಟ್ಟು
ಎಲೆ ಹಸಿ ಅಡ್ಕೆನ ತಿಂಬಕೆ ತೊಟ್ಟವೆ
ಉಪಾಯ ನೋಡಿದ್ ಹೇಂಗುಟ್ಟು ? ॥

ಎಲೆ ಹಸಿ ಅಡ್ಕೆನ ತಿಂದರೆ ಅರ್ಥ
ಗೂಡೆಗೂ ಕೂಡಾ ಮನ್ಸುಟ್ಟು ।
ಇಲ್ಲೆಂತಾದರೆ ಬಂದವುಕೆಲ್ಲ
ಬಾಯಿ ಬುಟ್ಟ್ ಹೇಳೊಕುಂತೇನ್ಸುಟ್ಟು ॥

ತಾರವು ಗೂಡೆನ ಕೊಟ್ಟವೆಂತಾಕನ
ಕಂಡಿತ ಮಾಡುವ ಕ್ರಮ ಉಟ್ಟು ।
ಕಂಡಿತ ಆದರೆ ಕುಟುಂಬದ ಜನಕೆ
ಗಂಡ್‍ನೆ ಎಲಾಡ್ಕೆನ ಕೊಡಿಕುಟ್ಟು ॥

ಗಂಡ್‍ನ ಮನೆವು ದಿಬ್ಬಣದೊಟ್ಟಿಗೆ
ಗೂಡೆನ ಮನೆಗೆ ಹೋಕುಟ್ಟು ।
ಗೂಡೆನ ಮನೆಗೆ ಬಂದ್‍ದ್‍ಗಂಡ್
ಮೊದುವೆನು ಆದದ್ ಹೆಚ್ಚಿಟ್ಟು ॥

ಚಪ್ಪರದಡಿಗೆ ಬಾಕನ ಗಂಡ್‍ಗೆ
ನೀರ್‍ಲಿ ಪೂಜೆನ ಮಾಡಿಕುಟ್ಟು ।
ಗೂಡೆನ ತಮ್ಮನೆ ನೀರ್‍ನ ತಂದ್
ಗಂಡ್‍ನ ಕಾಲ್‍ಗೆ ಹೊಯ್ಯಿಕುಟ್ಟು ॥

ಆರತಿ ಎತ್ತಿದ್ ಹೆಂಗ್‍ಸ್‍ಗಾಗ
ಗಂಡ್‍ನ ಒಳಗೆ ಕರೆಕುಟ್ಟು ।
ಹೆಣ್ಣ್‍ಗೆ ಕಟ್ಟವೆ ತಾಳಿನ ಕೂಡಾ
ಗಂಡ್‍ನ ಕಡೆವು ತಾಕುಟ್ಟು ॥

ಗೂಡೆಗೆ ರವ್ಕೆ ಸೀರೆನ ಎಲ್ಲ
ಗಂಡಂವ ಮುಂದೆನೆ ಕೊಡಿ ಕುಟ್ಟು ।
ಬೆಳ್ಳಂಗೆ ಸೀರೆ ಉಟ್ಟುದ್ ಗೂಡೆ
ಕೊಂಬರೆ ಒಳಗೆ ಕುದ್ದುಟ್ಟು ॥

ಗೂಡೆನ ಹೈದನ ಕರ್ಕಂಡ್‍ಬಂದವೆ
ಚಪ್ಪರದಡಿ ಮಂಟಪಕೆ ।
ಆಗಳೆ ನೋಡಿ ಕರ್ದವೆ ಹೇಳಿ
ಗೊತ್ತಾಕುಂತದು ಎಲ್ಲೊವುಕೆ ॥

ಗೌಡ ಜನಾಂಗಲಿ ಇರಿಕೆನು ಉಟ್ಟು
ದಾರೆನ ಮೊದುವೆ ಎರಡ್ ತರ
ನಮ್ಮ ಈ ಗೌಡರ ಕೂಟಲಿ ನಡಿದು
ಹೆಚ್ಚಿಗೆ ಒಂದೇ ಒಂದ್ ತರ ॥

ನಾಡ್‌ನೆ ಮೂಡ್‌ನ ದಿಕ್ಕಲಿ ಆದು
ಹಾರಂವ ಇದ್ದ್ ಇದೊಂದ್ ತರ ।
ಪಟ್ಟೇದಾರನು ಅಪ್ಪನೆ ಆಗಿ
ಪೊಡ್ವಲಿ ಇದ್ ನಿನ್ನೊಂದು ತರ ॥

ಪಟ್ಟೇದಾರನು ಹಾರಂವ ಆದರೆ
ಹೇಳಿನೆ ನಡಿದದು ಹೇಂಗೆಂತ ।
ಬಿಂಗಾರೆ ಹೂವುಲಿ ಸಿಂಗಾರ ಮಾಡುದು
ಮೊದುವೆಗೆ ಎಲ್ಲದ್ ಬೇಕುಂತ

ಎರಡೂ ಕಡೆಗಾ ಮೂಡಕು ಪೊಡ್ವಕು
ಹಾರಂವ ಅಕ್ಕಿನ ಹರ್ದುದುಂತ ।
ಮೂಡಂದ ಗಂಡು ಪಡ್ವಂದ ಹೆಣ್ಣುನು
ಎರಡ್ ಕಡೆಬ್ಬೊರೂ ಅವು ನಿಲ್ಲಿಕೆಂತ ॥

ಆಗಳೆ ಇಬ್ಬರ ನಡುಲಿನು ಬಂದ್
ಬೆಳ್ಳಂಗೆ ಸಾಲ್‌ನ ಹಿಡ್ದವೆಂತ ।
ಗೂಡೆನೆ ಆಗ—ಗಂಡ್‌ನ ಗಂಟ್ಲ್‌ಗೆ
ಹೂಮಾಲೆನ ಒಂದರ ಹಾಕುದುಂತ ॥

ನೋಡಿರೆ ಅಲ್ಲಿ ಗೂಡೆನ ಕೈಲಿ
ಗಂಡ್‌ನ ಕಯ್ಯಿನ ಮೊಡ್ಗಿವೆಂತ
ಇಬ್ಬರ ಕಯ್ಯಿನ ಹಾಂಗೆನೆ ಹಿಡ್ಡ್
ಮಾಡಿವೆ ನೋಡಿನಿ ಎಂತದಿಂತ ॥

ಇಬ್ಬರ ಕಯ್ಯಿಗು ಹಾರಂವ ಧಾರೆನ
ಹೊಯ್ಯುದು ಸರ್ತಿ ಮೂರ್‌ಂತ ।
ಕಯ್ಯಿಂದ ಕೆಳಗೆ ಹಿಡ್ದವೆ ಆಗ
ಹೊಳಿಯುವ ಹೊಸಹರಿವಾಣನಂತ ॥

ಈಗಳೆ ನೋಡಿ ಗೂಡೆನ ಗಂಟ್ಲ್‌ಗೆ
ಗಂಡಂವ ಕಟ್ಟುದು ತಾಳಿನಂತ ।
ಆಗಳೆ ನೋಡಿ ಮರ್ದುದು ಹೆಣ್ಣ್
ಗೊತ್ತ್‌ಲೆ ನಂಗದ್ ಯಾಕೆಂತ ॥

ಗಂಡುನು ಹೆಣ್ಣ್‌ನು ಮಂಟಪ ಸುತ್ತ
ಬಂದವೆ ಕೈ ಕೈ ಹಿಡ್ದ್ಂತ ।
ಗೂಡೆನ ಅಪ್ಪನೆ ಆಗಳೆ ಬಂದ್
ಕರ್ಕಂಡ್ ಮನೆ ಒಳೆಗೋದೆಂತ ॥

ಉಂಬಕೆ ಕುದ್ದವೆ ಆಗಳೆ ಎಲ್ಲಾ
ಚಪ್ಪರ ದಡಿ ಜನ ಎಷ್ಟ್ಂತ ।
ಒಂದೊಂದಂತಿಲಿ ಇದ್ದವೆ ಆರರ
ಬಲಗಡೆ ಸೊನ್ನೆ ಎರಡ್‌ಂತ ॥

ಅಪ್ಪದ ಹಿಟ್ಟುಳಿದೋಸೆನ ಎಲ್ಲಾ
ಜೋಡ್ಸಿವೆ ಜನಗಳಿಗಿಕ್ಕಿಕೆಂತ ।
ಹಂದಿನೊ ಕುರಿನೊ ಗೈಪುನ ಮೆಲ್ಲ
ಅಂಡೆಂದ ತೋಂಡಿವೆ ತಿಂಬಕೆಂತ ॥

ಕಡಾಯ ತುಂಬ ಪಾಯ್ಸನು ಇರ್ದು
ತರ ತರ ಎಡ್ಡೋ ಮೂರ್‌ಂತ ।
ಕುದ್ದವು ಎಲ್ಲಾ ಉಂಬೊವು ಎಲ್ಲಾ
ಬೆಗರ್‌ನ ಅಂಗಿಲಿ ಉಜ್ಜಿದ್‌ಂತ

ಮೊದುವೆನುಕ್ಳ್ತ್ ಉಂಡುದು ಆತ್
ಹೆಣ್ಣ್‌ನ ಕರ್ಕಂಡ್ ಹೋದವೆಂತ ।
ಹೆಣ್ಣ್‌ನ ಕರ್ಕಂಡ್ ಹೋಕನ ಮನೆವು
ತುಂಬಾ ಬುದ್ದಿನ ಹೇಳಿವೆಂತ ॥

ದಿಬ್ಬಣಲೆಣ್ಣ್‌ನ ಕರ್ಕಂಡೋಗಿ
ತಿರ್ಗಿದ್ ಅವು ಪುನ ಬಾಕನಂತ
ತುಪ್ಪದ ಚೊಂಬುನ ತಂದವೆ ಮನೆಗೆ
ಹೆಣ್ಣ್‌ನ ಕಯ್ಯಿಲೆ ಒಡ್ಸದ್‌ಂತ ॥

ಮೊದುವೆನು ಈಗ ಮುಕ್ತ್ಂತೇಳಿಕೆ
ಮಿಯ್ಯಿಕೆ ಉಟ್ಟುನಾ ಗೋಳಿನಂತ ।
ಗೂಡೆನು ಈಗ ಗಂಡನ ಮೈಗೆ
ಅರಸಿನ ಎಣ್ಣೆನ ಉಜ್ಜೊಕುಂತ

ಇನ್ನವರಾಟ ಅಂಡೆಲಿನೋಡಿ
ಉಂಂಗಿಲ ಸೀರೆಗೆ ಹಾಕಿದ್ಂತ
ಅಂಡೆಲಿ ಇಬ್ಬೊರು ಹುಡ್ಕಿವೆ ಬೇಗ
ಉಂಗಿಲ ಯಾರಿಗೆ ಸಿಕ್ಕುದುಂತ ||

ಪೂಜೆಗೆಂತೇಳಿ ಮಾಡಿದ ಪಾಯ್ಸನ
ಗಂಡ್‌ಗೆ ಹೆಣ್ಣ್‌ನ ಇಕ್ಕೊಕುಂತ |
ಗಂಡಂದ್ ಉಂಡ್‌ದ್ ಆದಾಬಾಳ್ಲೆಲಿ
ಹೆಣ್ಣ್‌ನು ಆಗಳೆ ಉಣೊಕುಂತ ||

ನಮ್ಮ ಈ ಜನಾಂಗದ ಮೊದುವೆನುಕಳ್ಳ್
ಮೊದುವೆಗೆ ಬಂದವು ಹೋದೊಂತ |

ಹೆಣ್ಣದ್ ಹೊಸಮನೆ ಸೇರಿದ್ ಸೆನ್ನಿದೆ
ಜಗಳನೆ ಮಾಡದೆ ಇಡೊಕುಂತ ||

ನ್ಯಾಯ ಪ್ರಕಾರಲೆ ಅಂದ್‌ನ ಜನಂಗ
ಮೊದುವೆನ ಗೌಜಲಿ ಆದವೆಂತ |
ಇಂದ್‌ನ ಮಕ್ಕಳು ಮೊದುವೆ ಆದವೆ
ಹೇಳದೆ ಅಪ್ಪಂಗೆ ಅಪ್ಪಂಗೆಂತ ||

ಮೊದುವೆನ ಕ್ರಮನಾ ಪೂರನೆ ಬರ್ದರೆ
ಪುಸ್ತಕ ಒಂದರ ಮಾಡೆಕ್ಂತ |
ಪೂರನಾ ಬರ್ತ್‌ಲೆ ಪುಸ್ತಕಲಿಲ್ಲಿ
ಎಡೆ ಎಡೆ ಬುಟ್‌ನಾ ಬಂದೇ‌ರ್ಂತ ||



# ಸತ್ತವರಿಗೆ ನಡೆಸುವ ಸಂಸ್ಕಾರಗಳು

(ಕೊಡಗಿನಲ್ಲಿ ನಡೆಸುವ ಪದ್ಧತಿಗಳು)

ಲೇಖಕರು : ಡಾ|| ಗುಡ್ಡೇರ ಪಿ. ಗಣಪತಿ

ಒಂದು ಮನೆಯಲ್ಲಿ ಯಾರಾದರೊಬ್ಬರು ಸತ್ತರೆ ಹನ್ನೊಂದು ದಿವಸ ಸೂತಕ. ಒಂದು ಕಡೆ ಸಂಬಂಧಿಕರು "ಸ್ವರ್ಗಕ್ಕೆ ಹೋಗು, ಸ್ವರ್ಗಕ್ಕೆ ಹೋಗು"— ಎಂದು ಗೋಳಾಡುತ್ತಾ ಹೆಣದ ಬಾಯಿಗೆ ನೀರು ಬಿಡುತ್ತಾರೆ, ಕೂಡ್ಲೆ ಅಲ್ಲಿದ್ದವರು ಜೋಡು ಗುಂಡುಗಳನ್ನು ತುಫಾಕಿಯಿಂದ ಹಾರಿಸುತ್ತಾರೆ. ಕೂಡ್ಲೆ ನೆಂಟರುಗಳಿಗೂ ಊರಿನವರಿಗೂ ವರ್ತಮಾನ ಕೊಡುತ್ತಾರೆ. ಅವರೆಲ್ಲರೂ ಬಂದು ಬಾಯಿಗೆ ನೀರು ಬಿಟ್ಟು ಮೇಲೆ ಹೇಳಿದಂತೆ ಸ್ವರ್ಗಕ್ಕೆ ಹೋಗೆಂದು ಹೇಳುತ್ತಾರೆ. ನಂತರ ಊರಿನವರು ಕತ್ತಿ ಕೊಡಲಿ ತೆಗೆದುಕೊಂಡು ಸ್ಮಶಾನದ ಕಾಡಿಗೆ ಹೋಗಿ ಚಿತೆಯನ್ನು ತಯಾರಿಸುತ್ತಾರೆ. ಹೆಣವನ್ನು ಸ್ನಾನ ಮಾಡಿಸಿ ಮಲಗಿಸುತ್ತಾರೆ. ನಂತರ ಮೃತನ ಸಂಸಾರಸ್ಥರು, ಕೈಕಾಲು, ಮುಖ ತೊಳೆದುಕೊಂಡು ಬಂದು "ರಾಮ, ರಾಮ" ಎಂದು ಹೇಳುತ್ತಾ ಆ ಶವಕ್ಕೆ ಮೂರು ಸುತ್ತು ಪ್ರದಕ್ಷಿಣೆ ಬರುತ್ತಾರೆ. ಆಮೇಲೆ ತುಂಬಾ ಗೋಳಾಡುತ್ತಾ ಹೆಣವನ್ನು ಊರಿನವರು ಸ್ಮಶಾನಕ್ಕೆ ಹೊತ್ತು ಕೊಂಡು ಹೋಗಿ ಹೆಣವನ್ನು ಅಲ್ಲಿಯ ಚಿತೆಗೆ ಮೂರು ಸುತ್ತು ತಂದು ಚಿತೆಯ ಮೇಲೆ ಇಟ್ಟು ಗಂಧದ ಸೌದೆ ಮೊದಲಾದುವುಗಳನ್ನು ಇಟ್ಟು ಬೆಂಕಿ ಹಚ್ಚುತ್ತಾರೆ. ಮೃತನ ಆತ್ಮವು ಚಿತೆಯಲ್ಲಿ ಬೇಯುತ್ತಿರುವ ತನ್ನ ದೇಹವನ್ನು ನೋಡಿ ತುಂಬಾ ದುಃಖ ಪಡುತ್ತಾ ದೂರದಲ್ಲಿ ನಿಂತಿರುತ್ತದೆಂದು ಹೇಳುವರು. ಪುರಂದರದಾಸರ ವಚನದಂತೆ–"ಅರ್ಥ ಯಾರಿಗೆ, ಪುತ್ರರ್‍ಯಾರಿಗೆ, ಮಿತ್ರ ಬಾಂಧವರ್‍ಯಾರಿಗೆ ಕರ್ತು ಯಮನರು ಎಳೆದು ಒಯ್ವಾಗ ತೊಳಲಿ ಬೀಳ್ವದುನಾಲಿಗೆ." ಆಗ "ಮಂಚ ಬಾರದು ಮಡದಿ ಬಾರದು ಸಂಚಿತಾರ್ಥದ ದ್ರವ್ಯ ಬಾರದು; ಕಂಚು ಕನ್ನಡಿ ಬಾರದು, ಮುನ್ನ ಮಾಡಿದ ಧರ್ಮವು". ಹಾಗೆ ಒಬ್ಬ ಮನುಷ್ಯನು ಸತ್ತರೆ ಅವನ ಆಸ್ತಿಪಾಸ್ತಿಗಳು ಇರುವುದಿಲ್ಲ. ಹೆಂಡತಿ ಮಕ್ಕಳು ಬರುವುದಿಲ್ಲ ಆವನು ಮಾಡಿದ ದಾನಧರ್ಮಗಳು ಮಾತ್ರ ಅವನ ಮುಂದಿನ ಜನ್ಮಕ್ಕೂ ಬಂದು ಕಷ್ಟಕಾಲದಲ್ಲಿ ಪರಿ ಹರಿಸುತ್ತವೆ. ಆ ಜನ್ಮವನ್ನು ಸುಖದ ಬಾಳ್ವೆ ಎಂದು ಜ್ಞಾನಿಗಳು ಹೇಳುತ್ತಾರೆ.

**ಶುದ್ಧ :** ಇದನ್ನು ಮೃತಪಟ್ಟ 3, 5 ಅಥವಾ 7 ದಿವಸದಂದು ನೆರವೇರಿಸುತ್ತಾರೆ. ಆ ದಿವಸ ನೆಂಟರು, ಊರಿನವರು ಎಲ್ಲರೂ ಬಂದು ಸೇರಿ ಮನೆಯನ್ನು ಶುದ್ಧ ಮಾಡಿ ಅಲ್ಲಿಯೆ ಒಂದು ಗುಂಡಿಯನ್ನು ತೋಡಿ ಈ ಚಿತಾ ಭಸ್ಮವನ್ನು ಅದರೊಳಗೆ ತುಂಬಿ ಮೇಲಕ್ಕೆ ಸ್ವಲ್ಪ ಎತ್ತರವಾಗಿಟ್ಟು ಅದರಲ್ಲು ಹೆಚ್ಚಿಗೆ ಉಳಿದ ಬೂದಿಯನ್ನು ನದಿಗೆ ಹಾಕಿಬಿಡುತ್ತಾರೆ. ಇಲ್ಲಿ ಮನೆಯಲ್ಲಿ ನೆರೆಮನೆ ಹೆಂಗಸರು ಮನೆಯ ಹೊರಭಾಗದ ಕೊಟ್ಟಿಗೆಯಲ್ಲಿ ಹೆಸರು, ಕಡ್ಲೆ ಪಾಯಸ, ಅನ್ನ, ಬಾಳೆಕಾಯಿ ಹುರುಳಿ ಸೇರಿಸಿ ಒಂದು ಸಾರು, ಬೂದುಗುಂಬಳದಿಂದ ಇನ್ನೊಂದು ಸಾರು, ಮತ್ತು ಬೇರೆ ತಿಂಡಿಗಳನ್ನು ತಯಾರಿಸುತ್ತಾರೆ. ಸ್ಮಶಾನದ

ಕೆಲಸ ಮುಗಿಸಿ ಬಂದಕೂಡ್ಲೆ ಈ ಮೇಲ್ಕಂಡ ಊಟಕ್ಕೆ ತಯಾರಿಸಿದ ಪದಾರ್ಥಗಳನ್ನು ಸ್ವಲ್ಪಸ್ವಲ್ಪವಾಗಿ ತೆಗೆದು ಕೊಂಡು ಹೋಗುತ್ತಾರೆ. ಹೆಣದ ಕೂಳನ್ನು-ಅನ್ನಕ್ಕೆ ಅರಿಸಿನ, ಸುಣ್ಣ ಮಿಶ್ರ ಮಾಡಿದ ಅನ್ನವನ್ನು-ದೀಕ್ಷೆಗೆ ನಿಂತ ಮನುಷ್ಯ ಹೊತ್ತುಕೊಂಡಿರುತ್ತಾನೆ. ಕುಟುಂಬ ಸ್ತರು ಅವನ ಪಾತ್ರೆಯಿಂದ ಒಂದೊಂದು ಹಿಡಿ ತೆಗೆದು ಕೊಂಡು ದೂಪೆಗೆ ಮೂರು ಸುತ್ತು ಬರುವವರೆಗೂ ದೂಪೆಯ ಸುತ್ತ ಚೆಲ್ಲುತ್ತಾ ಬರುತ್ತಾರೆ. ನಂತರ ಸತ್ತವ ವನಿಗೆ ಸ್ವರ್ಗ ಹೊಂದಿಸುತ್ತಾರೆ. ಇದನ್ನು ಒಬ್ಬ ಮನು ಷ್ಯನು ಹೇಳುತ್ತಾನೆ. ನಂತರ ದೀಕ್ಷೆಗೆ ನಿಂತವನು ಸ್ವರ್ಗಕ್ಕೆ ಹೋಗೆಂದು ಬಟ್ಲನ್ನು ಕವಚಿ ಹಾಕಿ ಅಡ್ಡ ಬೀಳುತ್ತಾನೆ, ನಂತರ ಎಲ್ಲರೂ ವಾಪಾಸು ಬರುತ್ತಾರೆ. ಮನೆಯ ಮುಂದುಗಡೆ ಅಂಗಳದಲ್ಲಿ ಊರವರು, ನೆಂಟರು ಬಂದು ಸಾಲಾಗಿ ನಿಲ್ಲುತ್ತಾರೆ. ಹಾಗೆಯೇ ಮನೆಯವರೆಲ್ಲರೂ ಬಂದು ಸಾಲಾಗಿ ನಿಲ್ಲುತ್ತಾರೆ. ಅಗಸರವನು ಅಕ್ಕಿಯನ್ನು ಕಾರನೀರು (ಚವುಳು)ನ್ನು ಹಾಕುತ್ತಾನೆ. ನಂತರ ಇನ್ನೊಬ್ಬರು ಪುಣ್ಯಾರ್ಚಣೆ ಹಾಕುತ್ತಾರೆ. ಅನಂತರ ಎಲ್ಲವರಿಗೂ ಊಟ ಹಾಕುತ್ತಾರೆ.

**ತಿಥಿ** :—ಯಾರಾದರೊಬ್ಬರು ಸತ್ತು 11ನೇ ದಿವಸದಲ್ಲಿ ಮೃತನ ಹೆಸರಿನಲ್ಲಿ ಅಲ್ಲಿಗೆ (ಆ ಮನೆಗೆ) ಬಂದ ಎಲ್ಲಾ ಜನರಿಗೂ ಒಂದು ಊಟ ಹಾಕುತ್ತಾರೆ. ಎಂದರೆ ಮೃತನ ಹೆಸರಿನಲ್ಲಿ ಅನ್ನದಾನ ಮಾಡುತ್ತಾರೆ.

**ಪಿಂಡ ಹಾಕುವುದು** :—ಶುದ್ಧದ ದಿವಸದಂದು ದೀಕ್ಷಿತನು ತಲೆ, ಗಡ್ಡ, ಮೀಸೆಗಳನ್ನು ಬೋಳಿಸಿ ಮೃತ ನಿಗೆ ದೀಕ್ಷೆ ನಿಲ್ಲುತ್ತಾನೆ. ಕಾವೇರಿಯಂತಹ ಪುಣ್ಯ ಕ್ಷೇತ್ರ ದಲ್ಲಿ ತಲೆ, ಗಡ್ಡ, ಮೀಸೆಯನ್ನು ಬೋಳಿಸಿ ಸ್ನಾನಮಾಡಿ ಪುರೋಹಿತರಲ್ಲಿ ಶಾಸ್ತ್ರಯುಕ್ತವಾಗಿ ಪಿಂಡ ಹಾಕುತ್ತಾನೆ, ಎಂದರೆ ಸತ್ತವನಿಗೆ ಸ್ವರ್ಗಲೋಕದ ಗತಿ (ಮೋಕ್ಷ) ಹೊಂದಿಸುವುದೆಂದು ಹೇಳುತ್ತಾರೆ. ಇದರ ವಿಷಯವಾಗಿ ಒಂದು ಸಣ್ಣ ಕಥೆ ಇದೆ. ಹಿಂದಿನ ಕಾಲನಲ್ಲಿ ಒಬ್ಬ ರಾಜ ಕುಮಾರನು ಬೇಟೆ ಆಡಲಿಕ್ಕೆ ದೊಡ್ಡ ಘೋರಾರಣ್ಯಕ್ಕೆ ಹೋದನಂತೆ. ಅಲ್ಲಿ ಬೇಟೆಯಾಡಿ ಸೋತು, ದಣಿವು ಆರಿಸಲಿಕ್ಕೆ ಒಂದು ಮರದ ಬುಡಕ್ಕೆ ಬಂದು ನೆರಳಲ್ಲಿ ನಿದ್ರೆ ಹೋದನಂತೆ. ಇವನಿಗೆ ಎಚ್ಚರವಾಗಬೇಕಾದರೆ ರಾತ್ರಿ ಎಷ್ಟೋ ಸಮಯ ಕಳೆದು ಹೋಯಿತು. ಆ ಹೊತ್ತಿನಲ್ಲಿ ಆ ಘೋರಾರಣ್ಯದಲ್ಲಿ ವಾಸ ಮಾಡುತ್ತಿದ್ದ ಒಂದು ರಣ ಭೂತವು ಆರ್ಭಟಿಸುತ್ತಾ ಇವನ ಸಮೀಪಕ್ಕೆ ಬಂದು ಈ ರಾಜಕುಮಾರನನ್ನು ತಿನ್ನಲಿಕ್ಕೆ ಪ್ರಯತ್ನಿಸುತ್ತಾ ಇರುವ ಸಮಯದಲ್ಲಿ ರಾಜಕುಮಾರನಿಗೆ ಎಚ್ಚರವಾಗಿ ಈ ಭಯಂಕರ ರೂಪದಿಂದ ಕೂಡಿದ ಈ ರಣಭೂತವನ್ನು ಆಶ್ಚರ್ಯದಿಂದ ನೋಡಿದನು. ಉದ್ದವಾದ ಕೋರೆ ದಾಡೆ ಗಳು, ನೀಳವಾಗಿ ಬಿಟ್ಟಿದ್ದ ಕೇಶ ರಾಶಿಗಳು ಹಾಗೂ ಗಡ್ಡ ಮೀಸೆಗಳು ಒಂದು ಮೊಳದಷ್ಟು ಉದ್ದಕ್ಕೆ ಹೊರಚಾಚಿದ ನಾಲಿಗೆ, ಬೆಂಕಿಯ ಕೆಂಡದಂತೆ ಉರಿಯುತ್ತಿದ್ದ ಕಣ್ಣುಗಳು. ರಾಜಕುಮಾರನು ಭೀತಿ ಪಡೆದ ಆ ರಣಭೂತವನ್ನು ಕುರಿತು ನೀನ್ಯಾರೆಂದು ಪ್ರಶ್ನಿಸಿದನು. ಅದಕ್ಕೆ ಆ ರಣ ಭೂತವು ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸಿ ಕಣ್ಣೀರು ಸುರಿಸುತ್ತಾ ಅಪ್ಪಾ ರಾಜಕುಮಾರನೇ ನನ್ನ ಕತೆಯನ್ನು ಹೇಳುತ್ತೇನೆ, ಕೇಳು : "ನಾನು ಒಂದಾ ನೊಂದು ಕಾಲದಲ್ಲಿ ನಿನ್ನಂತೆ ಒಬ್ಬ ರಾಜಕುಮಾರನಾಗಿ ದ್ದೆನು. ಆಕಸ್ಮಿಕವಾಗಿ ಮರಣ ಹೊಂದಿದೆನು. ಆದರೆ ನನ್ನ ಸಂಬಂಧಿಕರು ಎಲ್ಲಿಯೋ ದೇಶ ಸಂಚಾರಕ್ಕೆ ಹೋಗಿರಬಹುದೆಂದು ಭಾವಿಸಿದರು. ಆ ಕಾರಣದಿಂದ ಸತ್ತವರಿಗಾಗಿ ಮಾಡಬೇಕಾದ ತಿಥಿ, ಕರ್ಮಗಳನ್ನು ಮಾಡಲಿಲ್ಲ; ಪುಣ್ಯ ಕ್ಷೇತ್ರಗಳಲ್ಲಿ ಪಿಂಡ ಇಡಲಿಲ್ಲ; ಆ ಕಾರಣದಿಂದ ನನಗೆ ಈ ರಣಭೂತದ ಜನ್ಮ ಪ್ರಾಪ್ತ ವಾಯಿತು. ಗತಿ ಮೋಕ್ಷ ಸಿಕ್ಕಲಿಲ್ಲ. ಆದುದರಿಂದ ನನ್ನನ್ನು ನಿನ್ನ ಒಡಹುಟ್ಟಿದವನೆಂದು ಭಾವಿಸಿ ನನಗಾಗಿ ಈಗಿನಿಂದ ನೀನು ಒಂದು ತಿಂಗಳವರೆಗೆ ದೀಕ್ಷೆ ಬಿಟ್ಟು ಪುಣ್ಯಕ್ಷೇತ್ರದಲ್ಲಿ ಪಿಂಡ ಹಾಕಬೇಕು "ಎಂಬುದಾಗಿ ವಿನಯ ಭಕ್ತಿಯಿಂದ ಆ ರಣಭೂತವು ಕೇಳಿಕೊಂಡಿತು. ರಾಜಕುಮಾರನು ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಅಂದಿನಿಂದ ಅವನು ರಣಭೂತ ಜನ್ಮದಲ್ಲಿದ್ದವನಿಗೆ ಎಲ್ಲಾ ಕ್ರಿಯೆಗಳನ್ನು ಮಾಡಿ ಒಂದು ತಿಂಗಳಲ್ಲಿ ದೀಕ್ಷೆಯನ್ನು ತಳೆದು ಪುಣ್ಯಕ್ಷೇತ್ರದಲ್ಲಿ ಪಿಂಡ ಇಟ್ಟನು. ಆಮೇಲೆ ರಣ ಭೂತವಾಗಿದ್ದು ರಾಜಕುಮಾರನಿಗೆ ಗತಿ, ಮೋಕ್ಷ ಸಿಕ್ಕಿ ಸ್ವರ್ಗಸುಖವನ್ನು ಅನುಭವಿಸಿದನು.

**ದೀಪಾವಳಿ:**—ಒಂದು ಕುಟುಂಬದಲ್ಲಿ ಸತ್ತವರಿಗೆ ದೀಪಾವಳಿ ಹಬ್ಬದಲ್ಲಿ ಅನ್ನ ಹಾಕುತ್ತಾರೆ. ಗಂಡು ಸತ್ತಿದ್ದರೆ ದೀಪಾವಳಿ ಅಮಾವಾಸ್ಯೆ ಕಳೆದ ಮಾರನೆ ದಿವಸ ಅವಲಕ್ಕಿ, ಬಾಳೆಹಣ್ಣು ಇವುಗಳಿಂದ ಎಡೆ ಹಾಕುತ್ತಾರೆ. ಹೆಣ್ಣು ಮೃತಪಟ್ಟದ್ದರೆ ಅಮವಾಸ್ಯೆ ದಿವಸ ಮೇಲ್ಕಂಡ ರೀತಿಯಲ್ಲಿ ಎಡೆ ಹಾಕುತ್ತಾರೆ. ಸಾಯದ ಮನೆಗಳಲ್ಲಿ ದೀಪಾವಳಿಯನ್ನು ಯಾರೂ ಪ್ರತಿವರ್ಷ ಆಚರಿಸುವುದಿಲ್ಲ. ಆದರೆ ನಮ್ಮ ಜನಾಂಗದಲ್ಲಿ ಪ್ರತಿವರ್ಷ ಮಿಥುನ ಮಾಸ (ಕಾರು ತಿಂಗಳು)ದಲ್ಲಿ ಸತ್ತವರಿಗೆ ಎಡೆ ಹಾಕುತ್ತಾರೆ. ಕೊಡಗಿನ ಗೌಡುಗಳು ಇದನ್ನು ವಿಶೇಷವಾಗಿ ಆಚರಿಸುವುದಿಲ್ಲ. ನರಕ ಚತುರ್ಥಿ, ಬಲಿಪೂಜೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಆಚರಿಸುತ್ತಾರೆ.

Performance of one's duty should be independent of Public opinion.

—Mahatma Gandhi

The most important thing for a nation is to produce men and women, good and true.

—Pandit Nehru

# ಸತ್ತವರಿಗೆ ನಡೆಸುವ ಸಂಸ್ಕಾರಗಳು

(ದಕ್ಷಿಣ ಕನ್ನಡ ಜಿಲ್ಲೆಯ ಕಡೆಯಲ್ಲಿರುವ ಪದ್ಧತಿ)

ಲೇಖಕರು : **ಶ್ರೀ ಶಿವರಾಮ ಮೂಲೆಮಜಲು**

ನಮ್ಮ ಗೌಡ ಸಮಾಜದಲ್ಲಿ ಸಾಂಪ್ರದಾಯಕವಾದ ಹಲವಾರು ಹಾಡುಗಳು, ಕಟ್ಟುನಿಟ್ಟುಗಳು, ಪರಂಪರೆಯಾಗಿ ನಡೆದುಬಂದಿವೆ, ಹಾಗೂ ಆಚರಣೆಯಲ್ಲಿವೆ :—

ಉದಾ :—ಹುಟ್ಟಿದ ಮಗುವನ್ನು ತೊಟ್ಟಿಲಲ್ಲಿ ಡುವಲ್ಲಿಂದ, ಹಿಡಿದು ಹೆಣ್ಣುಮಕ್ಕಳು ಮದುವೆಯಾಗುವಾಗ, ಕಡೆಗೆ ಕೊಟ್ಟವನು ಕೊಂಡುಹೋಗುವಾಗ, ಈ ಎಲ್ಲಾ ನಡತೆ ನಿಯಮಗಳಿಗೆ ಬೇರೆ ಬೇರೆ ಕಾರ್ಯಕ್ರಮಗಳನ್ನು ಆಚರಿಸುವಾಗ ಹಲವಾರು ನಾಣ್ನುಡಿಗಳನ್ನು ಹೇಳುತ್ತಾರೆ. ಅದರಲ್ಲಿಯೂ ಸತ್ತವರಿಗೆ ಸ್ವರ್ಗ ಪ್ರಾಪ್ತಿ ಮಾಡುವ ಕ್ರಮವೂ ಒಂದು. ಈ ವಿಷಯವು ಕೂಡಾ ನಮ್ಮ ಪರಂಪರೆಯಾಗಿ ಬಂದಿದೆಯೆಂದು ಹೇಳಬಹುದು.

## ೧. ಮೃತಪಟ್ಟ ದಿನ

ಮೃತಪಟ್ಟ ಕೂಡ್ಲೆ ನೆರೆಯವರಿಗೆ ತಿಳಿದಿರಲಿ ಯೆಂಬಂತೆಯೂ, ದೇವರಲ್ಲಿ ಆತ್ಮವು ಐಕ್ಯವಾಗಲಿ ಯೆಂಬಂತೆಯೂ, ಆಕಾಶಕ್ಕೆ ತುಪಾಕಿಯಲ್ಲಿ ಗುಂಡನ್ನು ಹಾರಿಸುತ್ತಾರೆ ಮತ್ತು ಜೀವ ಹೋದ ಸ್ಥಳದಲ್ಲಿ ಮನೆಯ ಮಾಡನ್ನು ತೂತುಮಾಡಿ ಒನಕೆಯನ್ನು ಬಿಸಾಡುತ್ತಾರೆ. ಆಮೇಲೆ ನೆರೆಯವರು ನೆಂಟರು, ಎಲ್ಲವರೂ ಬಂದು ಸೇರುತ್ತಾರೆ. ಬಂದು ಸತ್ತವನ ಬಾಯಿಗೆ ತುಳಸಿ ನೀರನ್ನು ಕೊಡುತ್ತಾರೆ. ನಂತರ ಊರು ಗೌಡರು ಹೆಣವನ್ನು ಸುಡಲಿಕ್ಕೆ ಬೇಕಾಗುವಷ್ಟು ಸೌದೆಯನ್ನು ಉರಿಸುತ್ತಾರೆ. ಆಮೇಲೆ ಹೆಣವನ್ನು ಶಾಸ್ತ್ರೋಕ್ತವಾಗಿ ಸ್ನಾನಮಾಡಿಸಿ ಬಿಳಿಬಟ್ಟೆಯನ್ನು ಹೊದಿಸಿ ಚಟ್ಟದಮೇಲೆ ತೆಂಕು, ಬಡಗು ಮುಖಮಾಡಿ ಮಲಗಿಸುತ್ತಾರೆ. ಮೃತಪಟ್ಟ ಸಂಗ್ತಿಯನ್ನು ಕೇಳಿದವರು ನೆಂಟರು, ಬಿಳಿ ಬಟ್ಟೆಯನ್ನು ತಂದು ಹೊದಿಸುತ್ತಾರೆ ಮತ್ತು ಹಣೆಗೆ ಹಣವನ್ನು ಅಂಟಿಸುತ್ತಾರೆ, ಹತ್ತಿರವೇ ಒಂದುದೀಪವನ್ನು ಉರಿಸುತ್ತಾರೆ. ಆಮೇಲೆ ಚಟ್ಟಕ್ಕೆ ಎಲ್ಲವರೂ "ನಾರಾಯಣಾ, ನಾರಾಯಣಾ," ಎಂದು ದೇವರ ನಾಮವನ್ನು ಸ್ಮರಣೆ ಮಾಡುತ್ತಾ ಐದು ಯಾ ಒಂಭತ್ತು ಸುತ್ತು ಬಂದ ನಂತರ ನೆರೆಯವರು ಕಾಲಿನ ಕಡೆಯಿಂದಲೂ, ಮನೆಯವರು ತಲೆಯ ಕಡೆಯಿಂದಲೂ, ಹಿಡಿದು ಹೊತ್ತುಕೊಂಡು ವಾದ್ಯ ಗೋಷ್ಠಿಯಿಂದ ಸ್ಮಶಾನಕ್ಕೆ ನಡೆಯುತ್ತಾರೆ. ಅಲ್ಲಿ ಹೆಣವನ್ನು ಸೌದೆಯ ನಿರಿಪಿನ ಮೇಲಿರಿಸಿ ಕಾಲು ಕಡೆಯಿಂದ ನೆರೆಯವರು ತಲೆಕಡೆಯಿಂದ ಮನೆಯವರು ಬೆಂಕಿ ಕೊಟ್ಟು ಚೆನ್ನಾಗಿ ಉರಿಯುವವರೆಗೆ ಅಲ್ಲಿಯೇ ಇದ್ದು ನಂತರ ಹಿಂದಿರುಗಿ ಬರುತ್ತಾರೆ.

## ೨. ಕೊಳ್ಳಿ ಕೊಡುವುದು

ಇಂದಿಗೆ ಸತ್ತವನ ಎರಡನೆಯ ದಿನ. ಇದಕ್ಕೆ ನಮ್ಮ

ಶಾಸ್ತ್ರ ಪ್ರಕಾರ ಕೊಳ್ಳಿ ಕೊಡುವುದು, ಅಂದ್ರೆ ಹೊತ್ತದೆ ಇರುವ ಭಾಗಗಳನ್ನು ಒಟ್ಟುಗೂಡಿಸಿ ಪುನಹ ಉರಿಸುವ ಕ್ರಮವೆನ್ನುತ್ತಾರೆ.

### ೩. ಮೂರರ ಶುದ್ಧ, ಬೂದಿ ಮುಚ್ಚುವುದು

ಇಂದು ಮೃತನ ಮೂರನೆಯ ದಿನ. ಈ ಮೂರನೆಯ ದಿನಕ್ಕೆ ಮೂರರ ಶುದ್ಧಯೆಂದು ಹೇಳುತ್ತಾರೆ. ಈ ದಿನ ಊರಿನ ಮಡಿವಾಳ ಬರಬೇಕು. ನೆರೆಯವರು ಮನೆಯವರು ಎಲ್ಲರೂ ಸೇರಿ ಚೂಟು ಕಳಕ್ಕೆ ಹೋಗುತ್ತಾರೆ. ಮೊದಲು ಮಡಿವಾಳ ಆ ಬೂದಿಯನ್ನು ಶುದ್ಧ ಮಾಡುತ್ತಾನೆ. ಆ ಬೂದಿಯನ್ನು ತಲೆಕಡೆಯದು ಬೇರೆ, ಕಾಲು ಕಡೆಯುದ್ದು ಬೇರೆ. ಹೀಗೆ ವಿಂಗಡಿಸಿ ಮಧ್ಯದಲ್ಲಿ ಒಂದು ಹೊಂಡವನ್ನು ತೆಗೆಯುತ್ತಾರೆ. ಬೇರೆ, ಬೇರೆ ಮಾಡಿದ ಬೂದಿಯನ್ನು ಕ್ರಮ ಪ್ರಕಾರ ಹೊರಡುವುದರೊಳಗೆ ತುಂಬಿ ಮುಚ್ಚಿದ ನಂತರ. ಉಳಿದ ಬೂದಿಯನ್ನು ಮೇಲುಗಡೆ ದೂಪೆಯನ್ನು ಮಾಡುತ್ತಾರೆ. ಆ ದೂಪೆಯ ಸುತ್ತು ಸರಳಿಮರದ ಕೊನೆಗಳನ್ನು ನೆಡುತ್ತಾರೆ. ಇದರ ಸೂಚನೆ ತಂಪುನೆರಳನ್ನು ಸದಾ ಕೊಡುತ್ತಿರಲಿಯೆಂದು.

### ೪. ಇಂದಿಗೆ ಮೃತನ ಒಂಭತ್ತನೆಯ ದಿನಾಚರಣೆ

ಈ ದಿನವನ್ನು ನೀರು ನೆರಳಲಿಗೆ ಇಡುವುದು ಎಂದು ಹೇಳುತ್ತಾರೆ. ಈ ಕ್ರಮಕ್ಕೆ ಬೇಕಾಗುವ ವಸ್ತುಗಳು :-

ಎಳೆನೀರು, ಅರಸಿನದ ನೀರು. ಬೆಲ್ಲದ ನೀರು, ಮದ್ಯ, ನೂಲು, ಬೂದಿ, ದೀಪ,

### ಇಡುವ ಕ್ರಮ

ಜೀವ ಹೋದ ಸ್ಥಳದಲ್ಲಿ ಬೂದಿಯನ್ನು ಚೆನ್ನಾಗಿ ಹರಡಿ ನಂತರ ತೂತು ಮಾಡಿದ ಎಳೆನೀರನ್ನು ಇಟ್ಟು, ನೂಲಿನ ಒಂದು ತುದಿಯಿಂದ ಅರಸಿನದ ತುಂಡನ್ನು ಕಟ್ಟಿ ತೂತುಮಾಡಿದ ಎಳೆನೀರಿನ ಒಳಗೆ ಇಟ್ಟು ಇನ್ನೊಂದು ತುದಿಯನ್ನು ಮೇಲುಗಡೆಗೆ ಕಟ್ಟುತ್ತಾರೆ. ಎಲ್ಲ ವಸ್ತುಗಳನ್ನು ಕ್ರಮ ಪ್ರಕಾರ ಇಟ್ಟಾದ ಮೇಲೆ, ಮನೆಯವರೆಲ್ಲರೂ ಒಳಗಡೆ ನುಗ್ಗುತ್ತಾರೆ. ಅವರಲ್ಲಿ ಒಬ್ಬನು ಮನೆಯ ಜಗುಲಿಯಲ್ಲಿ ನಿಂತು ಮೃತನ ಹೆಸರು ಹೇಳಿ, ನೀರು ನೆರಳಿಗೆ ಇಟ್ಟದ್ದೇವೆ ಬಂದು ಹೋಗು ಎಂದು ಮೂರು ಬಾರಿ ಹೇಳಿ ತುಂಬಿದ ಕೋವಿಯಿಂದ ಗುಂಡನ್ನು ಆಕಾಶಕ್ಕೆ ಹಾರಿಸಿ ಅವನೂ ಒಳಕ್ಕೆ ನುಗ್ಗಿಕೊಳ್ಳುತ್ತಾನೆ. ಇದರ ಅರ್ಥ ಸತ್ತವನು ಕಷ್ಟದಲ್ಲಿಲ್ಲದೆ ಸುಖವಾಗಿದ್ದರೆ ನೀರನ್ನು ಕುಡಿದು ಹೋಗುತ್ತಾನೆಯೆಂಬೊಂದು ನಂಬಿಕೆ.

### ೫. ದೂಪೆಯನ್ನು ಅಲಂಕರಿಸುವ ಕ್ರಮ

ದೂಪೆಯ ಸುತ್ತಲೂ ಬಿದಿರಿನಿಂದ ಕೋಟೆಯನ್ನು ಕಟ್ಟಿರುತ್ತಾರೆ. ಆ ಕೋಟೆಗೆ ತೆಂಕು, ಬಡಗು, ಎರಡು ದ್ವಾರಗಳನ್ನು ಇಡುತ್ತಾರೆ. ಆ ದ್ವಾರದಲ್ಲಿ ಬಾಳೆ ಮರವನ್ನು ತೋರಣವಾಗಿ ಕಟ್ಟುತ್ತಾರೆ. ಆ ಕೋಟೆಯ ಸುತ್ತಲೂ ಮಾವಿನೆಲೆಯ ಮಾಲೆ ಮಾಡಿ ಪೋಣಿಸಿರುತ್ತಾರೆ. ದೂಪೆಯ ಮೇಲ್ಗಡೆ ಮಡಿವಾಳನು ಬಿಳಿ ಬಟ್ಟೆಯನ್ನು ಹೊದಿಸಿರುತ್ತಾನೆ. ಆ ದೂಪೆಯ ಎದುರುಗಡೆ ನೆಂಟರು ತಂದಿರುವ ತಿಂಡಿ, ಎಳನೀರು, ಇವುಗಳನ್ನೆಲ್ಲಾ ಇಟ್ಟಿರುತ್ತಾರೆ. ಇದು ದೂಪೆಯ ಒಂದನೆಯ ಕಾರ್ಯಕ್ರಮ.

ಮನೆಯಲ್ಲಿ ಸತ್ತವನನ್ನು ಮಲಗಿಸಿದ ಸ್ಥಳದಲ್ಲಿ ಒಂದು ಚಟ್ಟವನ್ನು ಮಾಡಿ ಅದಕ್ಕೆ ಬಿಳಿ ಬಟ್ಟೆಯನ್ನು ಹೊದಿಸಿ ಒಂದು ನಂದಾದೀಪವನ್ನು ಉರಿಸಿಟ್ಟು, ನಂತರ ಮನೆಯವರು, ಎಲ್ಲರೂ ಮಡಿಯನ್ನು ಉಟ್ಟು, ಆ ಚಟ್ಟಕ್ಕೆ ಸುತ್ತುಬರುತ್ತಾರೆ. ಸುತ್ತು ಬರುವಾಗ "ನಾರಾಯಣಾ, ನಾರಾಯಣಾ," ಎಂದು ದೇವರ ಸ್ಮರಣೆ ಮಾಡುತ್ತಾ ಐದು ಯಾ ಒಂಭತ್ತು ಸುತ್ತು ಬಂದು ನಿಲ್ಲುತ್ತಾರೆ. ನಂತರ ಆ ಚಟ್ಟವನ್ನು ಹೆಗಲಮೇಲಿರಿಸಿ ಹೊತ್ತುಕೊಂಡು ವಾದ್ಯಗೋಷ್ಠಿಯಿಂದ ಸ್ಮಶಾನಕ್ಕೆ ಹೋಗುತ್ತಾರೆ. ಅಲ್ಲಿ ತೋರಣದ ದ್ವಾರದಲ್ಲಿ ಒಳಕ್ಕೆ ನುಗ್ಗುತ್ತಾರೆ. ಆಗ ಮಡಿವಾಳನು ಅಕ್ಕಿಯನ್ನು ಕೊಡುತ್ತಾನೆ. ಆ ಅಕ್ಕಿಯನ್ನು ಎಡದ ಕೈಯಲ್ಲಿ ಹಿಡಿದು ದೂಪೆಗೆ "ನಾರಾಯಣಾ,

ನಾರಾಯಣಾ, " ಎಂದು ಹೇಳಿಕೊಂಡು ಸುತ್ತು ಬಂದು ಎಲ್ಲವರೂ ತೋರಣದ ಹೊರಗಡೆ ಬಂದು ನಿಲ್ಲುತ್ತಾರೆ. ತೆಗೆದುಕೊಂಡು ಹೋದ ಚಟ್ಟವನ್ನು ತುಡಿನಾಡಿ ತೆಂಕು ಬಡಗು ದಿಕ್ಕುಗಳಿಗೆ ಬಿಸಾಡುತ್ತಾರೆ.

## ೬. ಸ್ವರ್ಗಕ್ಕೆ ಸಲ್ಲಿಸು ಕ್ರಮ

ಆಗೊಬ್ಬರು ಈ ಕೆಳಗಿನಂತೆ ಹೇಳುತ್ತಾರೆ :— "ಬ್ರಹ್ಮಲಿಪಿಯಂತೆ ಹೆತ್ತು ಹೊತ್ತವರ ಮನೆಗೆ ಎರವಾಗಿ ಪತಿಯ ಮನೆಗೆ ನೆರವಾದೆ. ಪತಿಯೇ ಗತಿಯೆಂದು ಸೇವೆಯನ್ನು ಸಲ್ಲಿಸಿದೆ. ಬೇಕಾದಷ್ಟು ಅಷ್ಟೈಶ್ವರ್ಯದಿಂದ ಬಾಳಿ ಬದುಕಿದೆ, ಮೆರೆದೆ. ಮಕ್ಕಳನ್ನೂ ಮೊಮ್ಮಕ್ಕಳನ್ನೂ ಪಡೆದೆ ಅಲ್ಲದೆ ಮನೆಗೆ ಬಂದವರಿಗೆ ಹೊಟ್ಟೆ ನೋಡಿ ಅನ್ನ ಕೊಟ್ಟೆ, ತಲೆ ನೋಡಿ ಎಣ್ಣೆ ಕೊಟ್ಟೆ, ಮೈ ನೋಡಿ ಬಟ್ಟೆ ಕೊಟ್ಟೆ, ಸರ್ವವಿಧಗಳಿಂದಲೂ ದಾನ ಧರ್ಮ ನಾಡಿ ಕೀರ್ತಿಯಿಂದ ಬಾಳಿ ಬದುಕಿದೆ. ಆದ್ರೆ ಇಂದಿಗೆ, ಚಿಗುರೆಲೆ ಕಾಯಿಲೆಯಾಗಬೇಕು, ಕಾಯೆಲೆ ಹಣ್ಣೆಲೆಯಾಗಬೇಕು, ಹಣ್ಣೆಲೆ ಉದರಬೇಕು, ಎಂಬ ಸೃಷ್ಟಿ ನಿಯಮದಂತೆ, ಬಂಧುಗಳನ್ನು, ಮಕ್ಕಳನ್ನು, ಅಷ್ಟೈಶ್ವರ್ಯವನ್ನು ಬಿಟ್ಟು ಜೀವಮಾನದಿಂದ ಅಂತ್ಯಗೊಂಡೆ. ನಾಡನ್ನು ಬಿಟ್ಟು ಕಾಡನ್ನು ಸೇರಿದೆ, ಆತ್ಮವು ಪರಮಾತ್ಮನಲ್ಲಿ ಮಿಲನವಾಯಿತು.

ಪರಮಾತ್ಮನ ವಶವಾದ್ರ ಕೊಡ್ಲೆ ಸರ್ವರಿಗೂ ತಿಳಿದಿರಲಿಯೆಂಬಂತೆಯೂ, ದೇವರಲ್ಲಿ ಐಕ್ಯವಾಗುವ ಸೂಚನೆಯಂತೆಯೂ ಗುಂಡನ್ನು ಆಕಾಶಕ್ಕೆ ಹಾರಿಸುವರು. ಆಮೇಲೆ ನೆರೆಕೆರೆಯವರು ಬಂದು ತುಳಸೀ ನೀರನ್ನು ಕೊಟ್ಟರು. ಊರು ಗೌಡರು ದಹನಕ್ಕೆ ಬೇಕಾಗುವಷ್ಟು ಸೌದೆ ತಯಾರುಮಾಡಿದರು. ನಂತ್ರ ಶಾಸ್ತ್ರೋಕ್ತವಾಗಿ ಮೃತ ದೇಹವನ್ನು ಸ್ನಾನಮಾಡಿಸಿ ಮಡಿಯನ್ನು ಉಡಿಸಿ ಮತ್ತು ಹೊದಿಸಿ ಚಟ್ಟದ ಮೇಲೆ ಇರಿಸಿ ತಲೆ ಕಡೆಯಿಂದ ಮನೆಯವರು, ಕಾಲು ಕಡೆಯಿಂದ ನೆರೆಯವರು ಹೊತ್ತುಕೊಂಡು ಹೋಗಿ ತಲೆ ಕಡೆಯಿಂದ ಮನೆಯವರು, ಕಾಲು ಕಡೆಯಿಂದ ನೆರೆಯವರು ಬೆಂಕಿ ಕೊಟ್ಟು ಉರಿಸಿದರು, ಅಂದಿನಿಂದ ನಿನ್ನ ದೇಹವು ಭೂಮಿಗೆ ಗೊಬ್ಬರವಾಗಿಯೂ, ಆಕಾಶಕ್ಕೆ ಹೊಗೆಯಾಗಿಯೂ ಪರಿವರ್ತನೆಗೊಂಡಿತು.

ಇಂದು ನೀನು ಇಹಲೋಕವನ್ನು ಬಿಟ್ಟ ಹನ್ನೊಂದನೆಯ ದಿನವಾಗಿದೆ. ಹಾಗೆ ನಾವೆಲ್ಲರು ನಿನ್ನ ಆತ್ಮಕ್ಕೆ ಶಾಂತಿಯನ್ನು ಕೋರಲಿಕ್ಕಾಗಿ, ಇಲ್ಲಿ ಬಂದು ನೆರೆದಿದ್ದೇವೆ. ಆದ್ರೆ ನಿನ್ನ ಪ್ರಾಣವು ಮೃತ್ಯುವಿನಿಂದಲೋ ಅಥವಾ, ಅಪಮೃತ್ಯುವಿನಿಂದಲೋ ಹಾರಿಹೋಯ್ತು. ಇನ್ನು ಮುಂದೆ ಕಷ್ಟಗಳಿಗೆ ಸಿಗದೆ ಯಾವ ರೀತಿಯಲ್ಲಿ ಇಹದಲ್ಲಿ ಇರುತ್ತಿದ್ದಿಯೋ, ಅದೇ ರೀತಿ ಪರದಲ್ಲಿಯೂ ಪರಮಾತ್ಮನಲ್ಲಿ ಐಕ್ಯಗೊಳ್ಳು ಎಂದು ಹರಸುತ್ತೇವೆ. ಮತ್ತು ಇನ್ನು ಮುಂದಿನ ಜನ್ಮದಲ್ಲಿ ಅಗಸನ ಕಲ್ಲಾಗಿ ಹುಟ್ಟಬೇಡ, ದಾರಿ ಬದಿಯ ಮರವಾಗಬೇಡ, ಬ್ರಾಹ್ಮಣರ ಆಳಾಗಬೇಡ, ಗಾಡಿ ಎತ್ತಾಗಬೇಡ. ಇಂತಹ ಜನ್ಮವನ್ನು ತೊರೆದು ಬಾಳೆದಿಂಡಿನ ಪಾಲದಲ್ಲಿ, ನೂಲಿನ ಕೈತಾಂಗಿನಲ್ಲಿ ಸ್ವರ್ಗಕ್ಕೇ ಹೋಗು ಎಂದು ನಿನ್ನ ಮನೆಯವರೂ, ನೆಂಟರು, ಬಂಧುಗಳೂ ನೆರೆಯವರನೂ ಎಲ್ಲವರೂ ಹರಸುತ್ತೇವೆ. ಸ್ವಗಕ್ಕೇ ಹೋಗು, ಸ್ವರ್ಗಕ್ಕೆ ಹೋಗು; ಸ್ವರ್ಗಕ್ಕೇೕ ಹೋಗು "



# ಶ್ರೀ ವೆಂಕಟರಮಣದೇವರ ಹರಿಸೇವೆ

ಲೇಖಕರು : ಡಾ|| ಗುಡ್ಡೀರ ಪಿ. ಗಣಪತಿ, ಬಲಮುರಿ

ಇದು ನಮ್ಮ ಕುಲಗುರು ಆದ ವೆಂಕಟರಮಣ ಸ್ವಾಮಿಗೆ ಕಾಲಕಾಲಕ್ಕೆ ಆಯಾಯ ಕುಟುಂಬಗಳಲ್ಲಿ ಹಬ್ಬದಂತೆ ಆಚರಿಸಬೇಕಾದ ಒಂದು ನಿಯಮ. ಆದರೆ ನಮ್ಮ ಪೂರ್ವಕಾಲದಿಂದಲೂ ನಡೆದುಕೊಂಡು ಬಂದ ಪದ್ಧತಿ ಹೇಗೆಂದರೆ, “ಸಂಕಟ ಬಂದಾಗ ವೆಂಕಟರಮಣ, ಸಂಕಟ ಹರಿಧ ಮೇಲೆ ಬಿಂಕದ ರಮಣ.” ಹಾಗೆಂದರೆ ಕಾಯಿಲೆ ಬೇರೆ ತರವಾದ ಅನೇಕ ಬಾಧಕಗಳು ಒಬ್ಬನಿಗೆ ಬಂದಲ್ಲಿ “ಒಳ್ಳೆದು ಮಾಡು ದೇವರೆ, ನಿನಗೆ ಹರಿಸೇವೆ ಮಾಡುತ್ತೇನೆ; ನಿನ್ನ ದೂತರಿಗೆ ೪ ಕಾಲು ಬೇಟೆ ಒಪ್ಪಿಸುತ್ತೇನೆ ; ನಿನ್ನ ಮುಡಿಪಿಗೆ ಎರಡು ಕೈಗೆ ಎರಡು ಹಣ ಹಾಕುತ್ತೇನೆ”—ಇವೆ ಮುಂತಾದ ಹರಿಕೆ ಮಾಡಿ ಒಂದು ನಾಣ್ಯದ ಬಿಲ್ಲೆಯನ್ನು ಕಟ್ಟಿಡುತ್ತಾರೆ. ವಾಸಿ ಆದ ಮೇಲೆ ಮರೆತು ಪುನಃ ಎಂದಾದರೂ ಒಂದು ವರ್ಷ ಹರಿಸೇವೆ ಮಾಡುತ್ತಾನೆ.

## ಪೂರ್ವ ಪದ್ಧತಿ

ಹರಿಸೇವೆಗೆ ಎಂಟು ದಿವಸಕ್ಕೆಮೊದಲೇ ಕುಟುಂಬದ ಒರಿಯ ಮನುಷ್ಯ ಸ್ನಾನ ಮಾಡಿ ಮಡಿ ಉಟ್ಟು ಒಂದು ಬಾಳೆಗೊನೆ ಕಡಿದು ತಂದು ಮುಡಿಪು ಕಟ್ಟಿದ ಸ್ಥಳದಲ್ಲಿ ತೂಗುಹಾಕುತ್ತಾನೆ. ಹಾಗೂ ನೆಂಟರು, ಊರಿನವರಿಗೆ ಪತ್ರ ಬರೆದು ತಿಳಿಸುತ್ತಾನೆ. ಹಾಗೆಯೇ ದೇವರಿಗೆ ಗುಂಡಕಟ್ಟೆ ಪೂಜೆಯನ್ನು ನೆರವೇರಿಸಿ ಕೊಡಬೇಕೆಂದು ಒಬ್ಬ ದಾಸನಿಗೆ ತಿಳಿಸುತ್ತಾನೆ ಮತ್ತು ಊರಿನ ಪ್ರತಿ ಒಂದು ಕುಟುಂಬದಿಂದಲೂ ಒಬ್ಬೊಬ್ಬರು ಭಕ್ತರಾಗಿ ನಿಲ್ಲುವಂತೆ ತಿಳಿಸುತ್ತಾನೆ. ನಿಶ್ಚಿತ ದಿವಸಕ್ಕೆ ಸರಿಯಾಗಿ ಎಲ್ಲರೂ ಬಂದು ಸೇರುತ್ತಾರೆ. ಭಕ್ತರಾಗಿ ನಿಂತ ಊರಿನವರಿಗೆ ಪತ್ರ ಬರೆದು ತಿಳಿಸುತ್ತಾನೆ. ಹಾಗೆಯೇ ದೇವರಿಗೆ ಗುಂಡಕಟ್ಟೆ ಪೂಜೆಯನ್ನು ನೆರವೇರಿಸಿ ಕೊಡಬೇಕೆಂದು ಒಬ್ಬ ದಾಸನಿಗೆ ತಿಳಿಸುತ್ತಾನೆ ಮತ್ತು ಊರಿನ ಪ್ರತಿ ಒಂದು ಕುಟುಂಬದಿಂದಲೂ ಒಬ್ಬೊಬ್ಬರು ಭಕ್ತರಾಗಿ ನಿಲ್ಲುವಂತೆ ತಿಳಿಸುತ್ತಾನೆ. ನಿಶ್ಚಿತ ದಿವಸಕ್ಕೆ ಸರಿಯಾಗಿ ಎಲ್ಲರೂ ಬಂದು ಸೇರುತ್ತಾರೆ. ಭಕ್ತರಾಗಿ ನಿಂತ ಊರಿನ ಕುಲಸ್ತರಿಗೂ ಪೂಜೆ ಮಾಡುವ ದಾಸನಿಗೂ ಉಪಹಾರ ಕೊಟ್ಟು ನಂತರ ಅವರ ತಲೆಗೆ ಎಣ್ಣೆ ಕೊಟ್ಟು ನಂತರ ಸ್ನಾನಕ್ಕೆ ಹೋಗುತ್ತಾರೆ. ಅಗಸರವನು ಮಡಿಪಂಚೆಗಳನ್ನು ಕೊಡುತ್ತಾನೆ. ಅವರು ಮಿಂದು ಬಂದು ದೇವರ ಗುಂಡದ ಮುಂದೆ ನಿಂತುಕೊಳ್ಳುತ್ತಾರೆ. ಒಕ್ಕಲು ಯಜಮಾನನು ಬಂದು ಮಾಡಿದ ಹರಿಕೆಯನ್ನು ವಿವರಿಸಿ ಹೇಳಿ, ಪೂಜೆ ಶುರುಮಾಡುವಂತೆ ದಾಸನಿಗೆ ಹೇಳುತ್ತಾನೆ. ಹಣ್ಣು, ಹೂ, ಕಾಯಿಗಳಿಂದ ಪೂಜೆ ಮಾಡುತ್ತಾನೆ. ಅಲ್ಲಿಯೇ ಭಕ್ತರಾಗಿ ನಿಂತಿದ್ದ ಕೆಲವರಿಗೆ ಆವೇಶ ಬರುತ್ತದೆ. ದೇವರು ಬರುವುದೆಂದು ಹೇಳುತ್ತಾರೆ. ಎಷ್ಟೋ

ಜನರು ಕಷ್ಟ, ಸುಖಗಳನ್ನು ಕೇಳುತ್ತಾರೆ. ಅವರೇನೊ ಅದಕ್ಕೆ ಪರಿಹಾರ ಸೂಚಿಸುತ್ತಾರೆ. ಅದು ಮುಗಿದ ಮೇಲೆ ಬೇಟ ಬೀಳುವ ಪದ್ಧತಿ : ದೇವರ ಗುಂಡದ ಬಾಗಿಲಿಗೆ ಒಂದು ಬಾಳಿಲೆ ಮುಚ್ಚಿ ಅದರ ಮುಂದುಗಡೆ ಒಂದು ಆಡನ್ನು ತಂದು ದೇವರ ದೂತರಿಗೆ ಬಲಿಕೊಡುತ್ತಾರೆ. ಆಮೇಲೆ ಭಗವಂತನ ದೂತರು ಈ ಪೂಜಾರಿಗಳಲ್ಲಿ ಕೆಲವರಿಗೆ ಆವೇಶ ಬಂದು ಆ ರಕ್ತದಲ್ಲು ಬೀಳುತ್ತಾರೆ, ನಂತರ ಆಡಿನ ಮಾಂಸವನ್ನು ಅಡಿಗೆ ಮಾಡಿ ಅಲ್ಲಿ ನೆರೆದಿದ್ದ ಜನರಿಗೆ ಊಟ ಹಾಕುತ್ತಾರೆ. ಹಣ್ಣು-ಕಾಯಿ ಮಾಡಿಸಿದ ತೆಂಗಿನ ಕಾಯಿಯ ಒಂದು ಭಾಗವನ್ನು ಬಾಳೆಹಣ್ಣು ಸಮೇತ ನೆಂಟರಿಗೂ, ಊರಿನವರಿಗೂ, ಆಯಾಯ ಊರಲ್ಲಿ ಗುರು ಆಶೀರ್ವಾದ ಪಡೆದ ಮನೆ ಸ್ಥಾನದವರಿಗೂ ಜೋಡುಗಡಿಗಳನ್ನು ಕೊಟ್ಟು ಕಳುಹಿಸುತ್ತಾರೆ. ಈ ವಿಧವಾಗಿ ಪೂರ್ವಕಾಲದಿಂದ ಇಲ್ಲಿಯವರೆಗೆ ನಡೆದುಬಂದ ಪದ್ಧತಿಯು "ಕೇವಲ ಮೂಡಾತ್ಮ ಪದ್ಧತಿ, ಇದು ದೇವರ ಪೂಜೆ ಅಲ್ಲ ; ಅಸುರಕ್ರಿಯೆ"ಯೆಂಬುದೆ ನನ್ನ ತರ್ಕ. ಇವುಗಳನ್ನು ಹೋಗಲಾಡಿಸಲು ಪಣತೊಟ್ಟು ಕೆಲಸ ಮಾಡುತ್ತಿದ್ದೇವೆ. ಹಿಂದಿನ ಪದ್ಧತಿ ಮಾರ್ಪಾಟು ಹೊಂದಿದೆ. ದೇವರ ಗುಂಡವನ್ನು ನಿರ್ಮಿಸಿ ಅರ್ಚಕರಿಂದ ಪೂಜೆ ನಡೆಸುತ್ತೇವೆ. ವಾದ್ಯ, ದೇವರ ಭಜನೆ, ಹಣ್ಣು, ಹೂ, ಕಾಯಿಗಳಿಂದಲೂ ಗಂಧ, ದೂಪ, ದೀಪ ನೈವೇದ್ಯಗಳಿಂದ ಆ ವೆಂಕಟರಮಣಸ್ವಾಮಿಯನ್ನು ಪೂಜಿಸುತಿದ್ದೇವೆ. ಅಲ್ಲಿ ನೆರೆದ ಜನರಿಗೆಲ್ಲಾ ಸಿಹಿ ಊಟ ಹಾಕುತಿದ್ದೇವೆ. ಪ್ರಾಣಿವಧೆ, ಆವೇಶ ಬರುವುದು ಮೊದಲಾದುವುಗಳನ್ನು ನಿಲ್ಲಿಸಿದ್ದೇವೆ. ಮುಡಿಪನ್ನು ತಂದು ಅದಕ್ಕೆ ಪೂಜೆ ಮಾಡಿ ಕುಟುಂಬಸ್ತರು ಅಲ್ಲಿ ಸೇರಿದ ಜನರೆಲ್ಲರು ಅವರವರ ಭಕ್ತಿಯ ಕಾಣಿಕೆಗಳನ್ನು ಮುಡಿಪಿಗೆ ಹಾಕುತ್ತಾರೆ. ಹೀಗೆ ಈ ಹಣವು ತುಂಬುತ್ತಾ ಬಂದಲ್ಲು ಕುಟುಂಬದ ಕೆಲವುಜನರು ಈ ಮುಡಿಪಿನಲ್ಲಿರುವ ಹಣವನ್ನು ಅಲ್ಲಿನ ಭಂಡಾರಕ್ಕೆ ಹಾಕಿ ಬರುತ್ತಾರೆ.

---

## ಹರಿ ಸೇವೆಯಲ್ಲಿ ಹೇಳುವ ಶ್ರೀ ವೆಂಕಟರಮಣ ದೇವರ ಹಾಡು

ಸಂಗ್ರಹಿಸಿದವರು : **ಶ್ರೀಮತಿ ಕುದುಕುಳಿ ಬೋಜಮ್ಮ**

ವಜ್ರದ ಬಿಂದಿಗೆ ರುದ್ರಾಕ್ಷಿ ವಸ್ತ್ರ ಬಗ್ಗಿ ಬನ್ನಿರೇ ಮುಗಿಲ್ಬಾಲೆ* | ಜಯ ಮಂಗಳಂ ನಿತ್ಯ ಶುಭ ಮಂಗಳಂ || ಬಗ್ಗಿ ಬನ್ನಿರೇ ಮುಗಿಲ್ಬಾಲೆ ಗಿರಿಜೆಯ ಕಂಡು | ಶ್ರೀ ವೆಂಕಟೇಶ ಜಪವ ಮುಗಿಸ್ಯಾರು || ಜಯ|| ಜಪವನ್ನೇ ಮುಗಿಸ್ಯಾರು ಜಗ್ಗನೆ ತಿರುಗ್ಯಾರು | ಯಾವ ರಾಯವರ ಮಗಣ್ಣೆಣ್ಣೆ || ಜಯ || ಹಾರವರ ಹರದರ ‡ ಸೊಸೆಯಲ್ಲ | ಲಿಂಗಜಂಗಮರ ಕಿರು ತಂಗಿ || ಜ || ಲಿಂಗ ಜಂಗಮರ ಕಿರು ತಂಗಿ ಮಹಾಸ್ವಾಮಿ | ನೀವು ನಮ್ಮ ಮಠಕ್ಕೆ ದಯಮಾಡಿ || ಜಯ || ನಿಮ್ಮ ಮಠವನ್ನು ನಾನೇನು ಬಲ್ಲೇನು ! ತಿಳಿದು ಹೇಳಿದರೆ ಬರುತ್ತೇನೆ ||ಜಯ || ಹವಳದ ಹರಿಗೋಡೆ ಮುತ್ತಿನ ಮುಂಬಾಗಿಲು | ಸಣ್ಣ ರುದ್ರಾಕ್ಷಿ ಮೇಲ್ಕಟ್ಟು || ಜಯ || ಸಣ್ಣ ರುದ್ರಾಕ್ಷಿ ಮೇಲ್ಕಟ್ಟು ಮಹಾಸ್ವಾಮಿ | ಅದು ನಮ್ಮವರ ಅರಮನೆ || ಜಯ || ಹಾಗೆಂದ ಮಾತನು ಕೇಳಿ ಶ್ರೀ ವೆಂಕಟರಮಣ ಕಾಲು ಖಡಗವ ಮರಿಕುದುರೆ || ಜಯ || ಕಾಲು ಖಡಗವ ಮರಿಕುದುರೆಯ ಏರಿಕೊಂಡು ಹೋದಾರು ಗಿರಿರಾಯವರ ಅರಮನೆಗೆ || ಜ || ಗಿರಿಜೆಯ ಕೇಳಲಿಕ್ಕೆ ಬಂದಾರು ಶ್ರೀ ವೆಂಕಟರಮಣ ಇಳಿದು ಗಿರಿಯುದ್ದ ಹೊನ್ನಾ ಅಳಕೊಂಡಾರು || ಜಯ || ಆನೆ ಶೃಂಗರಿಸಿ ಆರಾಳು ಕಳುಗ್ಯಾವು ! ಆರು ಭಟ್ಟೆ ಹೊನ್ನಾ ತರುಸ್ಯೇವು || || ಜಯ || ಆರು ಭಟ್ಟೆ ಹೊನ್ನಾ ತರುಸ್ಯೇವು ಗಿರಿರಾಯ

---

* ಮುಗಿಲ್ಬಾಲೆ – ಆಕಾಶರಾಜನ ಮಗಳು: ಪದ್ಮಾವತಿ.
ಹರದರ – ವ್ಯಾಪಾರಿ ; ವರ್ತಕ.

ವರೇ ! ಆ ಹೊನ್ನು ನಿಮಗೆ ಕೊಡುಸ್ಯೇವು ॥ ಜ ॥ ಆ ಹೊನ್ನು ನಿಮಗೆ ಕೊಡುಸ್ಯೇವು ಗಿರಿರಾಯವರೇ ನಿಮ್ಮ ಸಣ್ಣ ಗಿರಿಜೆ ‡ ಯ ಕೊಡಿ ನಮಗೆ ॥ ಜಯ ॥ ಆರು ಭಟ್ಟಿ ಹೊನ್ನು ಅದು ನಿಮಗೆ ಸಮನಲ್ಲ ಸಣ್ಣವಳ ಗಿರಿಜೆಯ ಬಲಗೈಲಿ ॥ ಜಯ ॥ ಸಣ್ಣ ಗಿರಿಜೆಯ ಬಲಗೈಲಿಟ್ಟಿರುವ ಚಿನ್ನದುಂಗುರಕ್ಕೆ ಬೆಲೆಯಿಲ್ಲಾ ॥ ಜಯ ॥ ಚಿನ್ನದುಂಗುರಕ್ಕೆ ಬೆಲೆಯಿಲ್ಲ ಆ ಹೊನ್ನು ನಮ್ಮ ಸಣ್ಣವಳ ಗಿರಿಜೆಯ ಕೊಡುವರಲ್ಲ ॥ ಜಯ ॥ ಒಂಟೆಯ ಶೃಂಗರಿಸಿ ಎಂಟಾಳು ಕಳುಹ್ಯಾವು ಎಂಟು ಭಟ್ಟಿ ಹೊನ್ನು ತರುಸ್ಯೇವು ॥ ಜಯ ॥ ಎಂಟು ಭಟ್ಟಿ ಹೊನ್ನು ತರುಸ್ಯೇವು ಗಿರಿರಾಯವರೇ ಆ ಹೊನ್ನು ನಿಮಗೆ ಕೊಡುಸ್ಯೇವು ॥ಜಯ ॥ ಆ ಹೊನ್ನು ನಿಮಗೆ ಕೊಡುಸ್ಯೇವು ಗಿರಿರಾಯವರೇ ನಿಮ್ಮ ಸಣ್ಣ ಗಿರಿಜೆಯ ಕೊಡಿ ನಮಗೆ ॥ ಜಯ ॥ ಸಣ್ಣ ಗಿರಿಜೆಯ ಬಲಗೈಲ್ಲಿಟ್ಟಿರುವ ವಜ್ರದುಂಗುರಕ್ಕೆ ಬೆಲೆಯಿಲ್ಲ ॥ ಜಯ ॥ ವಜ್ರದುಂಗುರಕ್ಕೆ ಬೆಲೆಯಿಲ್ಲ ಆ ಹೊನ್ನು ಸಣ್ಣ ಗಿರಿಜೆಯ ಕೊಡುವರಲ್ಲಾ ॥ ಜಯ ॥ ಎತ್ತು ಶೃಂಗರಿಸಿ ಹತ್ತಾಳು ಕಳುಗ್ಯಾವು ಹತ್ತು ಭಟ್ಟಿ ಹೊನ್ನು ತರುಸ್ಯೇವು ॥ ಜಯ ॥ ಹತ್ತು ಭಟ್ಟಿ ಹೊನ್ನು ತರುಸ್ಯೇವು ॥ ಜಯ ॥ ಹತ್ತು ಭಟ್ಟಿ ಹೊನ್ನು ತರುಸ್ಯೇವು ಗಿರಿರಾಯವರೇ ಆ ಹೊನ್ನು ನಿಮಗೆ ಕೊಡುಸ್ಯೇವು॥ ಜಯ॥ ಆ ಹೊನ್ನು ನಿಮಗೆ ಕೊಡುಸ್ಯೇವು ಗಿರಿರಾಯವರೇ ನಿಮ್ಮ ಸಣ್ಣ ಗಿರಿಜೆಯ ಕೊಡಿ ನಮಗೆ ॥ ಜಯ ॥ ಹತ್ತು ಭಟ್ಟಿ ಹೊನ್ನು ಅದು ನಮಗೆ ಸಮನಲ್ಲ ಸಣ್ಣ ಗಿರಿಜೆಯ ಬಲಗೈಲ್ಲಿ ॥ ಜಯ ॥ ಸಣ್ಣ ಗಿರಿಜೆಯ ಬಲಗೈಲ್ಲಿಟ್ಟಿರುವ ಮುದ್ರೆಯುಂಗುರಕ್ಕೆ ಬೆಲೆಯಿಲ್ಲಾ ॥ ಜಯ ॥ ಮುದ್ರೆಯುಂಗುರಕ್ಕೆ ಬೆಲೆಯಿಲ್ಲ ಆ ಹೊನ್ನು ಸಣ್ಣ ಗಿರಿಜೆಯ ಕೊಡುವರಲ್ಲ ॥ ಜಯ ॥ ಹಾಗೆಂದು ಮಾತನ್ನು ಕೇಳಿ ಶ್ರೀ ವೆಂಕಟರಮಣ ಗಿರಿಯಿಂದ ಕೆಳಗೆ ಇಳಿದಾರು ॥ ॥ ಜಯ ॥ ಗಿರಿಯಿಂದ ಕೆಳಗೆ ಇಳಿಯುತ್ತಾ ಎಂದಾರು ಆ ಬಾಲೆಯ ತರದೆ ಬಿಡೆ ನಾನು ॥ ಜಯ ॥ ಆದ ಅಡಿಗೆಯ ಬಿಟ್ಟು ಕೇಳಿದ ನಾಮಾಬಿಟ್ಟು ಅಪ್ಪ ವೆಂಕಟರಮಣಾರು ॥ ಜಯ ॥ ಅಪ್ಪ ವೆಂಕಟರಮಣಾರು ಬಂದಿರಲು ಹೆತ್ತವ್ವ ಮಗ್ಗುಲ ಹೊರುಳ್ಯಾರು ॥ ಜಯ ॥ ತನ್ನಯ ವೇಷವ ಬಿಟ್ಟು ಸನ್ಯಾಸಿ ವೇಷವ ತಾಳಿ ಹೋದಾರು ತಮ್ಮ ಗಿರಿಮೇಲೆ ॥ ಜಯ ॥ ಮೂರು ನಾಮದ ದಾಸರಯ್ಯ ಭಿಕ್ಷೆಗೆ ಬಂದಿದ್ದಾನೆ. ನೋಡವ್ವ ಅವರ ಚೆಲುವಿಕೆಯ ॥ ಜಯ ॥ ನೋಡವ್ವ ಅವರ ಚೆಲುವಿಕೆಯ ಬಿಟ್ಟಿದ ಹನ್ನೆರಡು ಜಡೆಯ ಶರಣರಿಗೆ ॥ ಜಯ ॥ ಹನ್ನೆರಡು ಜಡೆಯ ಶರಣರಿಗೆ ತಾಯವ್ವ ಪುಟ್ಟನ ದಾನ ಕೊಡಿ ನಮಗೆ ॥ ಜಯ ॥ ಜರಿ ಮುಂಡಾಸಿನ ದಾಸಯ್ಯ ಭಿಕ್ಷಕ್ಕೆ ಬಂದಿದ್ದಾನೆ ನೋಡವ್ವ ಅವರ ಚೆಲುವಿಕೆಯ ಬಿಟ್ಟಿದ ಇಪ್ಪತ್ತು ಜಡೆಯ ಶರಣರಿಗೆ ॥ ಜಯ ॥ ಇಪ್ಪತ್ತು ಜಡೆಯ ಶರಣರಿಗೆ ತಾಯವ್ವ ಪುಟ್ಟನ ದಾನ ಕೊಡಿ ನಮಗೆ ॥ ಜಯ ॥ ಹಟ್ಟೀಲಿ ಶ್ರೀ ಗಿರಿಜೆ ಕಟ್ಟುತ್ತಾ ಎಂದಾಳು ಅಪ್ಪಯ್ಯನನ್ನ ಕೊಡಬೇಕು ॥ ॥ ಜಯ ॥ ಅಪ್ಪಯ್ಯ ನನ್ನ ಕೊಡಬೇಕು ಅವರಿಗೆ ಮೂರು ನಾಮದ ಚೆಲುವಯ್ಯ ದಾಸಯ್ಯಗೆ ॥ ಜಯ ॥ ಹಟ್ಟೀಲಿ ಉಣ್ಣುವನು ಕೊಟ್ಟಿಗೆಯಲ್ಲಿ ಮಲಗುವನು ಬಟ್ಟಲು ಹಿಡಿದು ತಿರಿದುಂಬುವನ ಕಂಡು ಏನು ಮೆಚ್ಚಿದೆ ಶ್ರೀ ಗಿರಿಜೆ ॥ ಜಯ ॥ ಹಟ್ಟಿ ನಮ್ಮರಮನೆ ಕೊಟ್ಟಿಗೆ ನಮ್ಮ ಸಣ್ಣಮನೆ ಬಟ್ಟಲು ಭೂಲೋಕ ಸಲ್ಲುವುದು ॥ ಜಯ ॥ ಹಾದಿಲಿ ಉಣ್ಣುವನು–ಬೀದೀಲಿ ಮಲಗುವನು ಜೋಳಿಗೆ ಹಿಡಿದು ತಿರಿದುಂಬಾನು ॥ ಜಯ ॥ ಜೋಳಿಗೆ ಹಿಡಿದು ತಿರಿದುಂಬುವನ ಕಂಡು ಏನು ಮೆಚ್ಚಿದೆ ಶ್ರೀ ಗಿರಿಜೆ ॥ ಜಯ ॥ ಹಾದೀ ನಮ್ಮರಮನೆ ಬೀದಿ ನಮ್ಮರಮನೆ ಜೋಳಿಗೆ ನಮ್ಮ ಮನೆ ಸ್ವಾಮಿ ॥ ಜಯ ॥ ಹಟ್ಟೀಲಿ ನಿಂತುಕೊಂಡು ಬಟ್ಟೆ ಮುತ್ತು ಕೇಳುವಳೆ ನೆತ್ತಿರಳೋಲೆ ಪದ ಮುತ್ತು । ಜಯ ॥ ನೆತ್ತಿರಳೋಲೆ ಪದ ಮುತ್ತು ಜಯಕಂಡಿರೆ ಮೆಟ್ಟಿ ಹಾರಿಸ್ಯಾರು ಗಗನಕ್ಕೆ ॥ ಜಯ ॥ ಮೆಟ್ಟಿ ಹಾರಿಸ್ಯಾರು ಗಗನಕ್ಕೆ ಮಹಾಸ್ವಾಮಿ । ತೆಕ್ಕೊಂಡು ಹೋದಾರು ಗಿರಿಮೇಲೆ ॥ ಜಯ ॥ ಲಿಂಗ ಕಿತ್ತಾರು ಗಂಗೆಗೆ ಎಸೆದಾರು ಲಕ್ಕವ್ವನೆಂದು ಕರುದಾರು ॥ ಜಯ ॥ ಗಿರಿಯನ್ನೆ ಹತ್ತುತ್ತಾ ಕಿರಿಬೆವರ ಬೆವರುತ್ತ ಎಡಬಲದ ಶಂಖುನುಡಿಸುತ್ತಾ ॥ ಜಯ ॥ ಎಡಬಲದ ಶಂಕು ನುಡಿಸುತ್ತಾ ಸ್ವಾಮಿಗೆ ಗಿರಿಯ ಮೇಲೊಂದು ಹರಿಸೇವೆ ॥ ಜಯ ॥ ಸ್ವಾಮಿಯ ಮದುವೆಗೆ ಭೂಮ್ಯೆಲ್ಲ

‡ ಗಿರಿ (ಮೋಡ) + ಜೆ (ಹುಟ್ಟಿದವಳು) = ಆಕಾಶರಾಜನ ಮಗಳು ; ಪದ್ಮಾವತಿ.

ಚಪ್ಪರ ಏಲಕ್ಕಿ ಕಂಬ ತಳಿದಾರು ॥ ಜಯ ॥ ಏಲಕ್ಕಿ ಕಂಬ ತಳಿದೂವೇ ಕೊಟ್ವಾರು ಸ್ವಾಮಿ ಶ್ರೀ ವೆಂಕಟ ರಮಣಾರ ಮದುವೇಗೆ ॥ ಜಯ ॥ ಸ್ವಾಮಿಯ ಮದು ವೇಗೆ ಎಲ್ಲರೂ ಹೋಗುವ ಬನ್ನಿ ಗೊಲ್ಲರ ಬಂಡಿ ಬಲದಲ್ಲಿ ॥ ಜಯ ॥ ಗೊಲ್ಲರ ಬಂಡಿ ಬಲದಲ್ಲಿ ಗಿರಿಕೆಸರುಗಳಿಗೇಲಿ ಥಾರೆ ಎರುದಾರು ॥ ಜಯ ॥ ಹಣ್ಣಡಿಕೆ ಚಪ್ಪರ ಬಣ್ಣದ ಮೇಲ್ಕಟ್ಟು ತಣ್ಣೀರು ಬಾವಿಯೇ ಅರಮನೆ ॥ ಜಯ ॥ ತಣ್ಣೀರು ಬಾವಿಯೇ ಅರಮನೆ। ಮಹಾಸ್ವಾಮಿಗೆ ಅಲ್ಲಿ ಶಾಸ್ತ್ರಗಳು ನಡೆದಾವು ॥ ಜಯ ॥ ಬಿಸಿನೀರು ಬಾವಿಯೇ ಅರಮನೆ। ಮಹಾಸ್ವಾಮಿಗೆ ಅಲ್ಲಿ ಶಾಸ್ತ್ರಗಳು ನಡೆದಾವು ॥ ॥ ಜಯ ॥ ಬೆಟ್ಟದ ಸ್ವಾಮಿಗೆ ಬಿಟ್ಟ ಸೂಳೆಯರು ಪಟ್ಟೆಯ ಸೀರೆ ನೆಂದುಟ್ಟು ॥ ಜಯ ॥ ಪಟ್ಟೆಯ ಸೀರೆ ನೆಂದುಟ್ಟು ದಾಸಿಯರು ಬಟ್ಟಲಾರತಿಯ ಬೆಳುಗ್ಯಾರು ॥ ಜಯ ॥ ಮಂಗಳಾರತಿ ಜಯ ಮಂಗಳಾರತಿ। ಶುಭ ಮಂಗಳಾರತಿ ॥ ಮಂಗಳಂ ಜಯ ಮಂಗಳಂ। ನಿತ್ಯಂ ಶುಭ ಮಂಗಳಂ ॥



## ಎಣ್ಣೆ ಶಾಸ್ತ್ರ ಮಾಡುವಾಗ ಹೇಳುವ ಹಾಡು

ಸಂಗ್ರಹಿಸಿದರು : ಚೆಟ್ಟಿಮಾಡ ಅಮ್ಮವ್ವ, ಮಡಕೇರಿ

ಎಣ್ಣೆಯ ನೊತ್ತಿದರು, ಮೀನಾಕ್ಷಿಗೆ ಎಣ್ಣೆಯ ನೊತ್ತಿದರು ॥

ಸುಗುಣ ಸಂಪೂರ್ಣೆಗೆ ನಿಗಮದ ವಿನೂತೆಗೆ।

ಜಾಜಿಯ ಹೂವಿನ ಎಣ್ಣೆ ಅರಿಸಿಣ ಒತ್ತಿದರು।

ಮೀನಾಕ್ಷಿಗೆ ಎಣ್ಣೆಯನೊತ್ತಿದರು।

ಸುರವರನ ಪಾಲೆಗೆ ಗಿರಿರಾಜ ಬಾಲೆಗೆ।

ತಿರುವಂತಿನ ಹೂವಿನ ಎಣ್ಣೆ ಅರಿಸಿನ ಒತ್ತಿದರು।

ಮೀನಾಕ್ಷಿಗೆ ಎಣ್ಣೆಯನೊತ್ತಿದರು ॥

ಕರಪೂರಲೋಲನ ಶಂಕರನ ಪತ್ನಿಗೆ।

ತಿರುವಂತನ ಹೂವಿನ ಎಣ್ಣೆ ಅರಿಸಿಣ ಒತ್ತಿದರು।

ಮಿನಾಕ್ಷಿಗೆ ಎಣ್ಣೆಯನೊತ್ತಿದರು ॥



# ಗೌಡರ ಕುಟುಂಬ ಜೀವನ

ಲೇಖಕರು: **ಶ್ರೀ ದಂಬೆಕೋಡಿ ಚಂದ್ರಶೇಖರ**

(ಶ್ರೀ ದಂಬೆಕೋಡಿ ಚಂದ್ರಶೇಖರ ಬೆಂಗಳೂರಿನ ಕಾಲೇಜಿನಲ್ಲಿ I B. Com., ನಲ್ಲಿ ಓದುತ್ತಿದ್ದಾರೆ. ಇವರು ಗೌಡರ ಕುಟುಂಬದ ಸೂಕ್ಷ್ಮ ಪರಿಚಯ ಮಾಡಿಕೊಟ್ಟಿದ್ದಾರೆ. ಸಂ.)

ಮಾನವ ಸಮಾಜಕ್ಕೆ ಕುಟುಂಬವು ಮೂಲಾಧಾರ – ಎಲ್ಲಾ ಪಂಗಡಗಳೂ ಎಲ್ಲಾ ವೃತ್ತಿಗಳೂ ಎಲ್ಲಾ ರೀತಿಯ ನೀತಿಗಳೂ ಜೀವನದ ಎಲ್ಲಾ ಅವಸ್ಥೆಗಳೂ ಆಶ್ರಮಗಳೂ ಹುಟ್ಟಿರುವುದು ಕುಟುಂಬದಿಂದ. ಆದಿ ಮಾನವ ಸಮಾಜವು ಹೇಗಿದ್ದಿತು ಎಂಬುದನ್ನು ತಿಳಿಯುವುದು ತುಂಬಾ ಕಷ್ಟ. ಕುಟುಂಬದ ಮೂಲವು ಮಾತೃ ಪ್ರಧಾನವಾದದ್ದೋ, ಪಿತೃ ಪ್ರಧಾನವಾದದ್ದೋ ಎಂಬುದಾಗಿ ಸ್ಪಷ್ಟವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಗೌಡರು ಸಬ್ಬಮ್ಮ, ಕೆಂಚಮ್ಮ ಮುಂತಾದ ದೇವತೆಯನ್ನು ಪೂಜಿಸುವುದನ್ನು ನೋಡಿದರೆ ಗೌಡರ ಕುಟುಂಬ ಜೀವನವು ಮಾತೃ ಪ್ರಧಾನವಾದ ಕುಟುಂಬವೋ ಎಂದು ಶಂಕೆ ಪಡಬೇಕಾಗಿದೆ. ಆದರೆ ವಾಸ್ತವವಾಗಿ ಈಗಿರುವ ಕುಟುಂಬಗಳು ಮಾತೃ ಪ್ರಧಾನವಾದ ಕುಟುಂಬವಾಗಿರದೆ ಆರ್ಯ ಸಂಸ್ಕೃತಿಯಲ್ಲಿರುವ ಪಿತೃಪ್ರಧಾನವಾದ ಕುಟುಂಬದ ಸಾಲಿಗೆ ಸೇರಿರುವುದನ್ನು ಈಗಲೂ ಕಾಣಬಹುದು. ಆದರೆ ಈ ಕುಟುಂಬಗಳ ಯಜಮಾನನಿಗೆ ರೋಂ ನಗರದಲ್ಲಿದ್ದ ಕುಟುಂಬದ ಯಜಮಾನನಷ್ಟು ಅಧಿಕಾರವಿಲ್ಲದಿದ್ದರೂ ಅದೇ ರೀತಿಯ ಅಧಿಕಾರ ಹಿಂದೆ ಇತ್ತೆಂಬುದನ್ನು ಕೇಳಿದ್ದೇವೆ.

ಹಲವು ಕುಟುಂಬಗಳು ಸೇರಿ ದೊಡ್ಡದಾದ ಗುಂಪಿಗೆ ನಾವು ಬಳಿ ಅಥವಾ ಗೋತ್ರವೆನ್ನುತ್ತೇವೆ. ಹೀಗೆ ಹಲವು ಕುಟುಂಬಗಳು ಬಂದು ಸೇರಿದಾಗ ಕುಟುಂಬಗಳ ವ್ಯವಸ್ಥೆ ಹಾಳಾಗಿ ಒಂದು ಮಾತೃ ಪ್ರಧಾನವಾದ ಕುಟುಂಬದಿಂದ ಪಿತೃ ಪ್ರಧಾನವಾದ ಕುಟುಂಬವಾಗಿರಬಹುದೆಂದು ಅನೇಕ ವಿದ್ವಾಂಸರು ಸಂಶಯಪಡುತ್ತಾರೆ.

ಗೌಡರಲ್ಲಿ ಈಗ ಮತ್ತು ಹಲವು ಶತಮಾನಗಳ ಹಿಂದಿನವರೆಗೆ ಕಂಡುಬರುತ್ತಿದ್ದ ಕುಟುಂಬಗಳು ಭಾರತದಲ್ಲಿ ಹಿಂದೂಗಳಲ್ಲಿ ಕಂಡುಬರುವ "ಅವಿಭಕ್ತ" (Undivided) ಕುಟುಂಬಗಳಾಗಿದ್ದವು. ಗೌಡರ ಕುಟುಂಬಗಳಲ್ಲಿ ಕುಟುಂಬದ ವಯಸ್ಸಿನಲ್ಲಿ ಹಿರಿಯ ಪುರುಷನು ಕುಟುಂಬದ ಯಜಮಾನನಾಗುವನು. ಇವರಿಗೆ "ಪಟ್ಟೆದಾರ" ಎಂಬುದಾಗಿ ಕೊಡಗಿನಲ್ಲಿ ಕರೆಯುವರು.

### ಗೌಡರ ಮೂಲ ಮನೆ (ಐನ್‌ಮನೆ)

ಹಿಂದಿನ ಕಾಲದಲ್ಲಿ ಕುಟುಂಬದ ಎಲ್ಲಾ ಜನರು ಒಂದೇ ಕಡೆ ವಾಸವಾಗಿದ್ದು ಒಂದೇ ಅಡಿಗೆಯಲ್ಲಿ ಜೀವಿಸುತ್ತಿದ್ದರು. ಹಾಗಾಗಿ ಮೂಲ ಮನೆ (ಐನ್‌ಮನೆ)ಲ್ಲಿರುವ ಅಡಿಗೆ ಮನೆಯು ಕುಟುಂಬದ ಎಲ್ಲ ಸದಸ್ಯರಿಗೂ ಹಕ್ಕಾಗಿರುವ ಅಡಿಗೆ ಕೋಣೆ. ಇದಕ್ಕೆ "ಉಂಬೊಳಗೆ" ಎಂದು ಕರೆಯುತ್ತಾರೆ. (ಉಂಬ= ಊಟ ಮಾಡುವ,) (ಒಳಗೆ = ಕೋಣೆ) ಐನ್‌ಮನೆಯಲ್ಲಿ ಶ್ರೀ ವೆಂಕಟರಮಣ ಸ್ವಾಮಿಯ ಮುಡಿಪನ್ನು ಮನೆಯ ಅಟ್ಟದಲ್ಲಿ ಇಟ್ಟಿರುತ್ತಾರೆ. ಅದಲ್ಲದೆ ದೀಪವೂ ಕುಟುಂಬದವರಿಗೂ ಹಕ್ಕಾಗಿರುವ ವಸ್ತು. ಇದಲ್ಲದೆ "ಬಾಡೆ" ಎಂಬುದಾಗಿ ಕರೆಯುವ

ಕುಟುಂಬದ ಸಭಾಂಗಣವಿದೆ. ಅಲ್ಲದೆ "ಕಯ್ಯಾಲೆ" ಎಂಬ ಪಡಸಾಲೆಯೂ ಇರುತ್ತದೆ. ಐನ್‌ಮನೆಯ "ಬಾಡೆ" ಕಯ್ಯಾಲೆ ಮತ್ತು "ಉಂಬೊಳಗೆ''ಗಳು ಕುಟುಂಬದ ಎಲ್ಲಾ ಸದಸ್ಯರಿಗೂ ಹಕ್ಕಾಗಿರುವ ಕುಟುಂಬದ ಸಾರ್ವಜನಿಕ (Public Place) ಸ್ಥಳಗಳು. ಅದಲ್ಲದೆ ಮನೆಯ ಅಂಗಳ ಮತ್ತು ಕಣವೂ ಎಲ್ಲಾ ಸದಸ್ಯರಿಗೆ ಹಕ್ಕಾಗಿರುವ ಕುಟುಂಬದ ಸಾರ್ವಜನಿಕ ಸ್ಥಳಗಳು, ''ಉಂಬೊಳಗೆ'' ಯಲ್ಲಿ ಹಬ್ಬ ಮದುವೆ ಮತ್ತು ಇತರ ಶುಭಕಾರ್ಯಗಳಲ್ಲೂ ಶುದ್ಧ. ದಿನ (ತಿಥಿ) ದೀಪಾವಳಿ ಹಬ್ಬಗಳಲ್ಲೂ ಇನ್ನಿತರ ಕುಟುಂಬದ ಸಾರ್ವಜನಿಕ ಕಾರ್ಯಗಳ "ತೊಂಬಾರ" ಅಡಿಗೆಯನ್ನು ಮಾಡುತ್ತಾರೆ. ''ಉಂಬೊಳಗೆ'' ಯಲ್ಲಿ ಶುಭ ಮತ್ತು ಅಶುಭ ಕಾರ್ಯಗಳಲ್ಲಿ ಸತ್ತ ಹಿರಿಯರಿಗೆ ''ಕಾರಣಿಕ''ರಿಗೆ ಎಡೆ (ನೈವೇದ್ಯ) ಯನ್ನು ಇಡುವರು. ಸತ್ತವನನ್ನು ಹತ್ತು ಕೂಡಿಸುವುದೂ ಇಲ್ಲಿಯೇ.

"ಬಾಡೆ"ಯಲ್ಲಿರುವ "ನೆಲ್ಲಕ್ಕಿ" (ದೀಪ) ಯ ಅಡಿಯಲ್ಲಿ ಮದುವೆ, ಹಬ್ಬಗಳಲ್ಲಿ ಕುಟುಂಬದವರೆಲ್ಲರೂ ಸೇರಿ ದೇವರನ್ನು ಗುರುವನ್ನು ಮತ್ತು ಹಿರಿಯರನ್ನು ಪ್ರಾರ್ಥಿಸಿ ಕಾರ್ಯ ಪ್ರಾರಂಭಿಸುತ್ತಾರೆ. ಮದುಮಕ್ಕಳ ಹಸೆಯನ್ನೂ "ನೆಲ್ಲಕ್ಕಿ" (ದೀಪ) ಯ ಹತ್ತಿರವೇ ಬರೆಯುತ್ತಾರೆ.

"ಕಯ್ಯಾಲೆ" ಎಂಬ ಪಡಸಾಲೆಯಲ್ಲಿ "ಐಮರ" ಎಂಬ ಮುಖ್ಯವಾದ ಚಿತ್ರದಿಂದ ಕೊರೆದಿರುವ ಸುಂದರವಾಗಿ ಕೆತ್ತಿರುವ ದೊಡ್ಡ ಮರದ ಹಲಗೆಯನ್ನು ಸ್ವಲ್ಪ ಎತ್ತರದಲ್ಲಿ ಕೂರುವುದಕ್ಕೆ ಅನುಕೂಲವಾದ ರೀತಿಯಲ್ಲಿ ಕಟ್ಟಿರುತ್ತಾರೆ. ಈ "ಕಯ್ಯಾಲೆ" (ಪಡಸಾಲೆ) ಯಲ್ಲಿ ಕುಟುಂಬಕ್ಕೆ ಸಂಬಂಧಿಸಿದ ಎಲ್ಲಾ ಸಭೆಗಳನ್ನು ನಡೆಸುತ್ತಾರೆ. ಕೆಲವು ಕುಟುಂಬಗಳಲ್ಲಿ "ಪಟ್ಟೆದಾರ"ನು ಕುಳಿತುಕೊಳ್ಳುವುದಕ್ಕೆ ಪ್ರತ್ಯೇಕವಾದ ಸ್ಥಳವನ್ನು ಏರ್ಪಡಿಸಿರುತ್ತಾರೆ. ಈ ಸ್ಥಳದಲ್ಲಿ "ಪಟ್ಟೆದಾರ" ನಲ್ಲದೆ ಬೇರೆ ಪುರುಷರಾಗಲೀ ಹೆಂಗಸರು ಮಕ್ಕಳು ಕುಳಿತುಕೊಳ್ಳಬಾರದು. ಕುಟುಂಬದ ಜಗಳಗಳಿದ್ದರೆ "ಪಟ್ಟೆದಾರ"ನು ಈ ಸ್ಥಳದಲ್ಲಿ ಕುಳಿತು ಕುಟುಂಬದವರ ದೂರನ್ನು ಮನಸ್ಸಿಟ್ಟು ಕೇಳಿ ತನ್ನ ತೀರ್ಪನ್ನು ಕೊಡುತ್ತಿದ್ದನು.

"ಐಮರ" ವೆಂಬ ಹಲಗೆಯ ಮೇಲೆ ಹೆಂಗಸರು ಕೂರುವುದನ್ನು ನಿಶೇಧಿಸಲಾಗಿದೆ. "ಕಯ್ಯಾಲೆ" ಯು ಅತಿಥಿಗಳನ್ನು ಸತ್ಕರಿಸುವ ಸ್ಥಳವೂ ಹೌದು ಮದುಮಕ್ಕಳಿಗೆ ಮುಹೂರ್ತಕ್ಕೆ ಒಂದು ದಿನಕ್ಕೆ ಮೊದಲು "ಚಪ್ಪರ"ದ ದಿನ ಸೋದರಮಾವನು "ಕಾಸ್‌ತಾಳಿ"ಯನ್ನು ಈ ಸ್ಥಳದಲ್ಲಿಯೇ ಕಟ್ಟುವುದು. ಬಾಡೆಯಲ್ಲಿರುವ "ನೆಲ್ಲಕ್ಕಿ" ಮತ್ತೂ "ಕಯ್ಯಾಲೆಯಲ್ಲಿರುವ ದೀಪಕ್ಕೆ ಪ್ರತೀಭಾಗದವರು ತಮ್ಮ ಸರದಿಯಂತೆ ಉಣ್ಣೆ ಹುಯ್ದು ಪ್ರತಿ ರಾತ್ರೆಯಲ್ಲಿ ದೀಪ ಉರಿಸಬೇಕು. ಅದರ ಖರ್ಚನ್ನೂ ಅವರೇ ವಹಿಸಿಕೊಳ್ಳಬೇಕು. ಇದಲ್ಲದೆ ಪ್ರತೀ ಭಾಗದವರು "ಐನ್" ಮನೆಯನ್ನು ತಮ್ಮ ಸರದಿಯಂತೆ ಬೆಳಗ್ಗೆ ಮತ್ತು ಸಾಯಂಕಾಲ ಗುಡಿಸಿ ಶುಚಿಯಾಗಿಡಬೇಕು.

## ಪಟ್ಟೆದಾರ ಯಾ ಕರ್ತ

ಕುಟುಂಬದ ಪಟ್ಟೆದಾರನು ಪ್ರತಿ ಕುಟುಂಬದ ವಯಸ್ಸಿನಲ್ಲಿ ಹಿರಿಯ ಪುರುಷನಾಗಿರುತ್ತಾನೆ. ಕುಟುಂಬದಲ್ಲಿ ಪುರುಷರೇ ಇಲ್ಲದ ಪಕ್ಷದಲ್ಲಿ ಆ ಕುಟುಂಬಕ್ಕೆ ಮದುವೆಯಾಗಿ ಬಂದ ಹಿರಿಯ ಮಹಿಳೆಯೇ "ಪಟ್ಟೆದಾರ"ಳಾಗುತ್ತಾಳೆ. ಅದೂ ಇಲ್ಲದಿದ್ದ ಪಕ್ಷದಲ್ಲಿ ಆ ಕುಟುಂಬದ ಎಲ್ಲಾ ಹೆಣ್ಣುಮಕ್ಕಳ ಹೆಸರಿನಲ್ಲಿ ಜಂಟಿಯಾಗಿ ಪಟ್ಟೆ ವರ್ಗಾಯಿಸಲ್ಪಟ್ಟು ಆ ಹೆಣ್ಣುಮಕ್ಕಳು ಜಂಟಿ ಪಟ್ಟೆದಾರರಾಗುವ ಪದ್ಧತಿ ಹಿಂದೆ ಇತ್ತು. ಕುಟುಂಬದ ವಯಸ್ಕ ಪುರುಷರ ಹೆಸರು ಕುಟುಂಬ ಆಸ್ತಿಯ ಹಕ್ಕುದಾರಿಕೆಯ ಪಟ್ಟೆಯಲ್ಲಿರುತ್ತದೆ. ಕುಟುಂಬದ ಆಸ್ತಿಯನ್ನು ಪರಾಧೀನ ಮಾಡಬೇಕಾದರೆ ಕುಟುಂಬದ ಎಲ್ಲಾ ಸದಸ್ಯರ ಒಪ್ಪಿಗೆ ಪಡೆಯಬೇಕು.

ಕುಟುಂಬದ ಸದಸ್ಯರ ಒಪ್ಪಿಗೆಯಿಲ್ಲದೆ ಕುಟುಂಬದ ಆಸ್ತಿಯನ್ನು ಮಾರುವುದಕ್ಕೆ ಸಾಧ್ಯವಿಲ್ಲ. ಜೀವನೋಪಾಯಕ್ಕಾಗಿ ಪಾಲುಪತ್ತುಗಳಾಗಿದ್ದರೂ ಕುಟುಂಬದ ಸದಸ್ಯರ ಅನುಮತಿಯಿಲ್ಲದೆ ತನ್ನ ಪಾಲಿನ ಆಸ್ತಿಯನ್ನು ಮಾರುವುದಕ್ಕೂ ಸುಲಭ ಸಾಧ್ಯವಿಲ್ಲ.

## ಸೂತಕ

ಗೌಡ ಕುಟುಂಬವು ಈಗಿನ ಕಾನೂನುಗಳ ಪರಿವರ್ತನೆಯ ಕಾರಣವಾಗಿ ಹಿಂದಿನ ಅವಿಭಕ್ತ ಕುಟುಂಬಗಳಾಗಿ

ಉಳಿಯದಿದ್ದರೂ ಸತ್ತಾಗ ಹೆತ್ತಾಗ ಬರುವ ಸೂತಕವೆಂಬ ಹೊಲೆಯು ಪ್ರತಿಯೊಬ್ಬ ಕುಟುಂಬದ ಸದಸ್ಯನು ತಾನು ತನ್ನ ಹುಟ್ಟೂರಿನಲ್ಲಿಯೇ ಇರಲಿ ಜೇರೆ ಊರಿನಲ್ಲಿಯೇ ಇರಲಿ ಸೂತಕದ ವ್ಯಾಪ್ತಿಗೆ ಸ್ಥಳಗಳ ಮೇರೆಗಳಿಲ್ಲ. ನಿಯೋಜಿತ ಸೂತಕದ ಸಮಯದಲ್ಲಿ ಸೂತಕದ ವಿಷಯ ಗೊತ್ತಾದರೆ ದೇವಸ್ಥಾನಗಳಿಗಾಗಲೀ ಅಥವಾ ಜೇರೆ ಶುಭಕಾರ್ಯಗಳಿಗೆ ಭಾಗವಹಿಸುವುದು ನಿಶೇಧಿಸಲ್ಪಟ್ಟಿದೆ. ಅಲ್ಲದೆ ಕುಟುಂಬದಲ್ಲಿ ಯಾರಾದರೂ ಸತ್ತರೆ ಸೂತಕ-ಕಳೆಯುವವರೆಗೆ ಯಾವ ಶುಭಕಾರ್ಯವನ್ನೂ ಮಾಡಕೂಡದು.

# ಹೊಸಕೆರೆಯ ಹೊನ್ನಮ್ಮ

ಸಂಗ್ರಹ ಸಂಯೋಜನೆ ರೂಪಕಕ್ಕೆ ಭಾಷಾಂತರ : **ಶ್ರೀ ಟಿ. ಜಿ. ಮುಡೂರು**
**ಕನ್ನಡ ಪಂಡಿತ್, ಪಂಜ** (ದ. ಕ.)

---

ಜಾನಪದ ಜೀವನ ಎಷ್ಟು ಸರಳತೆಯಿಂದ ಕೂಡಿದೆಯೋ ಅಷ್ಟೆ ಸರಳ ಅವರ ಸಾಹಿತ್ಯ ; ಅಷ್ಟೇ ಮುಗ್ಧ ಅವರ ಹೃದಯ. ಅಂಥ ಸರಳ ಸಾಹಿತ್ಯವನ್ನು ಇನ್ನೂ ಸರಳವಾಗಿ ವಿವರಿಸುವಲ್ಲಿ ಶ್ರೀ ತಮ್ಮಯ್ಯಗೌಡ ಮುಡೂರು, ಅವರು ನಿಜವಾಗಿಯೂ ಕುಶಲತೆಯನ್ನು ತೋರಿಪ್ಪಾರೆ.

ಶ್ರೀಯುತರು ದಕ್ಷಿಣ ಕನ್ನಡ ಜಿಲ್ಲೆಯ ಬೋರ್ಡು ಹೈಸ್ಕೂಲ್, ಪಂಜದಲ್ಲಿ ಕನ್ನಡ ಪಂಡಿತರಾಗಿದ್ದಾರೆ. ಇವರ "ಕಾಡುಮಲ್ಲಿಗೆ" ಮತ್ತು "ಹೊಸತು ಕಟ್ಟು" ಎಂಬ ಶಿಶುಕವನಗಳು, "ಶಿವ ಕುಮಾರಿ," "ಸಖಿ," "ಹೃದಯ ರೂಪಕ" ಮತ್ತು "ಮುಕುಟೋರು ಭಂಗ" ಮೊದಲಾದ ನಾಟಕಗಳು, "ಹುತ್ತದಲ್ಲಿ ಹೂ" ಮತ್ತು "ಗುರುವನ ಗುಡಿ" ಎಂಬ ರೂಪಕಗಳು, "ಜೀವದಯಾಷ್ಟಮಿ" ಎಂಬ ಗದ್ಯಾನುವಾದ, "ಅಬ್ಬೆಯ ಮಡಿಲು" ಎಂಬ ಕಥಾ ಸಂಕಲನ ಪ್ರಕಟಗೊಂಡಿವೆ. ಇವರೀಗ ಪ್ರತಿಮಾ ಪ್ರಕಾಶನ ಪಂಜ, ಸಂಗಮ ಸಾಹಿತ್ಯಮಾಲೆ, ಕಲ್ಮಡ ಮತ್ತು ಕಾಜಾಣ ಸಾಹಿತ್ಯ ಮಾಲೆ, ಬೆಳ್ತಂಗಡಿ—ಇವುಗಳ ಸಂಪಾದಕ ಮಂಡಲಿಯಲ್ಲಿ ದುಡಿಯುತ್ತಿದ್ದಾರೆ. ಇವರ ಈ "ಹೊನ್ನಮ್ಮನ ಕೆರೆ" ಎಂಬ ಜಾನಪದ ಕಥನಕವನ ಸಂಗ್ರಹ ಅಖಿಲ ಕರ್ನಾಟಕ ಮಲೆನಾಡು ಜಾನಪದ ಸಾಹಿತ್ಯ ಸ್ಪರ್ಧೆಯಲ್ಲಿ ಬಹುಮಾನ ಪಡೆದಿದೆ. ಶ್ರೀ ಟಿ. ಜಿ. ಮುಡೂರುರವರು ನಮ್ಮ ಜನರಲ್ಲಿ ಬಳಕೆಯಲ್ಲಿದ್ದ "ಸುವ್ವಿ"ಯನ್ನು ಕವಿತೆಯಾಗಿ ಸೃಷ್ಟಿಸಿ ಸುವ್ವಿ ಹಾಡಿಗೊಂದು ಹೊಸ ರೂಪವನ್ನು ಕೊಟ್ಟಿದ್ದಾರೆ. ಇವರ ಈ ಕವಿತೆ ಬರೇ ವಿದ್ಯಾವಂತರಿಗೆ ತೃಪ್ತಿ ತರುವುದಲ್ಲದೆ ಹಳ್ಳಿಯ ಮೂಲೆಯಲ್ಲಿರುವ ಮಹಿಳೆಯರಿಗೆ ಇದೊಂದು ರಸವತ್ತಾದ ಸುಲಭ ಮತ್ತು ಸರಳತೆಯಿಂದ ಕೂಡಿದ ಚಿತ್ರಣ. ಹಳ್ಳಿಯಲ್ಲಿ ಗುಂಪಾಗಿ ಕೆಲಸ ಮಾಡುವ ಹೆಂಗಸರು ತಮ್ಮ ಕೆಲಸ ಬಿರುಸಿನಿಂದ ಸಾಗಲಿ ಕೆಲಸ ಬರೇ ಯಾಂತ್ರಿಕವಾಗಿರದೆ ಜೀವನಭರಿತವಾಗಿರಬೇಕೆಂದು ಈ ಹಾಡನ್ನು ಹಾಡುತ್ತಾರೆ.

—ಸಂ]

---

## ರೂಪಕದ ಕುರಿತು....

'ಹೊನ್ನಮ್ಮನ ಕೆರೆ'ಯನ್ನು ನಾನು ಸಂಗ್ರಹಿಸಿದುದು 1952ರಲ್ಲಿ. ಶ್ರೀ ಸುಬ್ರಹ್ಮಣ್ಯದಲ್ಲಿ ಅಧ್ಯಾಪಕನಾಗಿರುವ ಹೊತ್ತು ಜಾನಪದ ಸಾಹಿತ್ಯ ಸಂಗ್ರಹದ ಹವ್ಯಾಸದಲ್ಲಿದ್ದ ನನಗೆ ಅಲ್ಲಿನ ವಿದ್ಯಾರ್ಥಿಗಳ ಸಹಕಾರದಿಂದ ದೊರಕಿತು. ತುಂಬಿ....ತುಂಬಿ....ಎಂಬ ಪಲ್ಲವಿಯುಳ್ಳ ಈ ಹಾಡನ್ನು ನಾನು ಎಳವೆಯಲ್ಲೇ ಕೇಳಿದ್ದೆ. ಅದರ ಪಲ್ಲವಿಯನ್ನು ಮೆಲುಕು ಹಾಕುತ್ತಾ ಕತೆಯಿಂದ ಮನ ಕರಗಿಸಿಕೊಂಡಿದ್ದೆ. ದೊರೆತ ಸಂಗ್ರಹದಲ್ಲಿ ಸಿಕ್ಕಿದುದು ಅತ್ಯಲ್ಪ. ಅಲ್ಲಲ್ಲಿ... ಅಷ್ಟಿಷ್ಟು ಎಂಬಂತೆ. ರೂಪ ಶೈಲಿಗೆ ಭಂಗ ಬರದಂತೆ ಅದನ್ನು ಸಂಸ್ಕರಿಸಿ—ಸಂಯೋಜಿಸಿ—ಹಿಗ್ಗಿಸಿ—ಕುಗ್ಗಿಸಿ—ಕಲ್ಪಿಸಿ ರೂಪಿಸಿದಾಗ ಇದೊಂದು ಕಥನ ಕವನವಾಯಿತು.

ಇದೇ ಕಥಾವಸ್ತುವನ್ನು ಹೋಲುವ ಕೆಲವು ಜಾನಪದ ಗೀತೆಗಳು ಕತೆಗಳು ಈಗಾಗಲೇ ಬೆಳಕಿಗೆ ಬಂದಿವೆ. ಹೊನ್ನಮ್ಮನ ಕೆರೆ ಕೊಡಗು ಮತ್ತು ಕನ್ನಡ ಜಿಲ್ಲೆಗಳಲ್ಲಿ ಹೆಚ್ಚಾಗಿ ಪ್ರಚಲಿತವಿರುವ ಗೀತೆ. ಹೊನ್ನಮ್ಮನ ಕೆರೆ ಎಂಬ ಹೆಸರಿನ ಕೆರೆಗಳು ನಾಡಿನ ಕೆಲವೆಡೆಯಿರಬಹುದು. ಕೊಡಗಿನ 'ಹೊನ್ನಮ್ಮನ ಕೆರೆಯಂತೆ ಚಿಕ್ಕಮಗಳೂರು ಜಿಲ್ಲೆಯಲ್ಲೂ ಈ ಹೆಸರಿನ ಕೆರೆಯಿದೆ. ಇನ್ನೆಷ್ಟು ಕಡೆಗಳಲ್ಲಿ ಈ ಹೆಸರಿನ ಕೆರೆಗಳಿವೆಯೋ ತಿಳಿಯದು. ಕೊಡಗಿನ ಕೆರೆಯಾದರೆ ಬೃಹದಾಕಾರದ ಕೆರೆ.

ಹೊನ್ನಮ್ಮನ ಕೆರೆಯಂತೆ ಭೋಗಯ್ಯನ ಕೆರೆ – ಗುರುವಯ್ಯನ ಕೆರೆ ಮೊದಲಾದ ಹಲವು ಹೆಸರುಗಳುಳ್ಳ ಅನೇಕ ಕೆರೆಗಳು ನಮ್ಮಲ್ಲಿವೆ. ಈ ಕೆರೆಗಳ ಹಿನ್ನೆಲೆಯಲ್ಲಿ ಅಥವಾ ಇತಿಹಾಸ ಪುರಾಣ ಕಥೆಗಳಡಗಿವೆಯೋ ತಿಳಿಯದು.

1956ರಲ್ಲಿ ನಡೆದ ಅಖಿಲ ಕರ್ನಾಟಕ ಜಾನಪದ ಗೀತಾಸ್ಪರ್ಧೆಯಲ್ಲಿ ಹೊನ್ನಮ್ಮನ ಕೆರೆ ಪ್ರಥಮ ಬಹುಮಾನ ಪಡೆದಿದೆ. ಇದರ ಗದ್ಯಾನುವಾದ ಕಸ್ತೂರಿಯಲ್ಲಿ ಬೆಳಕಿಗೆ ಬಂದಿದೆ. ತರಂಗ ರೂಪಕದ ರೂಪಾಂತರವನ್ನೂ ಕೆಲವು ವರುಷದ ಹಿಂದೆಯೇ ಮಾಡಿಟ್ಟಿದ್ದೆ.

ಈ ಹೊತ್ತು ಇದನ್ನು ಪ್ರಕಟಿಸಲು ಮನ ಮಾಡಿದ ಪ್ರಕಾಶಕರನ್ನು ಸಂಗ್ರಹ ಕಾರ್ಯದಲ್ಲಿ ಹಿಂದೆ ನೆರವಾದ ವಿದ್ಯಾರ್ಥಿಗಳನ್ನು - ಸಂಯೋಜನೆಯಲ್ಲಿ ಸಹಕರಿಸಿದ ಗೆಳೆಯ ಶ್ರೀ ಸಂತರನ್ನು ಇಲ್ಲಿ ಸ್ಮರಿಸುತ್ತೇನೆ.

ಪಂಜ
15–3–70

ಮುಂದೂರು

## ಹೊಸಕೆರೆಯ ಹೊನ್ನಮ್ಮ (ಗೀತಾತರಂಗ ರೂಪಕ)

### ರೂಪಕದಲ್ಲಿ....

1. ನಿರೂಪಕ
2. ಮೇಳದವರು (ಮೂವರು)
3. ಹೊನ್ನಮ್ಮ (ಊರಗೌಡನ ಸೊಸೆ, (ಗಂಗೆಯ ಅವತಾರ)
4. ಶಿವರಾಯ (ಹೊನ್ನಮ್ಮಳ ಪತಿ (ಶಿವನ ,, )
5. ಬಸವಯ್ಯ (ಹೊನ್ನಮ್ಮಳ ಮೈದುನ (ನಂದಿಯ ,, )
6. ಮುತ್ತಯ್ಯ (ಊರ ಗೌಡ, ಹೊನ್ನಮ್ಮಳ ಮಾವ)
7. ನಂಜಮ್ಮ ,, ಅತ್ತೆ
8. ಬಲರಾಯ ,, ಭಾವ
9. ನಾಗಮ್ಮ ,, ಅಕ್ಕ
10. ತಂದೆ ಹೊನ್ನಮ್ಮಳ ತವರಿನವರು
11. ತಾಯಿ ,,
12. ಅಣ್ಣ ,,
13. ಅತ್ತಿಗೆ ,,
14. ಒಡ್ಡ — ಹೊನ್ನಮ್ಮಳನ್ನು ಬಲಿಗೊಡ್ಡಿದ ಕಾಮುಕ (ಶಾಪಗ್ರಸ್ತನಾಗಿ ಭೂಮಿಯಲ್ಲಿ ಹುಟ್ಟಿದ ಶಿವಗಣಗಳಲ್ಲೊಬ್ಬನಾದ ಭೃಂಗಿ.)

[ಮೇಳದವರಲ್ಲಿ ಒಬ್ಬನು ಮೇಳಕ್ಕೆ ಸಂಬಂಧಿಸಿದ ಚರಣ ಹಾಡುತ್ತಾನೆ. ಉಳಿದಿಬ್ಬರು 'ತುಂಬಿ.... ತುಂಬಿ....' ಪಲ್ಲವಿಯನ್ನು ರೂಪಕದ ಉದ್ದಕ್ಕೂ ಹಾಡುತ್ತಾರೆ.]

—o—

ನಿರೂಪಕ – ಅದೋ .. ಅಲ್ಲಿದೆ ಹೊನ್ನಮ್ಮನ ಕೆರೆ... ಬಟ್ಟಬಯಲಿನ ನಡುವೆ ಕಟ್ಟಿ ನಿಲಿಸಿದ ಜಲರಾಶಿ. ಜಲದೇವಿಯು ಇಲ್ಲಿ ತನ್ನ ತೆರೆಗೈಗಳಿಂದ ನರ್ತಿಸಿ ಹೊಲ ಪೈರುಗಳನ್ನು ತಲೆದೂಗಿಸುತಿದ್ದಾಳೆ. ಬನದೇವಿಯು ಹಕ್ಕಿಗಳ ಇನಿದೊರಳಿನಿಂದ ನೇಪಥ್ಯ ನೀಡುತ್ತಿರುವಳು. ಭೂರಮೆಯ ಜಲದರ್ಪಣದಲ್ಲಿ ಗರಿಮೋಡದ ನೀಲಾಕಾಶವು ಮುಖ ನೋಡಿ ಸಿಂಗರಿಸಿಕೊಳ್ಳುತ್ತಿದೆ.

ಸಿರಿಕೆರೆಯು ಬಯಲು ಹೊಲಗಳಿಗೆ – ಮನೆ ಮಠಗಳಿಗೆ - ಪಶುಪಕ್ಷಿಗಳಿಗೆ ಜೀವನಾಧಾರವಾದ ಕೆರೆ. ಈ ಹೊನ್ನಮ್ಮನ ಕೆರೆ.

ಗಂಗೆಯೇ ಹೊನ್ನಮ್ಮ. ಬರಗಾಲದ ಊರಿಗೆ ಜಲದೇವಿಯ ರೂಪದಿಂದ ಕೆರೆ ತುಂಬಿದ ಹೊನ್ನಮ್ಮ.

ಹೊನ್ನಮ್ಮನ ಕೆರೆಯ ಜಾನಪದ ಗೀತೆಯಿದನ್ನು ಊರ ಹೆಮ್ಮಕ್ಕಳು ಮೇಳದಲ್ಲಿ ಹಾಡುತ್ತಿರುವರು.

(ವೀಣೆಯ ಹಿಮ್ಮೇಳದೊಂದಿಗೆ ಹಾಡು ಕೇಳಿಬರುವುದು)

ಮೇಳ ಹತ್ತೂರು ಮುತ್ತೂರು....ತುಂಬಿ ...ತುಂಬಿ....
ಸುತ್ತೂರು ಸಿರಿಯೂರು ,,
ಹಸುರಾದ ಹೊನ್ನೂರು ,,
ಹೆಸರಾದ ನವಿಲೂರು ,,
ಸೊಸೆ ಮುದ್ದು ಹೊನ್ನಮ್ಮ ,,
ಪತಿಯಾದ್ರೆ ಶಿವರಾಯ ,,
ಮಾವಾದ್ರೆ ಮುತ್ತಯ್ಯ ,,
ಅತ್ತೆಮ್ಮ ನಂಜಮ್ಮ ,,
ಭಾವಂದ್ರು ಬಲರಾಯ ,,
ಅಕ್ಕಂದ್ರು ನಾಗಮ್ಮ ,,
ತುಂಬಿದ ಸಂಸಾರ ,,
ಹಂಚಿನ ಮನೆ ಮಾಡು ,,
ಕಂಚಿನ ಕದ ಬಾಗ್ಲು ,,
ಚೊಚ್ಚಲು ಬಸುರಾಕೆ ,,
ಸೊಸೆ ಮುದ್ದು ಹೊನ್ನಮ್ಮ ,,
ಹೆತ್ತಳು ಸಿಸು ಕಂದ ,,
ಅಷ್ಟೇನೆ ಹೊತ್ತಿಗೆ ,,
ಊರಿನ ರಾಜ್ಯಕ್ಕೆ ,,
ದಂಡೇನೆ ಒಡ್ಡಿತು ,,
ಪತಿರಾಯ ಶಿವರಾಯ ,,
ಎದೆಮಾಡಿ ದಂಡಿಗೆ ,,
ನಡೆದಾನು ಊರಲ್ಲಿ ,,
ನೀರಿಲ್ಲ ಬರಗಾಲ ,,
ಊರಿಗೆ ಊರೆಲ್ಲ ,,
ಬಾಯಾರಿ ಮರುಗಲು ,,
ಗೌಡಯ್ಯ ಮುತ್ತಯ್ಯ ,,
ಊರಿಗೆ ಹೊಸ ಕೆರೆ ,,
ತೋಡಲು ಮನಮಾಡಿ ,,
ಒಡ್ಡನ ಕರೆಸೂತ ,,
ಹೊಸಕೆರೆ ತೋಡ್ಸ್ಯಾನು ,,
ಕೆಂಗಣ್ಣ ನೀರೊಡ್ಡ ,,
ಹೆಣ್ಣಾಸೆ ಮಣ್ಣೊಡ್ಡ ,,

ಕೆಲಸಾದ ನಡುವೇನೆ....ತುಂಬಿ....ತುಂಬಿ....
ಬಣ್ಣದ ಹೊನ್ನಮ್ಮ ,,
ಅಂದಕೆ ಮರುಳಾಗಿ ,,
ಚೆಂದಾದ ಅವಳನ್ನು ,,
ಹೊಂದಾಲು ಬಯಸುತ ,,
ಗುಟ್ಟಾಗಿ ಅವಳನ್ನು ,,
ಮುಟ್ಟಾಕೆ ಹೋಗಾಲು ,,
ಸಿಟ್ಟಾದ ಹೊನ್ನಮ್ಮ ,,
ಸಿಗದಿರೊ ಹೊತ್ತಿಗೆ ,,
ಹೆಣ್ಣಿನ ಮುಯ್ಯನ್ನು ,,
ಮಣ್ಣಲ್ಲಿ ತೋರ್ಸ್ಯಾನು ,,
ಕನ್ನೆಯ ಸೇಡನ್ನು ,,
ಕೆರೆಯಲ್ಲಿ ತೀರ್ಸ್ಯಾನು ,,
ಕೆಂಗಣ್ಣ ನೀರೊಡ್ಡ ,,
ತೋರುವ ಕೆರೆಯಲ್ಲಿ ,,
ಜಲ ನೀರ ತಪ್ಪಿಸಿ ,,
ನೀರಿಲ್ದ ಕೆರೆ ಮುಂದೆ ,,
ಕೈಕಟ್ಟಿ ಕುಳಿತಾನು ,,
ಊರಿಗೆ ಊರೆಲ್ಲ ,,
ಬಾಯಾರಿ ಕುಳಿತಾರು ,,
ಗೌಡಯ್ಯ ಮುತ್ತಯ್ಯ ,,
ಚಿಂತೇನ ಬದಿಗೊತ್ತಿ ,,
ಒಡ್ಡನ ಕರೆಸೂತ ,,
ಹೇಳ್ತಾನೆ ಕೆರೆತೋಡು ,,

ಗೌಡ ಒಂದ್ವರಹ ಕೊಡ್ತೇನೆ ,,
ಒಡ್ಡನೆ ಕೆರೆ ತೋಡು ,,

ಒಡ್ಡ ಒಂದ್ವರಹಕೆ ನೀರೇನೆ ,,
ಬರಕಿಲ್ಲ ಗೌಡರೇ ,,

ಗೌಡ ಎರಡ್ವರಹ ಕೊಡ್ತೇನೆ ,,
ಒಡ್ಡನೆ ಕೆರೆ ತೋಡು ,,

ಒಡ್ಡ ಎರಡ್ವರಕೆ ನೀರೇನೆ....ತುಂಬಿ .. ತುಂಬಿ ...
ಬರಕಿಲ್ಲ ಗೌಡರೇ ,,

ಗೌಡ ಮೂರ್ವರಹ ಕೊಡ್ತೇನೆ ,,
ಒಡ್ಡನೆ ಕೆರೆ ತೋಡು ,,

ಒಡ್ಡ ಮೂರ್ವರಹಕೆ ನೀರೇನೆ ,,
ಬರಕಿಲ್ಲ ಗೌಡರೇ ,,

ಗೌಡ ನಾಕ್ವರಹ ಕೊಡ್ತೇನೆ ,,
ಒಡ್ಡನೆ ಕೆರೆ ತೋಡು ,,

ಒಡ್ಡ ನಾಕ್ವರಹಕೆ ನೀರೇನೆ ,,
ಬರಕಿಲ್ಲ ಗೌಡರೆ ,,

ಗೌಡ ಅಂಗೈಯ ತೊಳೆವಂಥ ,,
ಸಿರಿಗಿಂಡಿ ಕೊಡ್ತೇನೆ ,,

ಒಡ್ಡ ಗಿಂಡಿಗೆ ನೀರೇನೇ ,,
ಬರಕಿಲ್ಲ ಗೌಡರೇ ,,

ಗೌಡ ಮುಂಗೈಯ ತೊಳೆವಂಥ ,,
ಹಿರಿ ಚೆಂಬು ಕೊಡ್ತೇನೆ ,,

ಒಡ್ಡ ಚೆಂಬಿಗೆ ನೀರೇನೇ ,,
ಬರಕಿಲ್ಲ ಗೌಡರೇ ,,

ಗೌಡ ಮೊಸರನ್ನ ಉಣ್ಣುವ ,,
ಗಂಗ್ಳಾವ ಕೊಡ್ತೇನೆ ,,

ಒಡ್ಡ ಗಂಗ್ಳಾಕೆ ನೀರೇನೆ ,,
ಬರಕಿಲ್ಲ ಗೌಡರೇ ,,

ಗೌಡ ಕರೆಯುವ ಕಪಿಲೆಯ ,,
ವೈ ಸವರಿ ಕೊಡ್ತೇನೆ ,,

ಒಡ್ಡ ಕಪಿಲೆಗೆ ನೀರೇನೆ ....ತುಂಬಿ....ತುಂಬಿ....
ಬರಕಿಲ್ಲ ಗೌಡರೇ ,,

ಗೌಡ ಉಳುವಂಥ ಎತ್ತಿನ ,,
ಭುಜ ಸವರಿ ಕೊಡ್ತೇನೆ ,,

ಒಡ್ಡ ಎತ್ತಿಗೆ ನೀರೇನೆ ,,
ಬರಕಿಲ್ಲ ಗೌಡರೇ ,,

ಗೌಡ ಕಂಬ್ಳಕ್ಕೆ ಕಟ್ಟಿದ ,,
ಕೋಣನ ಕೋಡ್ತೇನೆ ,,

ಒಡ್ಡ ಕೋಣಕ್ಕೆ ನೀರೇನೆ ,,
ಬರಕಿಲ್ಲ ಗೌಡರೇ ,,

ಗೌಡ ನೋಟಕ್ಕೆ ಮೇಲಾದ ,,
ಆನೆಯ ಕೊಡ್ತೇನೆ ,,

ಒಡ್ಡ ಆನೆಗೆ ನೀರೇನೆ ,,
ಬರಕಿಲ್ಲ ಗೌಡರೇ ,,

ಗೌಡ ಓಟಕ್ಕೆ ಮೇಲಾದ ,,
ಕುದುರೆಯ ಕೊಡ್ತೇನೆ ,,

ಒಡ್ಡ ಕುದುರೆಗೆ ನೀರೇನೆ ,,
ಬರಕಿಲ್ಲ ಗೌಡರೇ ,,

ಗೌಡ ಹಾಸು ಪಟ್ಟೆಯ ,,
ಹಾಸಿಗೆ ಕೊಡ್ತೇನೆ ,,

ಒಡ್ಡ ಹಾಸಿಗೆಗೆ ನೀರೇನೆ ,,
ಬರಕಿಲ್ಲ ಗೌಡರೇ ,,

ಗೌಡ ಬೀಸುವ ಬೆಳ್ಳಿಯ ,,
ಬೀಸಣಿಗೆ ಕೊಡ್ತೇನೆ ,,

ಒಡ್ಡ ಬೀಸಣಿಗೆಗೆ ನೀರೇನೆ ,,
ಬರಕಿಲ್ಲ ಗೌಡರೇ ,,

( ಕುಸು ತಡೆದು ನಿಡು ಯಾಚನಾ ದನಿಯಿಂದ )

ಗೌಡ  ಇನ್ನೇನು ಕೊಡಲಿ ನಾ ತುಂಬಿ ... ತುಂಬಿ ...
ಒಡ್ಡನೆ ನಿನಗಾದ್ರೆ ,,

ಒಡ್ಡ  ಗೌಡರೆ ನೀವಾದ್ರೆ ,,
ನಿಮ್ಮಯ ಸೊಸೆ ಮುದ್ದು ,,
ಮಗು ತಾಯ ಹೊನ್ನಮ್ಮ ,,
ಹೊಸ ಕೆರೆಗೆ ಒಂದೇನೆ ,,
ಕೊಟ್ಟದ್ದೆ ಹೌದಾದ್ರೆ ,,
ನೀರೇನೆ ಬರ್‍ತದೆ ,,
ಕೆರೆ ತುಂಬಿ ನಿಲ್ತದೆ ,,

ಮೇಳ  ಅಷ್ಟೇನೆ ಹೊತ್ತಿಗೆ ,,
ಆ ಒಂದು ಮಾತಿಗೆ ,,
ಗೌಡಯ್ಯ ಮುತ್ತಯ್ಯ ,,
ಕುಸಿದೊಮ್ಮೆ ಕುಳಿತಾನು ,,
ತಲೆಗೈಯ ಹೊತ್ತಾನು ,,
ಮರುಗುತ ಹೇಳ್ಯಾನು ,,

ಗೌಡ  ನೀರೊಡ್ಡ ,,
ಎಂತು ನಾ ಕೊಡಲಯ್ಯೋ ,,
ಹ್ಯಾಂಗೆ ನಾ ಕೊಡಲಯ್ಯೋ ,,
ಸೊಸೆ ಮುದ್ದು ಹೊನ್ನಮ್ಮ ,,
ಪತಿರಾಯ ಶಿವರಾಯ ,,
ದಂಡಿಗೆ ಹೋಗ್ಯಾನೆ ,,
ಹೊಸ ಕೆರೆ ಒಂದಾಗಿ ,,
ಕೊಡಲೆಂತು ನೀಳೊಡ್ಡ ,,

ಒಡ್ಡ  ಗೌಡರೇ ನೀವಾದ್ರೆ ,,
ಊರಿಗೆ ನೀರಿಗೆ ,,
ಹೊಸ ಕೆರೆ ನೀರಿಗೆ ,,
ಸಿಸುತಾಯಿ ಹೊನ್ನಮ್ಮ ,,
ಬಲಿಯಾಗಿ ಕೊಡಬೇಕು ,,
ಬೇರೇನು ಕೊಟ್ಟರು ,,
ನೀಳೇನೆ ಬರಕಿಲ್ಲ ,,

ಗೌಡ  ನೀರೊಡ್ಡ ನಿನಗಾದ್ರೆ ....ತುಂಬಿ....ತುಂಬಿ ...
ಮಡದಿಯ ಜತೆಗೂಡಿ ,,
ಮಾತ್ನಾಡಿ ಹೇಳ್ತೇನೆ ,,
ಹೊಸಕೆರೆ ಬಲಿಯನ್ನು ,,
ಮತ್ತೇನೆ ಹೇಳ್ತೇನೆ ,,

ಮೇಳ  ಇಂತೆಂದು ಗೌಡಯ್ಯ ,,
ಮಡದಿಯ ಬಳಿ ಸಾರಿ ,,
ನುಡಿದಾನು ಬಲಿಯನ್ನು ,,
ಬಲು ಹೊತ್ತು ಚಿಂತಿಸಿ ,,
ಬಲು ಹೊತ್ತು ಧ್ಯಾನಿಸಿ ,,
ಊರಿಗೆ ಜೀವೊಂದು ,,
ಮೇಲಲ್ಲ ನೀರಿಗೆ ,,
ಬಲಿಯಾದ ಪುಣ್ಯಕ್ಕೆ ,,
ಊರೊಂದು ಉಳಿತಾಯ ,,
ಎಂದೆಲ್ಲ ನೆನೆದಾರು ,,
ಕೊನೆಗೊಮ್ಮೆ ಹೊನ್ನಮ್ಮ ,,
ಬಲಿಗಾಗಿ ಒಪ್ಪಿದಾರು ,,
ಅಷ್ಟೇನೆ ಹೊತ್ತಿಗೆ ,,
ಮೈದುನ ಬಸವಯ್ಯ ,,
ಬಲಿಯನ್ನು ತಿಳಿದೊಮ್ಮೆ ,,
ಮುಳುಮುಳು ಅಳುತೊಮ್ಮೆ ,,
ಹೊನ್ನಮ್ಮ ಬಳಿಸಾರಿ ,,
ಮರುಗುತ ಹೇಳ್ತಾನೆ ,,

ಬಸವಯ್ಯ  ಅತ್ತಿಗೆ ಅತ್ತಿಗೆ ,,
ಇಂದಿನ ಸಂಜೆಗೆ ,,
ಹೊಸಕೆರೆ ಒಂದಾಗಿ ,,
ಕೊಡ್ತಾರೆ ನಿನ್ನನ್ನು ,,

ಮೇಳ  ಹೊನ್ನಮ್ಮ ಹೊನ್ನಮ್ಮ ,,
ಸಿಸು ತಾಯಿ ಹೊನ್ನಮ್ಮ ,,
ಬಲಿಯನ್ನು ಕೇಳಿದಾಳು ,,
ಒಮ್ಮೆಗೆ ನೆನೆದಾಳು ,,

ಮುಳ್ಳಾಗಿ ನೆಲದಲ್ಲಿ ತುಂಬಿ....ತುಂಬಿ....
ಕಲ್ಲಾಗಿ ಮನದಲ್ಲಿ ,,
ಬಲು ಹೊತ್ತು ನೆನೆದಾಳು ,,
ಅಳುವನ್ನು ತಡೆದಾಳು ,,
ಬಳಬಳ ಕಣ್ಣೀರ ,,
ಇಳಿಸುತ ಬಸವಯ್ಯ ,,
ಮೈಸವರಿ ಅಂದಾಳು ,,
ತೊಟ್ಟಿಲ ಸಿಸುವನ್ನು ,,
ತೆಗೆದಪ್ಪಿ ಅಂದಾಳು ,,

ಹೊನ್ನಮ್ಮ ಮೈದುನ ಬಸವಯ್ಯ ,,
ಅಳಬೇಡ ಬಲಿಗಾಗಿ ,,
ಊರಿನ ಕೆರೆಗಾಗಿ ,,
ಹೋಗ್ತೇನೆ ಬಸವಯ್ಯ ,,
ಕಂದಯ್ಯ ಸಿಸು ನೀನು ,,
ಇಂದಿಗೆ ತಬ್ಬಲಿ ,,
ಹೊಸಕೆರೆ ನೀರಿಗೆ ,,
ಹೋಗ್ತೇನೆ ನಾನಿಂದು ,,

ಮೇಳ ಇಳಿಯುವ ಕಣ್ಣೀರ ,,
ಸೆರಗೀಲಿ ಒರಸ್ಯಾಳು ,,
ಅಷ್ಟೇನೆ ಹೊತ್ತಿಗೆ ,,
ಅತ್ತೆಮ್ಮ ನಂಜಮ್ಮ ,,
ಮರುಕವ ತಂದ್ಕೊಂಡು ,,
ಹೊನ್ನಮ್ಮ ಬಳಿ ಸಾರಿ ,,
ಮರುಗುತ ನುಡಿದಾಳು ,,

ನಂಜಮ್ಮ ಹೊನ್ನಮ್ಮ ಹೊನ್ನಮ್ಮ ,,
ಸೊಸೆ ಮುದ್ದು ಹೊನ್ನಮ್ಮ ,,
ಹೊಸ ಕೆರೆ ನೀರಗೆ ,,
ನಿನ್ನ ಮಾವ್ನವರು ಹೇಳಿದಾರೆ ,,
ಹೋಗ್ಬೇಕು ಹೊನ್ನಮ್ಮ ,,
ಚಿನ್ನಾದ ಕೊಡಪಾನ ,,
ಬೆಳ್ಳಿಯ ನೇಣನ್ನು ,,

ಹಿಡಕೊಂಡು ಹೋಗ್ಬೇಕು ತುಂಬಿ....ತುಂಬಿ....
ನಿನ್ನ ಮಾವನವರು ಹೇಳಿದಾರೆ ,,

ಮೇಳ ಹೊನ್ನಮ್ಮನಾದರೆ ,,
ಅತ್ತೆಯ ಮರುಕವ ,,
ಅರಿತಿಂತು ನುಡಿದಾಳು ,,

ಹೊನ್ನಮ್ಮ ಅತ್ತೆಮ್ಮ ಅತ್ತಮ್ಮ ,,
ನನ್ನ ತವರಿಗೆ ಒಂದ್ಹೊಂತ್ತು ,,
ಹೋಗಿ ನಾ ಬರ್ತೇನೆ ,,

ಮೇಳ ಅತ್ತೆಮ್ಮ ನಂಜಮ್ಮ ,,
ಸೊಸೆಗಾದ್ರೆ ಹೇಳ್ತಾಳೆ ,,

ನಂಜಮ್ಮ ಹೊನ್ನಮ್ಮ ಹೊನ್ನಮ್ಮ ,,
ನೀನು ತವರಿಗೆ ಹೋಗೊದಿದ್ರೆ ,,
ನನ್ನಲ್ಲಿ ಹೇಳಿ ನೀ ,,
ಹೋಗ್ಬೇಡ ಹೊನ್ನಮ್ಮ ,,
ನಿನ್ನ ಮಾವ್ನಲ್ಲಿ ಹೇಳಿ ನೀ ,,
ಹೋಗು ನೀ ಹೊನ್ನಮ್ಮ ,,

ಮೇಳ ಹೊನ್ನಮ್ಮನಾದರೆ ,,
ಮಾವಯ್ನ ಬಳಿ ಸಾರಿ ,,
ಹೇಳ್ತಾಳೆ ತಲೆ ಬಾಗಿ ,

ಹೊನ್ನಮ್ಮ ಮಾವಯ್ಯ ಮಾವಯ್ಯ ,,
ನನ್ನ ತವರಿಗೆ ಒಂದೊತ್ತು ,,
ಹೋಗಿ ನಾ ಬರ್ತೇನೆ ,,

ಮೇಳ ಅಷ್ಟೇನೆ ಹೊತ್ತಿಗೆ ,,
ಮಾವಯ್ಯ ಮುತ್ತಯ್ಯ ,
ಮರುಗುತ ಹೇಳ್ತಾರೆ ,,

ಮುತ್ತಯ್ಯ  ಹೊನ್ನಮ್ಮ ಹೊನ್ನಮ್ಮ ತುಂಬಿ.... ತುಂಬಿ
ಸೊಸೆ ಮುದ್ದು ಹೊನ್ನಮ್ಮ ,,
ನೀನು ತವರಿಗೆ ಹೋಗೊದಿದ್ರೆ ,,
ನನ್ನಲ್ಲಿ ಹೇಳಿ ನೀ ,,
ಹೋಗ್ಬೇಡ ಹೊನ್ನಮ್ಮ ,,
ನಿನ್ನ ಭಾಯ್ನಲ್ಲಿ ಹೇಳಿ ನೀ ,,
ಹೋಗ್ಬೇಕು ಹೊನ್ನಮ್ಮ ,,

ಮೇಳ  ಹೊನ್ನಮ್ಮನಾದರೆ ,,
ಭಾವಯ್ನ ಬಳಿ ಸಾರಿ ,,
ಮರುಗುತ ಹೇಳ್ತಾಳೆ ,,

ಹೊನ್ನಮ್ಮ  ಭಾವಯ್ಯ ಭಾವಯ್ಯ ,,
ನನ್ನ ತವರಿಗೆ ಒಂದೊತ್ತು ,,
ಹೋಗಿ ನಾ ಬರ್ತೇನೆ ,,

ಮೇಳ  ಅಷ್ಟೇನೆ ಹೊತ್ತಿಗೆ ,,
ಭಾವಯ್ಯ ಬಲರಾಮು ,,
ಮರುಗುತ ಹೇಳ್ತಾರೆ ,,

ಬಲರಾಯ  ಹೊನ್ನಮ್ಮ ಹೊನ್ನಮ್ಮ ,,
ನೀನು ತವರಿಗೆ ಹೋಗೋದಿದ್ರೆ ,,
ನನ್ನಲ್ಲಿ ಹೇಳಿ ನೀ ,,
ಹೋಗ್ಬೇಡ ಹೊನ್ನಮ್ಮ ,,
ನಿನ್ನ ಅಕ್ಕನಲ್ಲಿ ಹೇಳಿ ನೀ ,,
ಹೋಗ್ಬೇಕು ಹೊನ್ನಮ್ಮ ,,

ಮೇಳ  ಹೊನ್ನಮ್ಮನಾದರೆ ,,
ಅಕ್ಕಯ್ಯ ಬಳಿಸಾರಿ ,,
ಮರುಗುತ ಹೇಳ್ತಾಳೆ ,,

ಹೊನ್ನಮ್ಮ  ಅಕ್ಕಯ್ಯ ಅಕ್ಕಯ್ಯ ,,
ನನ್ನ ತವರಿಗೆ ಒಂದೊತ್ತು ,,
ಹೋಗಿ ನಾ ಬರ್ತೇನೆ ,,

ಮೇಳ  ಅಷ್ಟೇಳ ಹೊತ್ತಿಗೆ  ತುಂಬಿ . ತುಂಬಿ
ಅಕ್ಕಯ್ಯ ನಾಗಮ್ಮ ,,
ಮರುಗುತ ಹೇಳ್ತಾಳೆ ,,

ನಾಗಮ್ಮ  ಹೊನ್ನಮ್ಮ ಹೊನ್ನಮ್ಮ ,,
ನೀನು ತವರಿಗೆ ಹೋಗೊದಿದ್ರೆ ,,
ನನ್ನಲ್ಲಿ ಹೇಳಿ ನೀ ,,
ಹೋಗ್ಬೇಡ ಹೊನ್ನಮ್ಮ ,,
ನಿನ್ನ ಮೈದೂನ ಬಸವಯ್ಯ ,,
ಸಂಗ್ಡಾನೆ ಹೇಳಿ ನೀ ,,
ಹೋಗ್ಬೇಕು ಹೊನ್ನಮ್ಮ ,,

ಮೇಳ  ಹೊನ್ನಮ್ಮನಾದರೆ ,,
ಮೈದೂನ ಬಸವಯ್ಯ ,,
ಬಳಿ ಸಾರಿ ಹೇಳ್ತಾಳೆ ,,

ಹೊನ್ನಮ್ಮ  ಮೈದೂನ ಮೈದೂನ ,,
ನನ್ನ ತವರಿಗೆ ಒಂದೊತ್ತು ,,
ಹೋಗಿ ನಾ ಬರ್ತೇನೆ ,,

ಮೇಳ  ಅಷ್ಟೇನೆ ಹೊತ್ತಿಗೆ ,,
ಮೈದೂನ ಬಸವಯ್ಯ ,,
ಮರುಗುತ ಹೇಳ್ತಾನೆ ,,

ಬಸವಯ್ಯ  ಅತ್ತಿಗೆ ಅತ್ತಿಗೆ ,,
ಹೋಗಿ ಬಾ ತವರಿಗೆ ,,
ನಿದ್ದೆಯ ಮಾಡಿದಂತ ,,
ತೊಟ್ಲಲ ಸಿಸುಕಂದ ,,
ಏಳುವ ಒಳಗಾದ್ರೆ ,,
ಬರಬೇಕು ಅತ್ತಿಗೆ ,,

ಮೇಳ  ಹೊನ್ನಮ್ಮನಾದರೆ ,,
ಬಸವಯ್ಯ ಮಾತಿಗೆ ,,
ಮರುಮಾತನೆತ್ತದೆ ,,
ಹೊರಟಾಳು ತವರಿಗೆ ,,

ಬಲದಾವ ಕೈಯಲ್ಲಿ ತುಂಬಿ ...ತುಂಬಿ....
ಕಿರುಗತ್ತಿ ಹಿಡಿದಾಳು ,,
ಉಡದಾವ ಕೈಯಲ್ಲಿ ,,
ಪನೆಗೊಡೆ ಹಿಡಿದಾಳು ,,
ಸೊಸೆ ಮುದ್ದು ಹೊನ್ನಮ್ಮ ,,
ತವರಿಗೆ ನಡೆದಾಳು ,,
ತವರೂರ ದಾರೀಲಿ ,,
ಕಲ್ಲಿಲ್ಲ ಮುಳ್ಳಿಲ್ಲ ,,
ಸಾಸಿವೆಯಷ್ಟೂನೂ ,,
ಮಳಲಿಲ್ಲ ಬಿಸಿಲಿಲ್ಲ ,,
ಸಣ್ಣಕ್ಕಿ ಬಯಲಿಗೆ ,,
ಇಳಿದಾಳು ಹೊನ್ನಮ್ಮ ,,
ಕೆಂದಾಳೆ ತೆವರೇರಿ ,,
ನಡೆದಾಳು ಹೊನ್ನಮ್ಮ ,,
ತವರೂರ ಹೊಲನೆಲ ,,
ಹೊನ್ನವ್ನ ಕಾಲಿಗೆ ,,
ಹಸುರಾಸೆ ಹಾಸಿತು ,,
ಚೆಂದೆಂಗು ತಲೆದೂಗಿ ,,
ಬೀಸಣಿಗೆ ಬೀಸಿತು ,,
ಕದಳಿಯು ಗೊನೆಬಾಗಿ ,,
ಕೈಮುಗಿದಾಡಿತು ,,
ತಂಗಾಳಿ ಮುಂಗುರುಳ ,,
ಮುದ್ದಿಸಿ ನಡೆಸಿತು ,,
ಕಾಣಲು ತವರ್ಮನೆ ,,
ನಡೆದಾಳು ಹೊನ್ನಮ್ಮ ,,
ಕಂಚಿನ ಮನೆ ಮಾಡು ,,
ಕಂಚಿನ ಕದಜೋಡು ,,
ಏಳೂವ ಉಪ್ಪರಿಗೆಂದ ,,
ಮೇಲೂವ ಉಪ್ಪರಿಗೇಲಿ ,,
ಹೊನ್ನಮ್ಮ ತಾಯಮ್ಮ ,,
ನೋಡಿದಾಳು ಮಗಳನ್ನು ,,
ನುಡಿದಾಳು ತಾಯಮ್ಮ ,,

ತಾಯಿ ಹೊನ್ನಮ್ಮ ಹೊನ್ನಮ್ಮ ,,
ನನಕಂದ ಹೊನ್ನಮ್ಮ ,,

ಓಡ್ಯೋಡಿ ಬರ್‍ತಾಳೆ ತುಂಬಿ....ತುಂಬಿ....
ಮುದ್ದಿನ ಮಗಳವಳು ,,
ಹಬ್ಬಾಂದ್ರೆ ಬರೋಳಲ್ಲ ,,
ಕಡೆಗಂಜಿ ಮಗಳವಳು ,,
ಹೊಸ್ತೂಂದ್ರೆ ಬರೋಳಲ್ಲ ,,
ಏನ್ಕಂಡು ಬಂದಾಳೊ ,,
ಒಬ್ಬಾಗಿ ಬರ್‍ತಾಳೆ ,,
ಎಂತು ಕಂಡು ಬಂದಾಳೊ ,,
ಮುಖ ಕಂದಿ ಬರ್‍ತಾಳೆ ,,

ಮೇಳ ಅಷ್ಟೇನೆ ಹೊತ್ತಿಗೆ ,,
ತವರ್ಮನೆ ಬಾಗಿಲಿಗೆ ,,
ಮುಟ್ಟಿದಾಳು ಹೊನ್ನಮ್ಮ ,,
ತಾಯಮ್ಮನಾದರೆ ,,
ತೂಗುವ ಮಂಚಕ್ಕೆ ,,
ರತ್ನದ ಕಂಬಳಿ ,,
ಹಾಸಿದಾಳು ಗಿಂಡೀಲಿ ,,
ಪಾತಾಳ ಪೊನ್ನೀರ ,,
ತಂದೇನೆ ಕೊಟ್ಟಾಳು ,,
ಹೊನ್ನಮ್ಮನಾದರೆ ,,
ಕಂಚೀನ ಗಿಂಡೀಲಿ ,,
ಕೈಕಾಲು ತೊಳೆದಾಳು ,,
ಬೆಳ್ಳಿಯ ಗಿಂಡೀಲಿ ,,
ನೊರೆಹಾಲು ಕುಡಿದಾಳು ,,
ತೌರ್ಮನೆ ದೊಡ್ಡಿಯ ,,
ಬಾಗಿಲಿಗೆ ಹೋದಾಳು ,,
ನೂರೊಂದು ಗೋವುಗಳ ,,
ಕಣ್ತುಂಬ ನೋಡಿದಳು ,,
ನೂರೊಂದು ಕರುಗಳ ,,
ಮುದ್ದಿಸಿ ನಡೆದಾಳು ,,
ಆನೆಯ ಲಾಯಕ್ಕೆ ,,
ನಡೆದಾಳು ಹೊನ್ನಮ್ಮ ,,
ನೂರೊಂದು ಆನೆಗಳ ,,
ನೋಡಿದಳು ಹೊನ್ನಮ್ಮ ,,
ಕುದುರೆಯ ಲಾಯಕ್ಕೆ ,,

ನಡೆದಾಳು ಹೊನ್ನಮ್ಮ ತುಂಬಿ....ತುಂಬಿ ...
ಮೂರೊಂದು ಕುದುರೆಗಳ ,,
ನೋಡಿದಳು ಹೊನ್ನಮ್ಮ ,,
ತಾಯಿಯ ಬಳಿಸಾರಿ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ ತಾಯಮ್ಮ ತಾಯಮ್ಮ ,,
ನನಗೊಂದು ತುತ್ತನ್ನ ,,
ಕೊಡ್ಬೇಕು ತಾಯಮ್ಮ ,,

ಮೇಳ ತಾಯಿಯ ತುತ್ತನ್ನ ,,
ನುಂಗೊಂಡು ಹೊನ್ನಮ್ಮ ,,
ತಂದೆಯ ಬಳಿ ಸಾರಿ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ ತಂದೆಪ್ಪ ತಂದೆಪ್ಪ ,,
ನನಗೊಂದು ತುತ್ತನ್ನ ,,
ಕೊಡ್ಬೇಕು ತಂದೆಪ್ಪ ,,

ಮೇಳ ತಂದೆಯ ತುತ್ತನ್ನ ,,
ನುಂಗೊಂಡು ಹೊನ್ನಮ್ಮ ,,
ಅಣ್ಣಯ್ನ ಬಳಿ ಸಾರಿ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ ಅಣ್ಣಯ್ಯ ಅಣ್ಣಯ್ಯ ,,
ನನಗೊಂದು ತುತ್ತನ್ನ ,,
ಕೊಡ್ಬೇಕು ಅಣ್ಣಯ್ಯ ,,

ಮೇಳ ಅಣ್ಣಯ್ಯ ತುತ್ತನ್ನ ,,
ನುಂಗೊಂಡು ಹೊನ್ನಮ್ಮ ,,
ಅತ್ತಿಗೆಯ ಬಳಿಸಾರಿ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ ಅತ್ತಿಗಮ್ಮ ಅತ್ತಿಗಮ್ಮ....ತುಂಬಿ . ತುಂಬಿ
ನನಗೊಂದು ತುತ್ತನ್ನ ,,
ಕೊಡ್ಬೇಕು ಅತ್ತಿಗಮ್ಮ ,,

ಮೇಳ ತವರೋರ ತುತ್ತನ್ನ ,,
ನುಂಗೊಂಡು ಹೊನ್ನಮ್ಮ ,,
ಅಂಗಳಕ್ಕೆ ಇಳಿದಾಳು ,,
ತುಳಸಿಯ ಗಿಡವನ್ನು ,,
ತಂದಲ್ಲಿ ನೆಟ್ಟಾಳು ,,
ತವರೀನ ಮುಖನೋಡಿ ,,
ಮರುಗುತ ನುಡಿದಾಳು ,,

ಹೊನ್ನಮ್ಮ ತಾಯಮ್ಮ ತಂದೆಪ್ಪ ,,
ಅಣ್ಣಯ್ಯ ಅತ್ತಿಗಮ್ಮ ,,
ಈ ತುಳಸಿ ಗಿಡವಾದ್ರೆ ,,
ಎಂದಿಗೆ ಬಾಡಿತೊ ,,
ಅಂಗಿಗೆ ನನ್ನಾವ ,,
ಆಸೆಯ ಬಿಡಬೇಕು ,,

ಮೇಳ ಹೊನ್ನಮ್ಮ ಮಾತಿಗೆ ,,
ತವರೂರ ಮನೆ ಮುಂದಿ ,,
ಬೆರಗಾಗಿ ಹೇಳ್ತಾರೆ ,,
ಹೊನ್ನಮ್ಮ ತಂದೆಪ್ಪ ,,
ಮಗಳನ್ನು ಕೇಳ್ತಾರೆ ,,

ತಂದೆ ಹೊನ್ನಮ್ಮ ಹೊನ್ನಮ್ಮ ,,
ಅಂತೊಂದು ಏನ್ಕಷ್ಟ ,,
ಬಂದಿದೆ ನನಕಂದ ,,

ಮೇಳ ತಾಯಮ್ಮ ಕೇಳ್ತಾರೆ ,,

ತಾಯಿ ಹಾಗಂತ ಏನುದುಃಖ ,,
ಬಂದಿದೆ ನನ ಮಗಳೇ

ದೋಳ  ಅಣ್ಣಯ್ಯ ಹೇಳ್ತಾನೆ ತುಂಬಿ....ತುಂಬಿ....

ಅಣ್ಣ  ಯಾವಂತ ಕಷ್ಟವು ,,
ಬಂದಿದೆ ನನ ತಂಗೀ ,,

ಮೇಳ  ಅತ್ತಿಗೆ ಹೇಳ್ತಾಳೆ ,,

ಅತ್ತಿಗೆ  ಯಾಕಂತ ದುಃಖವು ,,
ಬಂದಿದೆ ನಾದಿನಿ ,,

ಮೆಳ  ಹೊನ್ನಮ್ಮನಾದರೆ ,,
ಮರುಗುತ ಹೇಳ್ತಾಳೆ ,,

ಹೊನ್ನಮ್ಮ  ಅಂಶೊಂದು ಕಷ್ಟವು ,,
ಹಾಗಂತ ದುಃಖವು ,,
ಬಂದಿಲ್ಲ ನನಗಾದ್ರೆ ,,
ತಾಯಮ್ಮ ತಂದೆಪ್ಪ ,,
ನಿಮ್ಮಳಿಯ ನವರಾದ್ರೆ ,,
ದಂಡಿಗೆ ಹೋಗಿದಾರೆ ,,
ಅಣ್ಣಯ್ಯ ಅಣ್ಣಯ್ಯ ,,
ನಿನ ಭಾವನವರಾದ್ರೆ ,,
ದಂಡಿಗೆ ಹೋದವರು ,,
ಅತ್ತಿಗಮ್ಮ ಅತ್ತಿಗಮ್ಮ ,,
ನನ್ನಯ ಪತಿರಾಯ ,,
ಬರಲಿಲ್ಲ ದಂಡಿಂದ ,,

ಮೇಳ  ಮರುಗುವ ಮಗಳನ್ನು ,,
ಮೈದಡವಿ ತಾಯ್ತುಂದೆ ,,
ಕೊರಗುವ ತಂಗಿಯ ,,
ಮುಖ ನೋಡಿ ಅಣ್ಣಯ್ಯ ,,
ಕಣ್ಣೊರಸಿ ಅತ್ತಿಗೆ ,,
ಹೇಳ್ತಾರೆ ಜತೆಯಾಗಿ ,,

ತಂದೆ  ಅಳಬೇಡ ನನ ಕಂದ ,,

ತಾಯಿ  ಅಳಬೇಡ ನನ ಮಗಳೆ  ತುಂಬಿ....ತುಂಬಿ....

ಅಣ್ಣ  ಅಳಬೇಡ ನನ ತಂಗಿ ,,

ಅತ್ತಿಗೆ  ಅಳಬೇಡ ನಾದಿನಿ ,,

ತಂದೆ  ನಿನ್ನಾವ ಹಣೆ ಬೊಟ್ಟು ,,
ಕುಂಕುಮ ವಿರೊದಾದ್ರೆ ,,

ತಾಯಿ  ನಿನ್ನಾವ ಮುತ್ತೈದೆ ,,
ಎದೆ ತಾಳಿ ಇರೊದಾದ್ರೆ ,,

ಅಣ್ಣ  ನಿನ್ನಾವ ಕಿವಿಯೋಳೆ ,,
ಭಾಗ್ಯವೆ ಇರೋದಾದ್ರೆ ,,

ಅತ್ತಿಗೆ  ನಿನ್ನಾವ ಪತಿರಾಯ ,,
ಬರುತಾರೆ ಹೊನ್ನಮ್ಮ ,,

ಮೇಳ  ಅಷ್ಟೇನೆ ಹೊತ್ತಿಗೆ ,,
ಹೊರಟಾಳು ಹೊನ್ನಮ್ಮ ,,
ಕಣ್ಣೀರನಿಳಿಸುತ ,,
ತವರಿಳಿದ ಹೊನ್ನಮ್ಮ ,,
ತಡೆದೊಮ್ಮೆ ತಾಯ್ತುಂದೆ ,,
ಅಣ್ಣಯ್ಯ ಅತ್ತಿಗೆ ,,
ಜತೆಗೂಡಿ ಹೇಳ್ತಾರೆ ,,

ತಂದೆ  ನನ ಕಂದ ಹೊನ್ನಮ್ಮ ,,
ಹೋಗ್ಬೇ ಇಂದಿಗೆ ,,

ತಾಯಿ  ನಿನ್ನಾವ ತೊಟ್ಟಿಲು ,,
ಕಂದನ ನಾದರೆ ,,

ಅಣ್ಣ  ಕಾಲಾಳು ಮೇಲಾಳು ,,
ನಂಡಿಗೆ ತಳಿಸುತ ,,

ಅತ್ತಿಗೆ ತರಿಸುವ ಇಂದಿಗೆ ತುಂಬಿ....ತುಂಬಿ....
ಹೋಗ್ಬೇಡ ಹೊನ್ನಮ್ಮ ,,

ಮೇಳ ಎನ್ನುವ ಹೊತ್ತಿಗೆ ,,
ಹೇಳ್ತಾಳೆ ಹೊನ್ನಮ್ಮ ,,

ಹೊನ್ನಮ್ಮ ತಾಯಮ್ಮ ತಂದೆಪ್ಪ ,,
ಅಣ್ಣಯ್ಯ ಅತ್ತಿಗಮ್ಮ ,,
ಹಾಗೇನು ಮಾಡ್ಬೇಡಿ ,,
ನಾನಾದ್ರೆ ಹೋಗ್ತಾನೆ ,,
ನಾನೀಗ ಬರುವಾಗ ,,
ಹೊಟ್ಟೆಯ ನೋಡಿದಿರಿ ,,
ನಾನೀಗ ಹೋಗುವಾಗು ,,
ನನ್ನ ಬೆನ್ನನ್ನೆ ನೋಡ್ಕೊಳ್ಳಿ ,,

ಮೇಳ ಹೇಳಿದಾಳು ಹೊನ್ನಮ್ಮ ,,
ನಡೆದಾಳು ಹೊನ್ನಮ್ಮ ,,
ನೆಂದಾರೆ ತೆವರೀಲಿ ,,
ಸಣ್ಣಕ್ಕಿ ಬಯಲಲ್ಲಿ ,,
ನಿಂತೊಮ್ಮೆ ಅಲ್ಲಲ್ಲಿ ,,
ತೆವರತ್ತಿ ತವರೂರ ,,
ತಿರುಗೊಮ್ಮೆ ನೋಡ್ಕೊಂಡು ,,
ನಡೆದಾಳು ಹೊನ್ನಮ್ಮ ,,
ತೆವರೂರು ನವಿಲೂರು ,,
ಮರೆಯಾಗೆ ಕಣ್ಣಿಗೆ ,,
ನೆನೆದಾಳು ಹೊನ್ನೂರ ,,
ತೊಟ್ಟಿಲ ಸಿಸು ಕಂದ ,,
ಎಚ್ಚತ್ತು ಕೂಗ್ತಾನೆ ,,
ನಿದ್ದೆಯ ಕಣ್ಣಿಲೆ ,,
ಹಸಿತಾನೆ ಎಂಬಷ್ಟೆ ,,
ಹೊತ್ತಿಗೆ ಮನೆಯನ್ನು ,,
ಮುಟ್ಟಿದಾಳು ಹೊನ್ನಮ್ಮ ,,
ಕಂದನ ಕೈಗೆತ್ತಿ ,,
ನೆತ್ತಿಗೆ ಮುತ್ತಿಟ್ಟು ,,
ಮಾಲೆಯಿಂಟೆ ಕೊಟ್ಟಾಳು ,,

ತೊಟ್ಟಿಲಿಗೆ ಹಾಕುತ ತುಂಬಿ .. ತುಂಬಿ ...
ಹೇಳಿದಾಳು ಕಂದನಿಗೆ ,,

ಹೊನ್ನಮ್ಮ ಕಂದಯ್ಯ ಕಂದಯ್ಯ ,,
ಇಂದಿಗೆ ನಿನತಾಯ ,,
ಮೊಲೆಹಾಲು ಮುಗಿತಾಯ ,,
ಇಂದಿಗೆ ನನ್ನಾವ ,,
ಸವಿಮುತ್ತು ಮುಗಿತಾಯ ,,
ಹಸುಗೂಸು ಕಂದಯ್ಯ ,,
ಅಳಬೇಡ ಹಸಿವಿಗೆ ,,
ನಡಿಬೇಡ ಬಿಸಿಲಿಗೆ ,,
ನೆನಿಬೇಡ ನೀರಿಗೆ ,,

ಮೇಳ ಮುಂಗುರುಳ ತೀಡುತ ,,
ಮುದ್ದಿಸಿ ಮರುಗುತ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ ಕಂದಯ್ಯ ಕಂದಯ್ಯ ,,
ಇಂದಿಗೆ ನಿನ್ನಾವ ,,
ಮುದ್ದಾಟ ಮುಗಿತಾಯ ,,
ನನನಿನ್ನ ತಾಯ್ಮಗು ,,
ಋಣವಿಂದು ಮುಗಿತಾಯ ,,

ಮೇಳ ಒಳ್ಳೆಣ್ಣೆ ದೀವಿಗೆ ,,
ಹಚ್ಚಿದಾಳು ಹೊನ್ನಮ್ಮ ,,
ನಾಯಿಯ ಕರೆದಾಳು ,,
ಕಾಲೂವ ಬಳಿಯಲ್ಲಿ ,,
ಬೆಕ್ಕಿನ ಕರೆದಾಳು ,,
ತಲೆಬಿಳಿ ಕುಳ್ಳಿರಿಸಿ ,,
ಕಟ್ಟಿದ ತೊಟ್ಟಿಲ ,,
ತೂಗುತ ಬಿಟ್ಟಾಳು ,,
ತಂದೆಗೆ ಕಣ್ಣಚ್ಚಿ ,,
ಕಡೆಗೊಮ್ಮೆ ನುಡಿದಾಳು ,,

ಹೊನ್ನಮ್ಮ  ಹಚ್ಚಿದ ದೀವಿಗೆ  ತುಂಬಿ ...ತುಂಬಿ
ಹಚ್ಚಿದಂತೆ ಇರಲೆಂದು ,,
ತೂಗಿದ ತೊಟ್ಟಿಲು ,,
ತೂಗಿಯೆ ಇರಲೆಂದು ,,

ಮೇಳ  ಬಾಗೀಲ ನೆಳೆದಾಳು ,,
ಬಳಿಕೊಮ್ಮೆ ನುಡಿದಾಳು ,,

ಹೊನ್ನಮ್ಮ  ಹಾಕಿದ ಬಾಗಿಲು ,,
ಹಾಕಿಯೆ ಇರಲೆಂದು ,,
ಯಾರಾರು ಕರೆದರೆ ,,
ತೆರಿಬೇಡ ಬಾಗಿಲೆ ,,
ದಂಡಿಂದ ಪತಿರಾಯ ,,
ಬಂದೊಮ್ಮೆ ಕರೆದರೆ ,,
ತೆರೆದು ಬಾ ಬಾಗಿಲೆ ,,

ಮೇಳ  ನುಡಿದಾಳು ಹೊನ್ನಮ್ಮ ,,
ನಡೆದಾಳು ಹೊನ್ನಮ್ಮ ,,
ಅತ್ತೆಮಾವಂದಿರ ,,
ಭಾವ ಅಕ್ಕಂದಿರ ,,
ಬಳಿಸಾರಿ ಅವರಲ್ಲಿ ,,
ಕೇಳ್ತಾಳೆ ಹೊನ್ನಮ್ಮ ,,

ಹೊನ್ನಮ್ಮ  ಮಾವಯ್ಯ ಅತ್ತೆಮ್ಮ ,,
ಭಾವಯ್ಯ ಅಕ್ಕಯ್ಯ ,,
ನೀವಾದ್ರೆ ನನಗೊಂದು ,,
ತುತ್ತನ್ನು ಕೊಡ್ಬೇಕು ,,

ಮೇಳ  ತುತ್ತನ್ನು ಕೊಂಡಾಳು ,,
ತುತ್ತನ್ನು ವುಂಡಾಳು ,,
ಹೊನ್ನಮ್ಮ ನಡೆದಾಳು ,,
ಮಾವಯ್ಯ ಮಾವಯ್ಯ ,,

ಹೊನ್ನಮ್ಮ  ಮಾವಯ್ಯ ಮಾವಯ್ಯ ,,
ಇಂದಿಗೆ ನಿಮ್ಮ್ಯಾವ ,,
ತುತ್ತನ್ನು ಮುಗುತಾಯ  ತುಂಬಿ....ತುಂಬಿ....
ಅತ್ತೆಮ್ಮ ಅತ್ತೆಮ್ಮ ,,
ಇಂದಿಗೆ ನಿಮ್ಮ್ಯಾವ ,,
ತುತ್ತನ್ನು ಮುಗುತಾಯ ,,
ಭಾವಯ್ಯ ಭಾವಯ್ಯ ,,
ಇಂದಿಗೆ ನಿಮ್ಮ್ಯಾವ ,,
ತುತ್ತನ್ನ ಮುಗುತಾಯ ,,
ಅಕ್ಕಯ್ಯ ಅಕ್ಕಯ್ಯ ,,
ಇಂದಿಗೆ ನಿನ್ನಾವ ,,
ತುತ್ತನ್ನ ಮುಗುತಾಯ ,,

ಮೇಳ  ಮೈದೂನ ಬಸವಯ್ಯ ,,
ಬಳಿಸಾರಿ ಹೊನ್ನಮ್ಮ ,,
ಕೈ ತುತ್ತ ನುಣಿಸುತ್ತ ,,
ನುಡಿದಾಳು ಮರುಗುತ ,,

ಹೊನ್ನಮ್ಮ  ಮೈದೂನ ಬಸವಯ್ಯ ,,
ಇಂದೀಗೆ ನನ್ನಾವ ,,
ಕೈ ತುತ್ತು ಮುಗುತಾಯ ,,

ಮೇಳ  ನೂರೊಂದು ಗೋವುಗಳ ,,
ಬಳಿಸಾರಿ ಹುಲ್ಲಿಟ್ಟು ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ  ನೂರೊಂದು ಗೋವುಗಳೆ ,,
ಇಂದಿಗೆ ನನ್ನಾವ ,,
ಕೈಹುಲ್ಲು ಮುಗುತಾಯ ,,

ಮೇಳ  ನೂರೊಂದು ಕರುಗಳ ,,
ಬಳಿಸಾರಿ ನೀರಿಟ್ಟು ,,
ನುಡಿವಾಳು ಹೊನ್ನಮ್ಮ ,,

ಹೊನ್ನಮ್ಮ  ನೂರೊಂದು ಕರುಗಳೆ ,,
ಇಂದಿಗೆ ನನ್ನಾವ ,,
ಕೈ ನೀರು ಮುಗುತಾಯ ,,

ಮೇಳ ಹೊನ್ನಮ್ಮ ಹೊನ್ನಮ್ಮ ತುಂಬಿ... ತುಂಬಿ....
ಸೊಸೆ ಮುದ್ದು ಹೊನ್ನಮ್ಮ ,,
ಬಲಿಗಾಗಿ ಬಂಗಾರ ,,
ಸಿಂಗರಿಸಿ ತಲೆಬಾಚಿ ,,
ಬೈತಲೆ ತೆಗೆದಾಳು ,,
ಹೆರಳಟ್ಟು ತಲೆತುಂಬಿ ,,
ಮಲ್ಲಿಗೆ ಮುಡಿದಾಳು ,,
ಕಣ್ಣಿಗೆ ಕಾಡಿಗೆ ,,
ಹಣೆಗಿಟ್ಟು ಕುಂಕುಮ ,,
ಬಂಗಾರದೊಡವೆಯ ,,
ಬೆಳ್ಳಿಯ ತೊಡವೆಯ ,,
ಇಟ್ಟಾಳು ಹೊನ್ನಮ್ಮ ,,
ಧಾರೆಯ ಸೀರೆಯ ,,
ಬಿಟ್ಟಳು ಹೊನ್ನಮ್ಮ ,,
ಜರತಾರಿ ಕುಪ್ಪಸ ,,
ತೊಟ್ಟಾಳು ಹೊನ್ನಮ್ಮ ,,
ಮದುಮಗಳ ಸಿಂಗಾರ ,,
ಮಾಡಾಳು ಹೊನ್ನಮ್ಮ ,,
ಚಿನ್ನದ ಕೊಡಪಾನ ,,
ಬೆಳ್ಳಿಯ ನೇಣನ್ನು ,,
ಹಿಡಿದಾಳು ಹೊನ್ನಮ್ಮ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ ಮೈದೂನ ಬಸವಯ್ಯ ,,
ಹೊಸಕೆರೆ ನೀರಿಗೆ ,,
ಹೊಗ್ತೇನೆ ನಾನಿಂದು ,,

ಮೇಳ ಬಸವಯ್ಯನಾದರೆ ,,
ಮುಳು ಮುಳು ಅಳ್ತಾನೆ ,,
ಮರುಗುತ ಕುಳಿತಾನೆ ,,
ಅಪ್ಪೇನೆ ಹೊತ್ತಿಗೆ ,,
ಹೊನ್ನಮ್ಮ ಮನೆಮೆಟ್ಲು ,,
ಬುಡುಕಂತ ಇಳಿದಾಳು ,,
ದುಡುಕಂತ ನಡೆದಾಳು ,,
ಹಟ್ಟಿಯ ಹಸುಕರು ,,

ತೊಟ್ಟಿಲ ಸಿಸುಕಂದ ತುಂಬಿ....ತುಂಬಿ
ಚಿಟ್ಟೆಂದು ಚೀರಲು ,,
ಕಟ್ಟಿದ ಕರು ಎಮ್ಮೆ ,,
ಕಣ್ತುಂಬ ನೋಡಲು ,,
ಹೊನ್ನಮ್ಮನಾದರೆ ,,
ಮುಂದಿಟ್ಟ ಹೆಜ್ಜೆಯ ,,
ಇಡಲಿಲ್ಲ ಹಿಂದಕ್ಕೆ ,,
ಸಿಸುಕಂದೆ ಬಸವಯ್ಯ ,,
ತರಲಿಲ್ಲ ಮನಸಿಗೆ ,,
ಹೊಸಕೆರೆ ನೀರಿಗೆ ,,
ಬಂದಾಳು ಹೊನ್ನಮ್ಮ ,,
ಹೊಸಕೆರೆ ದಂಡೇಲಿ ,,
ನಿಂತಾಳು ಹೊನ್ನಮ್ಮ ,,
ಹೊನ್ನಮ್ಮ ಹೊನ್ನಮ್ಮ ,,
ನುಡಿದಾಳು ಮಾವನಿಗೆ ,,

ಹೊನ್ನಮ್ಮ ಮಾವಯ್ಯ ಮಾವಯ್ಯ ,,
ಹೊಸಕೆರೆ ನೀರಿಗೆ ,,
ಬಂದಿದೇನೆ ಮಾವಯ್ಯ ,,
ಚಿನ್ನದ ಕೊಡಪಾನ ,,
ಬೆಳ್ಳಿಯ ನೇಣನ್ನು ,,
ತಂದಿದೇನೆ ಮಾವಯ್ಯ ,,

ಮೇಳ ಮಾವಯ್ಯ ಮುತ್ತಯ್ಯ ,,
ಮರುಕವ ತಂದ್ಕೊಂಡು ,,
ಹೇಳ್ತಾರೆ ಹೊನ್ನಮ್ಮ ,,

ಮುತ್ತಯ್ಯ ಹೊನ್ನಮ್ಮ ಹೊನ್ನಮ್ಮ ,,
ಹೊಸಕೆರೆ ನೀರಿಗೆ ,,
ಒಂಮೆಟ್ಲು ಕೆಳಗಿಳಿ ,,

ಮೇಳ ಇಳಿದಾಳು ಹೊನ್ನಮ್ಮ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ ಮಾವಯ್ಯ ಮಾವಯ್ಯ ,,

ಪಾದಕ್ಕೆ ನೀರ್ಬಂತು  ತುಂಬಿ ...ತುಂಬಿ....

ಮೇಳ  ಅಷ್ಟೇನೆ ಹೊತ್ತಿಗೆ ,,
ನುಡಿದಾರು ಮಾವಯ್ಯ ,,

ಮುತ್ತಯ್ಯ  ಹೊನ್ನಮ್ಮ ಹೊನ್ನಮ್ಮ ,,
ಇನ್ನೊಂದು ಮೆಟ್ಲಳಿ ,,

ಮೇಳ  ಇಳಿದಾಳು ಹೊನ್ನಮ್ಮ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ  ಮಾವಯ್ಯ ಮಾವಯ್ಯ ,,
ಸೊಂಟಕ್ಕೆ ನೀರ್ಬಂತು ,,

ಮೇಳ  ಅಷ್ಟೇನೆ ಹೊತ್ತಿಗೆ ,,
ನುಡಿದಾರು ಮಾವಯ್ಯ ,,

ಮುತ್ತಯ್ಯ  ಹೊನ್ನಮ್ಮ ಹೊನ್ನಮ್ಮ ,,
ಇನ್ನೊಂದು ಮೆಟ್ಲಲಿ ,,

ಮೇಳ  ಇಳಿದಾಳು ಹೊನ್ನಮ್ಮ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ  ಮಾವಯ್ಯ ಮಾವಯ್ಯ ,,
ಎದೆ ತುಂಬಿ ನೀರ್ಬಂತು ,,

ಮೇಳ  ಅಷ್ಟೇನೆ ಹೊತ್ತಿಗೆ ,,
ನುಡಿದಾರು ಮಾವಯ್ಯ ,,

ಮುತ್ತಯ್ಯ  ಹೊನ್ನಮ್ಮ ಹೊನ್ನಮ್ಮ ,,
ಇನ್ನೊಂದು ಮೆಟ್ಲಳಿ ,,

ಮೇಳ  ಇಳಿದಾಳು ಹೊನ್ನಮ್ಮ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ  ಮಾವಯ್ಯ ಮಾವಯ್ಯ  ತುಂಬಿ....ತುಂಬಿ
ಕೊರಳಿಗೆ ನೀರ್ಬಂತು ,,

ಮೇಳ  ಬಪ್ಪರ ಹೊತ್ತಿಗೆ ,,
ನುಡಿದಾರು ಮಾವಯ್ಯ ,,

ಮುತ್ತಯ್ಯ  ಹೊನ್ನಮ್ಮ ಹೊನ್ನಮ್ಮ ,,
ಇನ್ನೊಂದು ಮೆಟ್ಲಳಿ ,,

ಮೇಳ  ಇಳಿದಾಳು ಹೊನ್ನಮ್ಮ ,,
ನುಡಿದಾಳು ಹೊನ್ನಮ್ಮ ,,

ಹೊನ್ನಮ್ಮ  ಮಾವಯ್ಯ ಮಾವಯ್ಯ ,,
ಬಾಯಿಗೆ ನೀರ್ಬಂತು ,,

ಮೇಳ  ಅಷ್ಟೇನ ಹೊತ್ತಿಗೆ ,,
ಮರುಕವ ತಂದ್ಕೊಂಡು ,,
ನುಡಿದಾರು ಮಾವಯ್ಯ ,,

ಮುತ್ತಯ್ಯ  ಹೊನ್ನಮ್ಮ ಹೊನ್ನಮ್ಮ ,,
ಸೊಸೆಮುದ್ದು ಹೊನ್ನಮ್ಮ ,,
ಹೊಸಕೆರೆ ನೀರಿಗೆ ,,
ಇನ್ನೊಂದು ಮೆಟ್ಲಳಿ ,,

ಮೇಳ  ಇಳಿದಾಳು ಹೊನ್ನಮ್ಮ ,,
ಮುಳುಗಿಧಾಳು ನೀರ್ನಲ್ಲಿ ,,

(ಹಿನ್ನೆಲೆಯಲ್ಲಿ ಶೋಕ ವೀಣೆ ತುಸು ಹೊತ್ತು ಮಿಡಿಯುತ್ತಿದ್ದು ಕ್ರಮೇಣ ಮೆಲಮೆಲನೆ ಕೊನೆಗೊಳ್ಳುವುದು.)

ಹೊಸಕೆರೆ ಹೊನ್ನಮ್ಮ ... ,,
ಮರವಾಡಿ ಕೊಂಡಿತು ,,
ನೀರ್ತುಂಬಿ ಬಂದಿತು ,,

ಕೆರೆ ತುಂಬಿ ನಿಂತಿತು ತುಂಬಿ .. ತುಂಬಿ ..
ಹೊಸಕೆರೆ ನೀರಿಂದ ,,
ಊರಿಗೆ ಆನಂದ ,,

(ಕಾಲದ ಅಂತರವನ್ನು ಸೂಚಿಸುವ ಹಿಮ್ಮೇಳ)

ಅಷ್ಟೇನೆ ಹೊತ್ತಿಗೆ.... ,,
ದಂಡಿಂದ ಶಿವರಾಯ ,,
ಬಂದಾನು ಊರಿಗೆ ,,
ಮನೆಯಲ್ಲಿ ಘಡದಿಯ ,,
ಕಾಣದೆ ಬೆರಗಿಂದ ,,
ತಾಯಿಯ ಬಳಿ ಸಾರಿ ,,
ನುಡಿದಾನು ಶಿವರಾಯ ,,

ಶಿವರಾಯ ತಾಯಮ್ಮ ತಾಯಮ್ಮ ,,
ನಿನ್ನಾವ ಸೊಸೆ ಮುದ್ದು ,,
ಎಲ್ಲಿಗೆ ಹೋಗಿದಾಳೆ ,,

ಮೇಳ ತಾಯವ್ವ ನಂಜವ್ವ ,,
ಬಾಯ್ತುಂದು ನುಡಿಲಿಲ್ಲ ,,
ಅಷ್ಟೇನೆ ಹೊತ್ತಿಗೆ ,,
ಪತಿರಾಯ ಶಿವರಾಯ ,,
ತಂದೆಯ ಬಳಿಸಾರಿ ,,
ನುಡಿದಾನು ಶಿವರಾಯ ,,

ಶಿವರಾಯ ತಂದೆಪ್ಪ ತಂದೆಪ್ಪ ,,
ನಿನ್ನಾವ ಸೊಸೆಮುದ್ದು ,,
ಎಲ್ಲಿಗೆ ಹೋಗಿದಾಳೆ ,,

ಮೇಳ ತಂದೆಪ್ಪನಾದರೆ ,,
ಉಸಿರೆತ್ತಿ ನುಡಿಲಿಲ್ಲ ,,
ಅಷ್ಟೇನೆ ಹೊತ್ತಿಗೆ ,,
ಪತಿರಾಯ ಶಿವರಾಯ ,,
ಅಣ್ಣನ ಬಳಿಸಾರಿ ,,

ಶಿವರಾಯ ಅಣ್ಣಯ್ಯ ಅಣ್ಣಯ್ಯ ,,
ನಿನ್ನವ ನಾದಿನಿ ,,
ಎಲ್ಲಿಗೆ ಹೋಗಿದಾಳೆ ,,

ಮೇಳ ಅಣ್ಣಯ್ಯನಾದರೆ ,,
ಮುಖವೆತ್ತಿ ನುಡಿಲಿಲ್ಲ ,,
ಅಷ್ಟೇನೆ ಹೊತ್ತಿಗೆ ,,
ಪತಿರಾಯ ಶಿವರಾಯ ,,
ಅತ್ತಿಗೆಯ ಬಳಿಸಾರಿ ,,
ನುಡಿದಾನು ಶಿವರಾಯ ,,

ಶಿವರಾಯ ಅತಿಗಮ್ಮ ಅತಿಗಮ್ಮ ,,
ನಿನ್ನಾವ ತಂಗಿಯು ,,
ಎಲ್ಲಿಗೆ ಹೋಗಿದಾಳೆ ,,

ಮೇಳ ಅತ್ತಿಗಮ್ಮನಾದರೆ ,,
ಕಣ್ಣೆತ್ತಿ ನೋಡ್ಲಿಲ್ಲ ,,
ಅಷ್ಟೇನೆ ಹೊತ್ತಿಗೆ ,,
ಪತಿರಾಯ ಶಿವರಾಯ ,,
ಬಸವಯ್ಯ ಬಳಿಸಾರಿ ,,
ನುಡಿದಾನು ಶಿವರಾಯ ,,

ಶಿವರಾಯ ತಮ್ಮಯ್ಯ ತಮ್ಮಯ್ಯ ,,
ನಿನ್ನಾವ ಅತ್ತಿಗೆ ,,
ಎಲ್ಲಿಗೆ ಹೋಗಿದಾಳೆ ,,

ಮೇಳ ಬಸವಯ್ಯನಾದರೆ ,,
ಮುಳು ಮುಳು ಅತ್ತಾನು ,,
ಮರುಗುತ ನುಡಿದಾನು ,,

ಬಸವಯ್ಯ ಅಣ್ಣಯ್ಯ ಅಣ್ಣಯ್ಯ ,,
ಅತ್ತಿಗೆಯನಾದರೆ ,,
ವಡ್ಡರ ಮಾತಿಗೆ ,,
ಹೊಸಕೆರೆಗೆ ಬಿಂದೇನೆ ,,
ಕೊಟ್ಟದಾರೆ ಅಣ್ಣಯ್ಯ ,,

(ಹಿನ್ನೇಲೆ ರೋಷಾವೇಶಗೊಳ್ಳುತ್ತಾ ತಾರಕಕ್ಕೇರುವುದು).

ಮೇಳ ಅಷ್ಟೇನೆ ಹೊತ್ತಿಗೆ....ತುಂಬಿ... ತುಂಬಿ ...
ಅಂತೆಂದ ಮಾತಿಗೆ ,,
ಹೊನ್ನಮ್ಮ ಪತಿರಾಯ ,,
ಭುಗಿಲೆದ್ದು ಕೋಪದೆ ,,
ಜಿಗಿದೆದ್ದು ತಾಪದೆ ,,
ದುಃಖದ ಕೋಪಾನ ,,
ಒಟ್ಟಿಗೆ ನುಂಗೊಂದು ,,
ಒಡ್ಡನ ಔದ್ಯೋಗಿ ,,
ಹುಡುಕುತ ತಲೆಜುಟ್ಟು ,,
ಮುಡಿಹಿಡಿದೆಳೆತಂದು ,,
ಹೊಸಕೆರೆ ದಂಡೇಲಿ ,,
ದಂಡಿನ ಕತ್ತೀಲಿ ,,
ತಲೆತುಂಡ ತೆಗೆದಾನು ,,
ಕತ್ತಿಯ ನೆತ್ತರ ,,
ಹಣೆಬೊಟ್ಟನಿಟ್ಟಾನು ,,

(ರೌದ್ರ ಹಿನ್ನೆಲೆ ಕಡಿಮೆಯಾಗಿ ಶಾಂತ ಕರುಣ ಶೋಕ ರಸಗಳಿಂದ ಮಿಡಿಯುವುದು.)

ಮನೆಗೊಮ್ಮೆ ನಡೆದಾನು ತುಂಬಿ....ತುಂಬಿ....
ಕದ ತಟ್ಟಿ ಬಾಗಿಲ ,,
ತೆಗೆದಾನು ಶಿವರಾಯ ,,
ತೊಟ್ಟಿಲು ತೂಗಿತ್ತು ,,
ಸಿಸು ಕಂದ ಮಲಗಿತ್ತು ,,
ದೀಪವು ಉರಿತಿತ್ತು ,,
ಪತಿರಾಯ ಶಿವರಾಯ ,,
ಪತಿರಾಯ ಶಿವರಾಯ ,,
ತೊಟ್ಟಿಲು ಹಸುಕೂಸ ,,
ಜತೆ ಹೊತ್ತು ಹೊರಟಾನು ,,
ಮಲಗುವ ಬಸವಯ್ಯ ,,
ಕೈ ಹಿಡಿದು ನಡೆದಾನು ,,

ಹೊಸ ಕೆರೆ ದಂಡೇಲಿ ತುಂಬಿ ...ತುಂಬಿ
ಬಂದೊಮ್ಮೆ ನಿಂತಾನು ,,
ಅಷ್ಟೇನೆ ಹೊತ್ತಿಗೆ ,,
ಊರಿಗೆ ಊರೆಲ್ಲ ,,
ಬಂದಲ್ಲಿ ಕೂಡಲು ,,
ಶಿವರಾಯ್ನ ಮನೆಯವರು ,,
ಹೊನ್ನಮ್ಮ ತವರವರು ,,
ಜತೆಗೂಡಿ ಕರೆದಾರು ,,
ಹೊನ್ನಮ್ಮ ಪತಿರಾಯ ,,
ನುಡಿದಾನು ಒಮ್ಮೆಗೆ ,,

ಶಿವರಾಯ ಕೇಳಿರಿ ನನ ಬಂಧು ,,
ಬಳಗದ ಜನರೆಲ್ಲ ,,
ನೆಂಟರೆ ಇಷ್ಟರೆ ,,
ಕೇಳಿರಿ ನೀವೆಲ್ಲ ,,
ನನಗಾದ್ರೆ ಇಂದಿಗೆ ,,
ನೆಲಋಣ ಮುಗುತಾಯ ,,
ತಂದೆ ತಾಯಿ ಬಳಗ ,,
ಋಣವಿಂದು ಮಗುತಾಯ ,,
ಇರುವೊಬ್ಬ ಕಿರುತಮ್ಮ ,,
ಬಸವಯ್ಯ ನನ ತಮ್ಮ ,,
ಜತೆಯಾಗಿ ಇರ್ತೇವೆ ,,
ನೀವಾದ್ರೆ ಬಂದಾಂಗೆ ,,
ಹೋಗಿನ್ನು ಮನೆಗಾಗಿ ,,
ಬಾಳಲಿ ಸುಖವಾಗಿ ,,

ಮೇಳ ಎನ್ನುವ ಹೊತ್ತಿಗೆ ,,
ಮರುಗ್ಯಾರು ಜನರೆಲ್ಲ ,,
ತಲೆತಲೆ ಹೊಡಕೊಂಡು ,,
ತಮತಪ್ಪ ಒಪ್ಕೊಂಡು ,,
ತಡೆದಾರು ಶಿದರಾಯ ,,
ಕರೆದಾರು ಬಸವಯ್ಯ ,,
ಶಿವರಾಯನಾದರೆ ,,
ಮರುಕವ ತಂಡ್ಕೊಂಡು ,,

ತುಂಬಿದ ಕರೆ ಮುಂದೆ — ತುಂಬಿ....ತುಂಬಿ
ಕರೆದಾನು ಹೊನ್ನಮ್ಮ „

ಶಿವರಾಯ ಹೊನ್ನಮ್ಮ ಹೊನ್ನಮ್ಮ „
ಹೊಸಕೆರೆ ಹೊನ್ನಮ್ಮ „
ಸತ್ಯದಲಿ ಹುಟ್ಟಿದೋಳೆ „
ಧರ್ಮದಲಿ ಬೆಳದೋಳೆ „
ನ್ಯಾಯದಲಿ ನಡೆದೋಳೆ „
ನೀತೀಲಿ ನಿಂತೋಳೆ „
ನಿನ್ನಾವ ಮುಖವನ್ನು „
ಕೆರೆನೀರ ನಡುವಿಂದ „
ಮೇಲೆತ್ತಿ ನನಗೊಮ್ಮೆ „
ತೋರಿಸು ಹೊನ್ನಮ್ಮ „
ಹೊನ್ನಮ್ಮ ಹೊನ್ನಮ್ಮ „
ಹೊಸಕೆರೆ ಹೊನ್ನಮ್ಮ „

ಮೇಳ ಅಷ್ಟೇನೆ ಹೊತ್ತಿಗೆ „
ಪತಿರಾಯ್ನ ದನಿಗೇಳಿ „
ಹೊನ್ನಮ್ಮನಾದರ „
ಬಲದಾವ ಕೈಯಲ್ಲಿ „
ಧರಿಸಿದ್ದ ಮುದ್ರೆಯ „
ಉಂಗುರದ ಬೆರಳೆತ್ತಿ „
ತೋರ್ಸ್ಯಾಳು ಪತಿಗಾಗ „
ಅದಗೋಡಿ ಶಿವರಾಯ „
ಹೊನ್ನಮ್ಮ ಪತಿರಾಯ „
ತೊಟ್ಟಿಲು ಸಿಸುಗೂಡಿ „
ಬಸವಯ್ಯ ಜತೆಗೂಡಿ „

ಹೊಸಕೆರೆ ನೀರಿಗೆ
ಹಾರಿದನು ಜತೆಗೂಡಿ „

(ಹಿನ್ನೆಲೆಯ ಶೋಕ ರಾಗವು ಬರುಬರುತ್ತಾ ಕಡಿಮೆ ಯಾಗುವುದು)

ಕೆರೆನೀರು ಮೂವರ „
ಮರೆಮಾಡಿ ಉಕ್ಕಿತು „
ತೆರೆನೀರು ನಾಲ್ವರ „
ಜತೆಗೊಂಡು ನಲಿಯಿತು „
ಹೊನ್ನಮ್ಮ ಹೊಸಕೆರೆ „
ಹೆಸರಾಯ್ತು ಅಂದಿಗೆ „
ಪತಿರಾಯ ಶಿವರಾಯ „
ಮೈದೂನ ಬಸವಯ್ಯ „
ಸೊಸೆ ಮುದ್ದು ಹೊನ್ನಮ್ಮ „
ಶಿವನಂದಿ ಪಾರ್ವತಿ „
ರೂಪಿಂದ ಕಲ್ಲಾಗಿ „
ಉಳಿದಾರು ಜಲದಲ್ಲಿ „
ಮೆರೆದಾರು ವರವಾಗಿ „
ಪತಿರಾಯ ಶಿವರಾಯ „
ನಂದಿಯೆ ಬಸವಯ್ಯ „
ಸಿಸುಕಂದ ಚಂದ್ರಯ್ಯ „
ಗಂಗೆಯೆ ಹೊನ್ನಮ್ಮ „
ರೂಪಾಗಿ ಜಲದೇವಿ „
ಬರಗಾಲ ದೂರಿಗೆ „
ಕೆರೆತುಂಬಿ ಉಳಿದಾಳು „
ವರಕೊಟ್ಟು ಮೆರೆದಾಳು „

(ಆರಂಭದ ಸಂಯೋಜಕನ ಮಾತು ಮತ್ತೆ ಪುನರಾವರ್ತನೆ ಯಾಗಲು ಹಿನ್ನೆಲೆಯ ಗೀತೆಯು ಮಿಡಿತ ಮೆಲ್ಲ ಮೆಲ್ಲನೆ ಕೊನೆಗೊಳ್ಳುವುದು).

(ಹಿನ್ನೆ
ವುದು).

# ಹೆಣ್ಣು ಒಪ್ಪಿಸಿಕೊಡುವ ಹಾಡು

ಸಂಗ್ರಹಿಸಿದವರು: **ಶ್ರೀ ಶಿವರಾಮ, ಮೂಲೆಮಜ್ಲು**

ಈ ಹಾಡನ್ನು ಶ್ರೀ ಶಿವರಾಮ, ಮೂಲೆಮಜ್ಲುರವರಲ್ಲದೆ ಶ್ರೀಮತಿ ಸಿ. ಪಿ. ಅಮ್ಮಣ್ಣವರೂ ಸಂಗ್ರಹಿಸಿ ಕಳುಹಿಸಿ ಕೊಟ್ಟಿದ್ದಾರೆ. —ಸಂ.

ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು ।
ನಿಮ್ಮ ಮಡಿಲೊಳಗಿಡಲು । ತಂದಿರುವೆವೂ ॥೧॥
ಕೊಳ್ಳಿರೀ ಮಗುವನ್ನು ಎಮ್ಮ ಮನೆ ಬೆಳಕನ್ನು
ನಿಮ್ಮ ಮನೆಯನು ತುಂಬಲೊಪ್ಪಿಸುವೆವೂ ॥೨॥
ಮರೆಮೋಸ ಕೊಂಕುಗಳನರಿಯಳಿವಳು ।
ಇನಿತು ವಿಶ್ವಾಸವನು ಕಂಡರಿಯಳಿವಳೂ ॥೩॥
ಕಷ್ಟಗಳ ಸಹಿಸದೆಯೆ ಕಾಣದೆಯೆ ಬೆಳೆದವಳು
ಸಲಹಿಕೊಳ್ಳಿರಿ ಮಗುವನೊಪ್ಪಿಸುವೆವೂ ॥೪॥
ಕಠಿಣಗಳ ನೆಳಲ್ ಸುಳಿಯಲುದುರಿ ಬಾಡುವಳು
ಹಿರಿಮಂಜು ಬಳಲಿಸಿದ ಹೂವಿನಂತೆ ॥೫॥
ಸುಃಖದಲ್ಲಿ ದುಃಖದಲ್ಲಿ, ಯೆಲ್ಲದೆಸೆಯಿರವಿನಲಿ ।
ನಿಮ್ಮ ಪಾಲಿಗೆ ನಿಲುವ ಕುವರಿಯಿವಳೂ ॥೬॥
ನಿಮಗಿವಳು ನೀಡುತಿಹ ಹಾಲು ಹಣ್ಣುಗಳು ಸವಿ ।
ಎಂದೆಂದೂ ಇವಳ ನಡೆ ನಿಮ್ಮ ಪರವಾಗಿ ॥೭॥
ನಿಮ್ಮ ಕೀರುತಿ ಬೆಳೆಯಲಿವಳ ಸೌಜನ್ಯದಲಿ ।
ನಿಮ್ಮ ಕುಲಶೀಲಗಳು ಪರಿಮಳಿಸಲೀ ॥೮॥
ನಿನ್ನ ಮಡದಿಯ ಕೊಂಡು ಸುಃಖವಾಗಿರು ಮಗುವೇ ।
ನಿಮ್ಮ ಸೊಸೆ ಸೋದರಿಯು ಕೊಳ್ಳಿರಿವಳಾ ॥೯॥
ಜೀವನದ ಸಾಗರದಿ ಸಂಸಾರ ನೌಕೆಯನು ।
ಆಧರಿಪ ಹುಟ್ಟನಂತಿಹ ಜೀವಿಯಿವಳೂ ॥೧೦॥
ಕೈ ಬಿಡದೆ ಕಾವುದೈ ಪ್ರೇಮದಿಂದನು ದಿನವು ।
ಇಂದಿನಿಂದೆಂದಿಗೂ ನಿಮ್ಮವಳು ಮುಂದೆ ॥೧೧॥
ಅತ್ತೆ ಮಾವಂದಿರನು ತಾಯ್ತಂದೆಯೆಂದರಿತು ।
ನಿತ್ಯ ನಿರ್ಮಲೆಯಾಗಿ ಸೇವೆಯನು ಮಾಡು ॥೧೨॥
ಪತಿಯೇ ದೇವರು ನಿನಗೆ, ಬೇರೆ ದೇವರು ಇಲ್ಲ ।
ಪತಿಯೇ ಗತಿ ನಿನಗೆ ಪತಿಯೇ ಸರ್ವಸ್ವವೂ ॥೧೩॥
ಪಾದಸೇವೆಯ ಮಾಡು ದಾಸಿಯಂತಿರು ನೀನು ।
ಪತಿಯು ಗೃಹಕೃತ್ಯದೊಳು ಮಂತ್ರಿ ನೀನವಗೆ ॥೧೪॥
ಉಣಿಸುಗಳನೀಯಲಾತನ ಮಾತೆಯೇ ನೀನು ।
ಪ್ರೀತಿಯಿಂದೊಡಗೂಡಿ ಸಂತಸದಿ ಬಾಳೂ ॥೧೫॥
ಹೆತ್ತವರ ಮನೆಗಿಂದು ಹೊರಗಾದೆ ನೀಮಗಳೆ ।
ಆ ಮನೆಯೇ ಅವರೇ ನಿನ್ನವರು ಮುಂದೆ ॥೧೬॥
ಅವರೇ ತಾಯ್ಗಳು ಸಖರು ಭಾಗ್ಯವನು ಬೆಳೆಸುವವರು ।
ಅವರೇ ದೇವರು ನಿನ್ನ ದೇವರುಗಳೂ ॥೧೭॥
ಆವ ಬಳುವಳಿ ಕೊಡಲಿ ಮಗಳೆ ನಾ ನಿನಗೆ ।
ಆವ ವಸ್ತುವ ನಿತ್ತು ಕಳುಹಿಸಲೀ ಮನೆಗೆ ॥೧೮॥
ಮಾವನಾ ಮನೆಗಿಂದು ತೆರುಳುವಾ ಮಗಳೆ ।
ದೇವರಿತ್ತಿಹ ವಸ್ತು ವಾಹನವ ಕೊಡಲೇ ॥೧೯॥
ಬಡತನದಿ ಬೆಂದು ಬಡವಾಗಿರುತಿರ್ದು ।
ಕಡು ಮಮತೆಯಲಿ ನಿನ್ನ ಸಾಕಿ ಸಲಹಿದೆನು ॥೨೦॥
ಅಡಿಗಡಿಗೆ ಬರುತಿರ್ದ ತೊಡರುಗಳ ಸಹಿಸಿ ।
ಬಡತನದ ಕಡಲಿನಲಿ ದಡ ಸೇರದಿರ್ದೆ ॥೨೧॥
ಮಗಳೇ ನಾನೇನು ಕೊಡಲಿ ನಿನಗೆ ।
ಹೋಗುವಾಗ ಅಗಲಿಕೆಯ ಉಪದೇಶ ನಿನಗೆ ॥೨೨॥
ಪತಿಗೆ ಸತಿಯೆಂಬ ಶೃತವಚನವನು ।
ಮತಿಯುತಳೇ ನೀ ನಡೆಸುತ್ತ ಬಾಳೇ ॥೨೩॥
ಪತಿಯ ಮಾತನು ಅಲ್ಲಗಳೆಯದಿರು ನೀನು ।
ಪತಿಯೇ ಪರದೈವವೆಂದು ನಂಬು ವಧುವೇ ॥೨೪॥
ನಿಲ್ ಕಣ್ಣೊರಸಿಕೊಳ್ ಮುದ್ದು ನೀನಳದಿರು ।
ತಾಯಿರಾ ತಂದೆಯಿರಾ ಪಡೆವಳಾ ॥೨೫॥
ಎರಡು ಮನೆಗಳ ಹೆಸರು ಖ್ಯಾತಿಗಳು ಉಳಿವಂತೆ ।
ತುಂಬಿದಾಯುಷ್ಯದಲಿ ಬಾಳಿ ಬದುಕು ನೀ ಮಗಳೇ ॥೨೬॥

# ಸೋಬಾನೆಯ ಹಾಡುಗಳು

## ಹಸೆಬರೆವ ಹಾಡು

ಸಂಗ್ರಹಿಸಿದವರು: **ಶ್ರೀಮತಿ ಚೆಟ್ಟಿಮಾಡ ಅಮ್ಮಮ್ಮ, ಮಡಿಕೇರಿ**

ಅಪ್ಪಾ ಮಕ್ಕಳು ಕೂಡಿ ತುಪ್ಪ ಬೋನವನುಂಡು ಉಕ್ಕಿನುಳಿ ಬಾಜು ಹೆಗಲೇರಿ । ಉಕ್ಕಿನುಳಿಬಾಜು ಹೆಗಲೇರಿ ಹೊರಟಾರು ಒಳ್ಳೊಳ್ಳೆ ಮಣೆ ಕಡಿವ ಕೆಲಸಕ್ಕೇ ॥ ಅಣ್ಣಾ ತಮ್ಮಂದಿರು ಕೂಡಿ ಹಾಲು ಬೋನವನುಂಡು ಚಿನ್ನಾದುಳಿಬಾಜು ಹೆಗಲೇರಿ । ಚಿನ್ನಾದುಳಿ ಬಾಜು ಹೆಗಲೇರಿ ಹೊರಟಾರು ಒಳ್ಳೊಳ್ಳೆ ಮಣೆ ಕಡಿವ ಕೆಲಸಕ್ಕೇ ॥ ಆಲದ ಮಣೆಗೇಳಿ ಆರೇಳು ದಿನವಾದೊ ಆಲದ ಮಣೆ ಯಾಕೆ ಬರಾಲಿಲ್ಲಾ । ಆಲದ ಮಣೆಯಾಕೆ ಬರಲಿಲ್ಲ. ಬೆಡಗಿನ ಮಣೆಯು ಊರಿಗೆ ಬಿಟ್ಟೆ ಹೋರಿನ ಹೊಡಕೊಡೀ । ಊರಿಗೆ ಬಿಟ್ಟ ಹೋರಿನ ನಾವೇಕೆ ಕೊಡಕೊಡಲೋ ಜಾಮುದಲೆದ್ದು ಕೆಲಸಾಕ್ಕೆ ॥ ಹಲಸಿನ ಮಣೆಗೇಳಿ ಹತ್ತೆಂಟು ದಿನವಾದೊ ಹಲಸಿನ ಮಣೆಯಾಕೆ ಬರಾಲಿಲ್ಲಾ । ಹಲಸಿನ ಮಣೆಯಾಕೆ ಬರಲಿಲ್ಲ ಬೆಡಗಿನೆ ಮಣೆಯು ಊರಿಗೆ ಬಿಟ್ಟ ಹಸುವ ಹೊಡಕೊಡೀ । ಊರಿಗೆ ಬಿಟ್ಟ ಹಸುವ ನಾವೇಕೆ ಹೊಡಕೊಡಲೋ ಸಮತಿಗದು ಮುಡಿವಾಗ ಬೆಳಗಾದೋ ॥ ಗಂಧದ ಮಣೆಗೇಳಿ ತಿಂಗಳು ದಿನವಾಧೋ ಗಂಧದ ಮಣೆಯಾಕೆ ಬರಾಲಿಲ್ಲಾ । ಗಂಧದ ಮಣೆಯಾಕೆ ಬರಲಿಲ್ಲ ಬೆಡಗಿನ ಮಣೆಯು ಊರಿಗೆ ಬಿಟ್ಟೆಮ್ಮೆ ಹೊಡಕೊಡೀ । ಊರಿಗೆ ಬಿಟ್ಟೆಮ್ಮೆ ನಾವೇಕೆ ಹೊಡಕೊಡಲೋ ಮಲ್ಲೀಗೆಯ ಮುಡಿವಾಗ ಬೆಳಗಾದೋ ॥ ಹಸೆ ಬರೆವ ಕೋಣೇಲಿ ಏನುಂಟು, ಏನಿಲ್ಲ, ಹಣ್ಣಡಿಕೆ ಸಿಪ್ಪೆ ಮೊದಾಲಿಲ್ಲಾ । ಹಣ್ಣಡಿಕೆ ಸಿಪ್ಪೆ ಮೊದಲಿಲ್ಲದ ಕೋಣೇಲಿ ಹಸೆ ಬರೆವ ಕೋಣೆ ಬಲು ಇಂಬು ॥ ಹಸೆ ಬರೆವ ಜಗುಲಲ್ಲಿ ಏನುಂಟು ಏನಿಲ್ಲ ಯಾಲಕ್ಕಿ ಸಿಪ್ಪೆ ಮೊದಾಲಿಲ್ಲಾ । ಯಾಲಕ್ಕಿ ಸಿಪ್ಪೆ ಮೊದಲಿಲ್ಲದ ಜಗುಲಲ್ಲಿ ॥ ಹಸೆಬರೆವ ಜಗಲಿ ಬಲು ಇಂಬು ॥ ಹಸೆಯ ಮೇಲೆರಡು ಕಳಸವ ತಂದಿಡಿರಿ, ನಡೆದ ಮಗಳಿಗೂ ಮಹಾದೇವಂಗೂ ಬಾಸಿಂಗದ ಬಣ್ಣ ಬರೀರಣ್ಣಾ । ಹಸೆಯ ಮೇಲೆರಡು ಹಸೆಮಣೆ ತಂದಿಡಿರಿ ನಡೆದ ಮಗಳಿಗೂ ಮಹಾದೇವಂಗೂ ಬಾಸಿಂಗ ಬಣ್ಣಾ ಬರೀರಣ್ಣಾ ॥ ಹಸೆಯಾ ಬರಿಯಲಿಕೆ ಋಷಿಗಳು ನಾವು ಬಂದಿದ್ದೇವೆ ಚಂದಾಗಿ ಬರೆಯೀರಿ ಚೌಕಾಗಿ । ಹಸೆಯ ಬರೆಯಲಿಕೆ ಇನ್ಯಾರು ಬರಬೇಕು ತಾಯಿ ಸೋದರದ ಹಿರಿ ಬಾವ । ತಾಯೀ ಸೋದರದ ಹಿರಿಬಾವ ಬರಬೇಕೆಂದು ಚಂದಾಗಿ ಬರೆಯೀರಿ ಚೌಕಾಗಿ ॥ ಸೂರ್ಯದೇವರ ಅಕ್ಕ ಬರುತ್ತಾಳೆಂದು ಚಂದಾಗಿ ಬರೆಯೀರಿ ಚೌಕಾಗಿ । ಚಂದ್ರದೇವರ ತಂಗಿ ಬರುತ್ತಾಳೆಂದು ಚಂದಾಗಿ ಬರೆಯಿರಿ ಚೌಕಾಗಿ ॥ ಬಣ್ಣ ಬರೀರಣ್ಣಾ ಈ ಬಣ್ಣ ಬರೀರಣ್ಣಾ ಸೂರ್ಯದೇವರ ಬಣ್ಣ ಬರೀರಣ್ಣಾ । ಆ ಬಣ್ಣ ಬರೀರಣ್ಣಾ ಈ ಬಣ್ಣ ಬರೀರಣ್ಣಾ, ಚಂದ್ರಾದೇವರ ಬಣ್ಣ ಬರೀರಣ್ಣಾ । ಗಿಳಿರಾಮರ ಬಣ್ಣ ಬರೀರಣ್ಣಾ ಚಂದಾಗಿ ಬರೆಯೀರಿ ಚೌಕಾಗಿ ॥ ಮಾವನರಮನೇಲೀ ಭಾವ ಮೈದುನರು ಬಲು ಹೆಚ್ಚು ಹಸೆನೋಡಿ ನಿಮ್ಮ ಜರೆದಾರು । ಅತ್ತೇಯ ಅರಮನೇಲೀ ಅತ್ತಿಗೆ ನಾದುನಿಯರು ಬಲು ಹೆಚ್ಚು ಹಸೆನೋಡಿ ನಿಮ್ಮ ಜರೆದಾರು । ಚಂದಾಗಿ ಬರೆಯೀರಿ ಚೌಕಾಗಿ ॥ ಹಸೆ ಬರೆದವರಿಗೆ ಏನೆಲ್ಲಾ ಉಂಬಳಿ ? ಸಣ್ಣಕ್ಕಿ ಬಯಲು ಸಮಾ ಉಂಬಳಿ । ಹಸೆ ಬರೆದವರಿಗೆ ಏನೆಲ್ಲಾ ಉಡುಗೊರೆ ? ಸಾಲು ಪಟ್ಟೆಗಳು ಸಮಾ ಉಡುಗೋರೇ । ಹಸೆಯ ಬರೆದವರಿಗೆ ಏನೆಲ್ಲಾ ವೀಳ್ಯಗಳು ? ತಟ್ಟೇಲಿ ವೀಳ್ಯವ ಮಡಾಗಿರಿ ॥

# ಎಣ್ಣೆ ಅರಿಶಿಣ ಮಾಡುವಾಗ ಹೇಳುವ ಹಾಡು

ಸಂಗ್ರಹಕಾರರು : ಶ್ರೀಮತಿ ಕೊಡೆಕಲ್ಲು ಸೀತಮ್ಮ

ಶರಣು ಲೋಕನಾಯಕ ವೆಂಕಟೇಶಗೆ, ನೀ ಕರುಣಿಸಿ ಸಲಹೋ ದೇವ ಜಯ ಜಯ ರಾಮ ಜಯರಾಮ| ಪಟ್ಟೆ ಪೀತಾಂಬರ ನೆರೆದುಟ್ಟು ವೀಣೆ ಕಸ್ತೂರಿ ಫಣಿಯೊಳು ತೊಟ್ಟು ಜಾಣೆಯರೆಲ್ಲಾ ನೆರೆದರು. ಸುಂದರ ನಾದ ಬಾಣವ ಪಟ್ಟದಾನೆಗಳಂತೆ | ಜಯ ಜಯರಾಮ ಜಯರಾಮ | ಮದುವೆಯ ನಾಲ್ಕು ದಿನದಲ್ಲಿ ಮದುವಣಿಗ ಸೀತಾರಾಮರಿಗೆ ಮುದದಿಂದ ಎಣ್ಣೆ ಅರಿಸಿಣವ ಮಾಳ್ಪ ಸಂಭ್ರಮವ ಕೇಳಿ | ಜಯ ಜಯ ರಾಮ ಜಯರಾಮ | ಬ್ರಹ್ಮನ ಪತ್ನಿ ಸರಸ್ವತೀದೇವಿ ವಾಯು ರುಕ್ಮಿಣಿದೇವಿ ಹರನಲ್ಲದೇ ಪಾರ್ವತಿದೇವಿ ಸಹಿತ ಅರಿಸಿಣ ಎಣ್ಣೆಯ ಮಾಡಬಂದರಾಗ | ಜಯ ಜಯ ಜಯ ರಾಮ ಜಯರಾಮ |

ಹರುಷದಿಂಡಲಿ ಕೌಸಲ್ಯೆ ಕೈಕೇಯಿ ಸುಮಿತ್ರೆಯರು ಶ್ರೀ ರಾಮಚಂದ್ರರಿಗೆ ಎಣ್ಣೇ ಅರಿಸಿಣವ ಮಾಡಿದರಾಗ ಸಿತ್ರೆ. ಸುಮಿತ್ರೆದೇವಿ ಕೇರಿ ಕೇರಿಯೊಳಿದ್ದ ನಿತ್ರೆಯರನ್ನೆಲ್ಲ ಕರಯಿಸಿದಳು | ಜಯ ಜಯ ರಾಮ ಜಯರಾಮ | ಕುಸುಮ ಬಾಣಕ್ಕೆ ಮೂರ್ಜಾಲದಂತೆ ದಶರಥನ ಅರಮನೆಯಲ್ಲಿ | ಬಣ್ಣ ಬಣ್ಣದ ಪಟ್ಟೆಯನ್ನುಟ್ಟು ಪುತ್ರಂಗಿಗಳ ತೊಟ್ಟು ಮಿನುಗುವ ಮುಸುಕುವನ್ನುಟ್ಟು | ಪರಿಮಳ ತುಂಬಿ ನಿಂದಾರು ಅರಮನೆಯಲ್ಲಿ | ಜಯ ಜಯ ರಾಮ ಜಯ ರಾಮ | ಅಲ್ಲಿಗೆ ಅಲ್ಲಿಗೆ ಹಿಡಿಹೊನ್ನು ಚೆಲ್ಲುತ ದಶರಥ ಸುತನ ನಡೆತಂದು ಹೊಂಬಣ್ಣದ ಅರಿಸಿಣವ ಕಲಸಿ ತುಂಬಿದರು | ಹರಿವಾಣದಲ್ಲಿ ಅಂಬುಜ ಪೀತ ಶ್ರೀರಾಮರಿಗೆ | ಜಯ ಜಯ ರಾಮ ಜಯರಾಮ | ತುಡುಕುವ ತಮ್ಮಟ್ಟೆಗಳು ಭೇರಿ ನಿಶಾರೆಗಳು ಒಡನೇ ಕೂಗುವ ಕೊಂಬುಗಳು ಸಿಡಿಲಂತೆ ಗರ್ಜಿಸುವ. ಪಂಚಮ ವಾದ್ಯಗಳು ತುಂಬಿದವು. | ಜನಕನ ಅರಮನೆಯಲ್ಲಿ ದಿಕ್ಕು ದಿಕ್ಕಿನ ರಾಯರುಗಳಿಗೆ ರತ್ನಗಂಬಳಿಯನ್ನು ಹಾಸಿ ಸತ್ಕರಿಸಿದರು | ಜಯ ಜಯ ರಾಮ ಜಯರಾಮ | ಬ್ರಹ್ಮ, ಹರಿಹರ, ಇಂದ್ರರು ವಿಸ್ತಾರದ ಮಂಟಪದಲ್ಲಿ ಸೇರಿ ಹರುಷದಲ್ಲಿ ಹರಸಿದರು. | ಮಣಿ ಮಂಟಪದಲ್ಲಿ ಹಸೆಗಿಕ್ಕಿ ಕನಕದ ಮಣಿಯನ್ನು ತಂದಿರಿಸಿ ಇನಕೂಲ ರಾಮನ ಹಸೆಗೇಳೆನ್ನು ವಿನಯದಿಂದ ಕೌಶಲ್ಯ ಕರೆತಂದಳಾಗ | ಜಯ ಜಯ ರಾಮ ಜಯರಾಮ | ಬೇಗದಿ ಉಡುಗೆಯ ಹಾಸಿ ಆಗಲೇ ಉಪಚಾರಮಾಡಿ ಭಾಗ್ಯದಾರತಿಯ ಬೆಳಗಿದರು | ಪಾರ್ವತಿ ಸಹಿತ ನಾರಾಯಣ ನರಸಿ ಸೀತಾರಾಮರಿಗೆ | ಜಯ ಜಯ ರಾಮ ಜಯ ರಾಮ. |

# ಅರಿಸಿನ ಹಚ್ಚುವಾಗ ಹೇಳುವ ಹಾಡು

ಸಂಗ್ರಹಗಾರರು : **ಶ್ರೀಮತಿ ಚೆಟ್ಟಿಮಾಡ ಅಮ್ಮಪ್ಪ**

ನೀಲಬಲಾಂಗತ ನೀಲನೇ ಜಾಂಗತ ಪಾಲನ ಶೀಲಾಗೋಪಾಲ ದುರುಳತನದಿ ಪಾಲ್ ಮೊಸರನು ಕುಡಿಸುತ ಕರದಿಂದಲಿ ಅರಶಿಣ ಕರೆಗೂಡಿ ॥ ನೀಲ ॥ ಶೀಲನ ಪಾಲಗೋಪಾಲ ಮಗಲ ಗುಂಡಿಸಲರುಚಿ ನಿಗಿಲವು ವಿಚಿತ್ರ ಮಗಲತ ಪೂಸುವ ಚೌವಳವ ಪಾಲವ ಶೀಲ ಗೋಪಾಲ ಅರಶಿನ ಹಚ್ಚುವೆ ನೆರೆನೋಡಿ ॥ ನೀಲ ॥ ತಿಣ್ಣೆ ಕೋಲ ಚೆಂಡು ಬಣ್ಣದ ಬುಗುರಿಯ ಮನ್ನಣೆ ಕಳಗಿನೊಳ್ ಚಿಣ್ಣೆ ತಿಂದ ಕೈಗೆ ಅರಶಿಣ ಹಚ್ಚುವೆ ನೆರೆನೋಡಿ ॥ ॥ ನೀಲ ॥ ಪಾಲನ ಶೀಲಾ ಗೋಪಾಲ ಮಳೆಗಾಲದ ನೀಗದಿ ಲೇಶವು ಜಾಲಗಿರಿ ತಾಟವಿದವು ಕಾಲಿಗೆ ಪೂಸುವೆವು ಅರಶಿಣವ ॥ ನೀಲ ॥ ಪಾಲನ ಶೀಲಾ ಗೋಪಾಲ ॥



# ಅಕ್ಕಿ ಆರತಿ

ಸಂಗ್ರಹಿಸಿದವರು : **ಶ್ರೀಮತಿ ಹೊದ್ದೆಟ್ಟಿ ರುಕ್ಮಿಣಿ**

ಶ್ರೀ ತುಳಸಿ ಮಧ್ಯದೊಳಗಿರುವ ಕೃಷ್ಣನ ಬಳಸಿ ನೋಡುವ ಬನ್ನಿರೇ । ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೆ । ಸ್ವಾಮಿ ರಂಗನಾಥನ ಪ್ರಿಯೆಗೆ । ಕಡಲಸುತ ಪಿಡಿದು ಬಲು ಬೆಡಗಿನಿಂದಿರೆ ಸ್ವಾಮಿ । ಬಲು ಬೆಡಗಿನಿಂದಿರೆ ಬರುವುದೇ । ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೆ ॥ ಬಿಲ್ಲ ಹಬ್ಬಕೆ ಅಲ್ಲಿ ಪೋಗಿ ಮಾವ ಕಂಸನ ಕೊಂದಿರೆ । ಸ್ವಾಮಿ ಮಾವ ಕಂಸನ ಕೊಂದಿರೆ । ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೇ । ಸ್ವಾಮಿ ರಂಗನಾಥನ ಪ್ರಿಯೆಗೆ ॥ ಬಿಲ್ಲ ಹಬ್ಬಕೆ ಅಲ್ಲಿ ಪೋಗಿ ಮಾವ ಕಂಸನ ಕೊಂದಿರೆ । ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೆ ॥ ಹಾಸು ಮಂಚವ ಲೇಸು ತಲೆದಿಂಬು ಅಕ್ಕಿ ಹಾಸಿಗೆ ಹಾಸಲೇ । ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೆ । ಸ್ವಾಮಿ ರಂಗನಾಥನ ಪ್ರಿಯೆಗೇ ॥



# ಮುಖ ಕ್ಷೌರ ಮಾಡುವಾಗ ಹಾಡುವ ಹಾಡು

ಸಂಗ್ರಹಿಸಿದವರು : **ಶ್ರೀಮತಿ ಪೂಜಾರಿರ ಜಾನಕಿ**

---

ಅಂಗಳ ಸಾರಿಸಿ ರಂಗೋಲೆ ಬರೆದಿರಿಸಿ ರಾಯ ವಣ್ಣಯ್ಯನ ಚವರಕ್ಕೆ । ಮಂಟಪ ಸಾರಿಸಿ ಚಿತ್ತಿರ ಬರೆದಿರಿಸಿ ರಾಯವಣ್ಣಯ್ಯನ ಚವರಕ್ಕೆ ॥ ರಾಯವಣ್ಣಯ್ಯನ ಚವರದ ಕೆಲಸಕ್ಕೆ ನಾದಿಗಿ*ಲ್ಲದೆ ಮದುವಿಲ್ಲ । ನಾದಿಗನ ಹೇಳಲಿಕೆ ಯಾರ್ಯಾರು ಹೋಗಬೇಕು ಏಳಾಳಿ ಹಿರಿಯಣ್ಣ ॥ ಸಮರಾತ್ರಿಲೆದ್ದು ಕೆನೆಮೊಸರೂಟವ ಮಾಡಿ ನಾದಿಗರ ಮನೆಗೆ ಹೊರಟಾನು ಅಣ್ಣಯ್ಯ ನಾದಿಗನೆಂದು ಕರೆದಾನು ॥ ಒಂದು ಕರೆವಾಗ ಆಲಿಸಾನು ನಾದಿಗ । ಎರಡೊಮ್ಮೆ ಕರೆವಾಗ ಓ ಎಂದು ಓ ಗೊಂಡು ಕೈಯೆತ್ತಿ ಸರಣೆ ಮಾಡಿದಾನು ॥ ಏನಾಗಿ ಬಂದಿರಿ ಸ್ವಾಮಿ ಎಂತದಾಗಿ ಬಂದಿರಿ, ಬಂದ ಕಾರ್ಯಗಳ ತಿಳಿದೇಳಿ। ನಾಳೆ ನಮ್ಮರಮನೇಲಿ ಕಂದಯ್ಯಗೆ ಸೋಬಾನೆ ನಾದಿಗ ನಿಲ್ಲದೆ ಮದುವಿಲ್ಲ । ಬರುತೇನೆ ನಮ್ಮ ಸ್ವಾಮಿ ಬರುತ್ತೇನೆ ನಮ್ಮ ಸ್ವಾಮಿ । ಸರಣೆ ಮಾಡಿದಾನು । ಸಮರಾತ್ರಿಲೆದ್ದು ಕೆನೆ ಮೊಸರೂಟವ ಮಾಡಿ । ಚಿನ್ನದುಡುಪಗಳ ತೆಗೆದಾನು । ಚಿನ್ನದುಡುಪುಗಳ ತೆಗೆದಾನು ನಾದಿಗ ಮದುವೆಯರ ಮನೆಗೆ ನಡೆದಾನು ॥ ಆಗ್ಲೆ ಬರಹೇಳಿ ಬಹಳ ತಡವಾಯ್ತು ಪ್ರೀತ್ಯಿಲ್ಲೋ ನಿನಗೆ ಮನದಲ್ಲಿ । ಆಗಲೆ ಬಂದೇನು ಬಾಗಿಲದವರೆನ್ನ ತಡೆದಾರು । ಬಾಗಿಲದವರೆನ್ನತಡೆದು ಮಾತನೆ ಆಡಿ ಅಲ್ಲೊಂದರಗಳಿಗೆ ತಡವಾದೊ॥ ಅಲ್ಲೊಂದರಗಳಿಗೆ ತಡವಾದೊ ದೊರೆಗಳಿರ, ಪ್ರೀತ್ಯುಂಟು ನನಗೆ ಮನದಲ್ಲಿ । ಪ್ರೀತ್ಯುಂಟು ನನಗೆ ಮನದಲ್ಲಿ ದೊರೆಗಳಿರ ಚವರದ ಕೆಲಸ ಜೇಗನಾಗ್ಲಿ । ಒಂದು ಚಿನ್ನಕ್ಕೆ ಒಂಭತ್ತು ಸುತ್ತಿನ ಕೋಟೆ ಸುತ್ತಿನೊಳಗೆ ಮುಖತೋರೆ । ಸುತ್ತಿನೊಳಗೆ ಮುಖ ತೋರೆ ಅಣ್ಣಯ್ಯ ಚವರದ ಕೆಲಸ ಜತನಾಗ್ಲಿ । ಹನ್ನೆರಡು ಚಿನ್ನಕೆ ಹನ್ನೆರಡು ಸುತ್ತಿನ ಕೋಟೆ ಸುತ್ತಿನೊಳಗೆ ಮುಖ ತೋರೆ ಅಣ್ಣಯ್ಯ ಚವರದ ಕೆಲಸ ಜತನಾಗ್ಲಿ ॥ ಬಲಗೆನ್ನೆ ಒತ್ತುವನು ಬಲಗೆನ್ನೆಗೆ ಮಿಂಚಿಡುವಾನು । ಬಲಗೆನ್ನೆ ಒಳಗೆ ಕಸಕಪ್ಪು । ಬಲಗೆನ್ನೆಯೊಳಗೆ ಕಸಕಪ್ಪು ವುಳಿದಾರಿ ಅಕ್ಕಿಯ ವಾಜ‡ ನಿನಗಿಲ್ಲ ॥ ಕೈ ಉಗುರೊತ್ತುವನು ಕೈ ಉಗುರಿಗೆ ಮಿಂಚಿಡುವನು ಕೈ ಉಗುರಿನೊಳಗೆ ಕಸಕಪ್ಪು । ಕೈ ಉಗುರಿನೊಳಗೆ ಕಸಕಪ್ಪು ವುಳಿದಾರೆ ಹಣಡ ವಾಜ ನಿನಗಿಲ್ಲ ॥ ಕಾಲುಗುರಿನೊಳಗೆ ಕಸಕಪ್ಪು ಕಾಲುಗುರಿನೊಳಗೆ ಕಸಕಪ್ಪು ವುಳಿದಾರೆ ವಸ್ತ್ರದ ವಾಜ ನಿನಗಿಲ್ಲ ॥ ಬಲಗೆನ್ನೆ ಒತ್ತುವೆನು ಬಲಗೆನ್ನೆಗೆ ಮಿಂಚಿಡುವೇನು । ಬಲಗೆನ್ನೆಯೊಳಗೆ ಕಸಕಪ್ಪು ಬಿಡೋನಲ್ಲ । ಬಲಗೆನ್ನೆಯೊಳಗೆ ಕಸಕಪ್ಪು ಬಿಡೋನಲ್ಲ । ಬಲಗೆನ್ನೆಯೊಳಗೆ ಕಸಕಪ್ಪು ಬಿಡೊನಲ್ಲ । ಅಕ್ಕಿಯ ವಾಜ ನನಗುಂಟು ॥ ಕೈ ಉಗುರೊತ್ತುವೆನು ಕೈ ಉಗುರಿಗೆ ಮಿಂಚಿಡುವೇನು । ಕೈ ಉಗುರಿನೊಳಗೆ ಕಸಕಪ್ಪು ಬಿಡೋನಲ್ಲ । ಕೈ ಉಗುರಿನೊಳಗೆ ಕಸಕಪ್ಪು ಬಿಡೊನಲ್ಲ ಹಣದ ವಾಜ ನನಗುಂಟು॥ ಕಾಲುಗುರೊತ್ತುವೆನು ಕಾಲುಗುರಿಗೆ ಮಿಂಚಿಡುವೇನು । ಕಾಲುಗುರಿನಲಿ ಕಸಕಪ್ಪು ಬಿಡೋನಲ್ಲ । ಕಾಲುಗುರಿನಲಿ ಕಸಕಪ್ಪು ಬಿಡೋನಲ್ಲ ವಸ್ತ್ರದ ವಾಜ ನನಗುಂಟು ॥

—o—

* ನಾದಿಗ—ನಾಪಿತ, ಕ್ಷೌರಿಕ    * ವಾಜ—ಧನ, ಪುರಸ್ಕಾ.

## ಮಂಟಪದಲ್ಲಿ ಹಸೆ ಬರೆಯುವಾಗ ಹೇಳುವ ಹಾಡು

ಸಂಗ್ರಹಕಾರರು : **ಶ್ರೀ ಪೂಜಾರಿರ ಗೋಪಾಲ**

---

ಮುತ್ತಿನ ಮಂಟಪದಲಿ ಸ್ತ್ರೀಯರು ಐವರು,
ಸರಿಯಾಗಿ ಹಸೆಯ ಬರೆದಾರು ।
ಸರಿಯಾಗಿ ಹಸೆಯಾ ಬರೆದಾರು ಬಾಲೆಯರು,
ಸಿರಿದೇವಿ ಪತಿಯೇ ಹಸೆಗೇಳು ॥
ಕಾಲುಂಗರ ತಿರುಪಿಗೆ ಕಾಲಂದುಗೆ ಗಿನಿರವದಿ,
ಮೇಲೆ ದುಂದುಭಿ ಧ್ವನಿಯಲಿ ।
ಮೇಲೆ ದುಂದುಭಿ ಧ್ವನಿಯಲ್ಲಿ ಜಾನಕಿ
ವನಜೆ ಜಾನಕಿ ಹಸೆಗೇಳು ॥
ಬಳಕಿ ಹೊಂಬಾಳೆ ಹೊಳೆಯುವ ಪದಕದ ಮೇಲೆ,
ಮಲಕು ಮುತ್ತಿನ ಒಲಿಮಾಲೆ ।
ಮಲಕು ಮುತ್ತಿನ ಒಲಿಮಾಲೆ ಧರಿಸಿರುವ,
ನಾರಿ ಜಾನಕಿ ಹಸೆಗೇಳು ॥

ಗುಂಡು ಗುಲಗಂಜಿ ಸರವ ಗುಂಡು ಮುತ್ತಿನ ಸರವ,
ಬಂಧಿಯು ಮೇಲೆ ನವರತ್ನ ।
ಬಂದಿಯು ಮೇಲೆ ನವರತ್ನ ಧರಿಸಿರುವ,
ನಾರಿ ಜಾನಕಿ ಹಸೆಗೇಳು ॥
ಮುತ್ತಿನ ಮೂಗುತ್ತಿ ಮುಡಿದಂಡೆ ಹೂವು ಜಾಜಿ,
ಜಾಜಿ ಮಲ್ಲಿಗೆ ತರೂಬಿಗೆ ।
ಜಾಜಿ ಮಲ್ಲಿಗೆ ತುರುಬೀಗೆ ಸೀತಮ್ಮ,
ಪುತ್ತಳಿ ಜಾನಕಿ ಹಸೆಗೇಳು ॥
ದಶರಥ ಧೀರಾಧಿಗಳ ನೆನಸಿಕ್ಕೊಂಡು ಮನೆ ಮುಂದೆ,
ಮನೆ ಮುಂದೆ ಸತಿಗೆದ್ದ ರಾಮ ಹಸೆಗೇಳು ॥

---

## ಹಸೆಗೆ ಕರೆಯುವ ಹಾಡು

ಸಂಗ್ರಹಗಾರರು :

**ಶ್ರೀಮತಿ ಮೂಲಿಮಜ್ಲು ನೀಲಮ್ಮ**

ಹಸೆಗೆದ್ದು ಬಾ ನೀಲಮೇಘ ಶಾಮ ಹಸೆಗೆದ್ದು ಬಾ । ಜನಕನಾ ಪುರಕೆ ಹೋಗಿ ಹರಧನುವ ಮುರಿದ ದೇವ ಜಾನಕ್ಕಿಯ್ಯ ಕರವಪಿಡಿದು ಭಕ್ತರನು ಪೊರೆದ ದೇವ । ಮಧುರೆಯಲ್ಲಿ ಪುಟ್ಟಿನಂತೆ ಮಾವ ಕಂಸನ ಕೊಂದ ದೇವ ಮಾತಾಪಿತರ ಪೊರೆದ ದೇವ । ಹಸೆಗೆದ್ದು ಬಾ ಶೃಂಗಾರ ಶೀಲನೆ ಸಂಗೀತ ಲೋಲನ ರಂಗನಾಯಕಿ ಸಹಿತ ತುಂಗಪೀಠಕ್ಕೆ ಬಾ ಅಂಗನೆಯು ಕೂಡಿ ಮಂಗಳ ವನ್ನು ಪಾಡಿ ಮುತ್ತಿನಾಕ್ಷತೆಗಳ ನೆತ್ತಿಯೊಳಿಡುತಲಿ ರಂಗ ಬಾ ಎನ್ನುವರು "ಹಸೆಗೆದ್ದು ಬಾ"

# ಆರತಿಯ ಹಾಡುಗಳು

ಸಂಗ್ರಹಕಾರರು :—ಶ್ರೀಮತಿ ಕೊಡೆಕಲ್ಲು ಸೀತಮ್ಮ

---

1) ನೀರಜಭವೆಗೆ ಆರತಿಯ ಸೇರಿ ಬೆಳಗಿರೆ । ಕ್ಷೀರ ವಾರಧೀಸುತಗೆ ಸಾರ ಸಾಕ್ಷಿಗೆ । ನಾರದಾದಿ ಮುನಿರುಗೆಗೆ ಸೂರಜನಕನ ರಾಣಿಗೆ । ಉರಗವೇಣಿ । ಮಧುರ ವಾಣಿಗೆ । ಅಂಗಜಾತ ಜನನಿಗೆ ವರಭೃಂಗ ಕುಂತಳೇಗೆ । ನಿತ್ಯ ಮಂಗಳಾಂಗಿಗೆ ಆರತಿಯ ಸೇರಿ ಬೆಳಗಿರೆ ।

2) ಮಂಗಳಾರತಿ ಎತ್ತಿದರು ರಂಗೆಯರು ರಂಗ ನಾಥನಿಗೆ । ಸಂಭ್ರಮದಿಂದಲಿ ಮೂರು ಲೋಕವನ್ನು ಒಲಿದು ಪಾಲಿಸುವವಗೆ ನೀಲಮೇಘ ಶ್ಯಾಮಗೆ ಕರುಣಾ ಪಾಲ ಕಮಲನಾಭಗೆ । ಸುರಚೀರ ಗಂಭೀರ ಹರಿಗೆ । ರಂಗನಾಥಗೆ ಜಗನ್ನಾಥನೆ ಮಂಗಳಾರತಿ ಎತ್ತಿದರು ರಂಗ ನಾಥಗೆ.

## ಸ್ನಾನ ಮಾಡುವಾಗ ಹೇಳುವ ಆರತಿಯ ಹಾಡು

ಸಂಗ್ರಹಕಾರರು : ಶ್ರೀ ಪೂಜಾರರಿಗೆ ಗೋಪಾಲ

ಮುತ್ತಿನ ಮಣಿಮಂಟಪ ಮಧ್ಯದಲಿ । ಸ್ವಾಮಿ ಶ್ರೀ ರಾಮಚಂದ್ರ ಮಡದಿ ಜಾನಕಿ ನಿಂತಿರಲು । ಸತಿ ಪತಿಗೂ ಅಂಗನ ಸೀತೆಗೂ ಮುತ್ತಿನಾರತಿಯ ಬೆಳಾಗಿರೆ ॥ ಚಿನ್ನದ ಮಣಿಮಂಟಪ ಮಧ್ಯದಲಿ । ಸ್ವಾಮಿ ಶ್ರೀರಾಮಚಂದ್ರ ಮಡದಿ ಜಾನಕಿ ನಿಂತಿರಲು । ಸತಿ ಪತಿಗೂ ಅಂಗನೆ ಸೀತೆಗೂ ಚಿನ್ನದಾರತಿಯ ಬೆಳಾಗಿರೆ ॥ ಹವಳದ ಮಣಿ ಮಂಟಪ ಮಧ್ಯದಲಿ । ಸ್ವಾಮಿ ಶ್ರೀರಾಮ ಚಂದ್ರ ಮಡದಿ ಜಾನಕಿ ನಿಂತಿರಲು । ಸತಿಪತಿಗೂ ಅಂಗನೆ ಸೀತೆಗೂ ಹವಳದಾರತಿಯ ಬೆಳಾಗಿರೆ ॥

# ಅಕ್ಕನ ಕರೆಯುವ ಹಾಡು

ಸಂಗ್ರಹಿಸಿದವರು :
**ಶ್ರೀಮತಿ ಶಿವಣ್ಣ ನೀಲಮ್ಮ, ಮೂಳೆಮಜ್ಜು**

ನಮ್ಮಾವರ ಮನೆಯಲಿ ಸಣ್ಣವಂಗೆ ಸೋಬಾನ। ಅಕ್ಕನ ಕರಿಯಲಿಕೆ ಹೋಗೋದಾರೂ ಅಕ್ಕನ ಕರೆಯುಲಿಕೆ ಹೋಗೊದ್ದಾರು ತಂದೆಪ್ಪ। ಏಳಾಳಿಗಿಂತ ಹಿರಿಯಣ್ಣ ಹೋಗಾಬೇಕು॥ ಮಗನೇ ಅಕ್ಕನ ಕರೆಯಲಿಕೆ ಹೊಗಬೇಕು ॥೧॥ ಸೂಡಿ, ಸೂಡಿ ವೀಳ್ಯವ ತೆಗೆದಾನು ಅಣ್ಣಯ್ಯ। ಕೀಲುಕೀಲ್ ಅಡಿಕೆ ತೆಗೆದಾನು। ಅಕ್ಕನ ಕರೆಯಲಿಕೆ ಹೊರಟಾನು ಅಣ್ಣಯ್ಯ। ವೀಳ್ಯವ ತೆಕ್ಕೊಂಡು ಹೊರಟಾನು। ಸಣ್ಣಕ್ಕಿ ಬಯಲಲ್ಲಿ ನಡೆದಾನು ಅಣ್ಣಯ್ಯಾ। ಅಕ್ಕಾನರಮನೆಗೆ ನಡದಾನು॥೨॥ ಎದುರೀಗೆ ಹಾಲು ನೀರು ತಂದಾಳು ಹಿರಿಯಕ್ಕ ನೀರನ್ನೇ ತೆಗೆದು ಕೈ ಕಾಲು ಮುಖ ತೊಳೆದು। ಹಾಲನ್ನೆ ತೆಗೆದು ಬಾಯಾರಿಕೆ ಕಳೆದು ತೂಗುವ ಮಂಚದಲ್ಲಿ ಕೂತಾನೀಗ ॥೩॥ ವೀಳ್ಯವ ಕೊಟ್ಟಾಳು ಅಕ್ಕಯ್ಯ ವೀಳ್ಯವನ್ನೀಗ ಮೆದ್ದಾನು। ಬೆಳ್ಳಿಯ ಹರಿವಾಣ ತೆಗೆದು ವೀಳ್ಯವನಿರಿಸಿದನು ಅಣ್ಣಯ್ಯ। ನಮ್ಮವರ ಮನೆಲಿ ಸಣ್ಣವಂಗೆ ಸೋಬಾನ, ಕಳಸಕನ್ನಡಿ ಹಿಡಿಯಲಿಕ್ಕೆ ಬರಾಬೇಕು॥ ಕಳಸ ಕನ್ನಡಿ ಹಿಡಿಯಲಿಕೆ ಬರಬೇಕು ಅಕ್ಕಯ್ಯ ನಮ್ಮರ ಮನೆಗೆ॥೪॥ ಕಡಿಕೆ ಭತ್ತವ ಬಿಟ್ಟು ತುಳುಕೆ ಹೊನ್ನನು ಬಿಟ್ಟು ನಾನ್ಹೇಗೆ ಬರಲಿ ತಮ್ಮಾ ಮದುವೆಗೆ॥ ಕಡಿಕೆ ಭತ್ತಕೆ ಕಾವಲಿಗೆ ಜನಕೊಡುವೆ ಬಾರಕ್ಕ ಮನೆಯ ಮದೂವೆಗೆ॥೫॥ ದೇವರಂತ ಮಾವನ ಬಿಟ್ಟು ಪಶುವಿನಂತ ಅತ್ತೆಯ ಬಿಟ್ಟು ನಾನೇಗೆ ಬರಲಿ ತಮ್ಮಾ ಮದೂವೇಗೆ॥ ದೇವರಂತ ಮಾವಗೆ ಅತ್ತೆಯವರಿಗೆ ದಂಡಿಗೆ ನಾ ಕೊಡುವೆ, ಬಾರಕ್ಕ ನಮ್ಮರಮನೆಗೆ॥ ಬಾಳೆಯ ಸುಳಿಯಂತ ಪುರುಷನ ಬಿಟ್ಟು। ಗೆಜ್ಜೆಕೋಲು ಕುವರನ ನಾ ಬಿಟ್ಟು ನಾನೇಗೆ ಬರಲಿ ತಮ್ಮ ಬರಲಿ ಮದೂವೆಗೆ ॥೬॥ ಬಾಳೆಯ ಸುಳಿಯಂತ ಪುರುಷನಿಗೆ ಕುದುರೆಯ ನಾ ಕೊಡುವೆ ಬಾರಕ್ಕ ನಮ್ಮರಮನೆಗೆ॥ ಕರೆಯುವರು ಯಾರಿಲ್ಲ ಕಾಸುಮರು ಯಾರಿಲ್ಲ। ನಾನ್ಹೇಗೆ ಬರಲಿ ತಮ್ಮ ಮದೂವೆಗೆ॥೭॥ ಒಂದೂ ವೀಳ್ಯವ ಕೊಡುವಲ್ಲಿಂದ। ಎರಡೂ ವೀಳ್ಯವ ಕೊಟ್ಟು ನೆರೆಮನೆಯಕ್ಕಂದಿರ ಕರೆಸಿಕೊ ತಮ್ಮಾ ಮದುವೆಗೆ ಬರೋದಿಲ್ಲ॥ ಆಕಾಶಕ್ಕೆ ಏಡಿಯುಂಟು ಅಕ್ಕಯ್ಯ। ಭೂಮಿಗೆದಾಪುಂಟು, ನಿನ್ನ ಮಾತಿಗೆ ಎಣೆಯಿಲ್ಲಾ॥ ಅರಮನೆಯ ಮೆಟ್ಟಲನ್ನೆ ಇಳಿದಾನು ತಮ್ಮನು ತಿರುಗಿ ನೋಡದೆ ನಡೆದಾನು ಅರಮನೆಗೆ ॥೮॥ ತಾಯವ್ವ ಬಂದು ಕೇಳಿದಾಳು। ಅಕ್ಕ ಹಿರಿಯಕ್ಕ ಬರಾಲಿಲ್ಲ ಎಲೆ ಮಗನೆ॥ ಬರಲಿಲ್ಲವೆಂದು ಹೇಳಿದಾನು ನೆರೆಮನೆಗೆ ಹೋದಾನು ಅಣ್ಣಯ್ಯ। ಒಂದು ವೀಳ್ಯವ ಕೊಡುವಲ್ಲಿಂದ। ಎರಡು ವೀಳ್ಯವ ಕೊಟ್ಟು ಕಳಸ ಕನ್ನಡಿ ಹಿಡಿಯಲಿಕೆ ಬರಾಬೇಕು॥ ಕಳಸ ಕನ್ನಡಿ ಹಿಡಿಯಲಿಕ್ಕೆ ಬರಬೇಕು ಅಕ್ಕಂದಿರ ಹಾಗೆಂದು ಹೇಳಿ ಹೋದಾನೀಗ॥ ಕಳಸ ಕನ್ನಡಿ ಹಿಡಿವಾರೀಗ ಅಕ್ಕಂದಿರು। ಕಳಸ ಕನ್ನಡಿ ಹಿಡಿದಾರು॥ ದಿಬ್ಬಣವನೆ ಹೊರಟಾರು। ಅಷ್ಟೆಂಬ ಹೊತ್ತಿನಲಿ ಗೆಜ್ಜೆ ಕಾಲು ಕುವರನು ಸುಂಟಿ ಸುಳಿಯ್ಹಾಗೆ ಬಳುಕುತ। ಶಿಸುಬಾಲೆ ಬಾನ ತೆಕ್ಕೊಂಡು ಹೊರಟಾಳು ಅಕ್ಕಯ್ಯ ಅರಮನೆಗೇನೆ ನಡೆದಾಳು॥ ಎದುರಿಗೆ ಹಾಲು ನೀರೂ, ಯಾರುವೆ ತರಾಲಿಲ್ಲ। ಜನವಿಲ್ಲದವಳು ಈಗೇತಕೆ ಬಂದಿದ್ದಿನಿ ಮಗಳೆಡೆ। ಕಡೆಕಣ್ಣು ಕೋಡಿ ದುಃಖ ಬಿಟ್ಟಾಳು ಹಿರಿಯಕ್ಕಾ। ಎಲೆ ತಮ್ಮ ನೀ ಕೇಳು। ಎಲೆ ತಮ್ಮ ನೀ ಕೇಳು। ಗೆಜ್ಜೆ ಕಾಲು ಕುವರನು। ಸುಂಟೆಯ ಸುಳಿಯ್ಹಾಗೆ ಬಳುಕೂತ್ತ। ಹಾಗಾಗಿ ಬಂದೆ ಎಲೆ ತಮ್ಮ। ಕಳಸ ಕನ್ನಡಿ ಹಿಡಿಯಲಿಕೆ ಕೊಡಿ ನನಗೆ॥೯॥ ಅದುವೇನೂ ಆಸೋದಿಲ್ಲಿ ಎಲೆಯಕ್ಕ ಒಂದು ವೀಳ್ಯವ ಕೊಡುವಲ್ಲಿಂದ ಎರಡು ವೀಳ್ಯವ ಕೊಟ್ಟು। ನೆರೆಮನೆಯಕ್ಕಂದಿರಿಗೆ ಕಳಸ ಕನ್ನಡಿ ಹಿಡಿಯಲಿಕ್ಕೆ ಕೊಟ್ಟಿದ್ದೇವೆ॥ ಅದೇನು ಆಗಲಿಕ್ಕಿಲ್ಲ ಎಲೆ ತಮ್ಮ। ನನಗಾದ್ರೆ ಕಳಸ ಕನ್ನಡಿ ಹಿಡಿಯಲಿಕ್ಕೆ ಕೊಡಾಬೇಕು॥ ಒಂದು ವೀಳ್ಯವ ಕೊಡುವಲ್ಲಿಂದ ಅಕ್ಕಯ್ಯಾ

ಎರಡು ವೀಳ್ಯವ ಕೊಟ್ಟು। ನೀನವರ ಪಾದಕ್ಕೆರಗಿ ಸರಣಾವ ಮಾಡಿ ಬೇಕಾದ್ದ ಬೇಡಿಕೋ ॥ ಒಂದು ವೀಳ್ಯವ ಕೊಡುವಲ್ಲಿಂದ ಎರಡೂ ವೀಳ್ಯವನ್ನೀಕ। ಕೊಟ್ಟಾಳು ಅಕ್ಕಯ್ಯ ಕೊಟ್ಟು ಸರಣಾವ ಮಾಡಿದಾಳು ॥ ೧೦ ॥ ಕೊಡಲಿಕ್ಕೆ ಹಿಡಿದ ಕಳಸ ಕನ್ನಡಿಯಿದುವಲ್ಲ। ಹೋಗಕ್ಕ ನಾನೀಗ ಕೊಡೋದಿಲ್ಲ ಕಡೆ ಕಣ್ಣ ಕೊಡಿ ದುಃಖ ಬಿಟ್ಟಾಳೀಗ। ಅಕ್ಕಯ್ಯ ತಾಯಿಯ ಹತ್ತಿರ ನಡೆದಾಳು ॥ ತಾಯವ್ವ ನೀವು ಕೇಳಿ ಎಲೆತಾಯವ್ವ ನೀವು ಕೇಳಿ ಕಳಸ ಕನ್ನಡಿ ಕೊಡಿ ನನಗೆ ॥ ಎಲೆಮಗಳೆ ನೀ–ಕೇಳು ಎಲೆ ಮಗಳೆ ನೀ ಕೇಳೂ। ಕಳಸ ಕನ್ನಡಿ ಕೊಡಿಸೋಕೆ ಆಗೋದಿಲ್ಲ ॥ ೧೧ ॥ ನಿನಗೆ ಐಶ್ವರ್ಯ ಸಿಕ್ಕಿತೆಂದು ಹೆಮ್ಮೆಯಲಿ ತಪ್ಪನ ಎಲ್ಲಿಗೂ ಕಾಣಲಿಲ್ಲ ॥ ನನ್ನಿಂದಾಗದ ಕೆಲಸವಿದೂ ಎಲೆ ಮಗಳೆ ನಿನ್ನ ತಂದೆ ಹತ್ತಿರ ಹೋಗಿ ಬೇಡಿಕೊಳ್ಳೀಗ ॥ ತಂದೆಪ್ಪನವರ ಪಾದ ಹಿಡಿದು ಸರಣಾವ ಮಾಡಿದಾಳು ಮಗಳು। ಕಡೆಕಣ್ಣ ಕೋಡಿ ದುಃಖ ಬಿಟ್ಟಾಳೀಗ ॥ ಬೇಸಾರವೇತಕೆ ಮಗಳೆ ಒಂದು ಗೊನೆ ಯಿಂದೀಗ। ಒಂದೂವಾ ಹಣ್ಣು ಹೋಯ್ತೆಂದು ಮನದಲ್ಲಿ ನಾವು ನೆನೆದೇವು ॥ ೧೨ ॥ ಅದೇನು ಆಗಲಿಕ್ಕಿಲ್ಲ ತಂದೆ ಯವರೆ ಕಳಸ ಕನ್ನಡಿ ಹಿಡಿಯಲಿಕ್ಕೆ ಕೊಡಿಸಾಬೇಕು ॥ ಹರಿವಾಣ ತುಂಬ ವೀಳ್ಯವ ತೆಗೆದುಕೊ ನೀನು। ನೆರೆ ಮನೆಯ ಅಕ್ಕಂದಿರಿಗೆ ಕೊಟ್ಟು ಅವರ ಕಾಲು ಹಿಡಿದು ಸರಣಾವ ಮಾಡಿ ಕಳಸ ಕನ್ನಡಿ ಬೇಡಿಕೊ ॥ ವೀಳ್ಯವ ನ್ನೀಗ ಕೊಟ್ಟು ಬೇಡಿದಾಳು ಅಕ್ಕಯ್ಯ ಕಳಸ ಕನ್ನಡಿ ಕೊಟ್ಟಾರೀಗ ॥ ೧೩ ॥ ಕಳಸ ಕನ್ನಡಿಯನ್ನೀಗ ಕೊಟ್ಟಾರು ನೆರೆಮನೆಯಕ್ಕಂದಿರು। ಕಳಸ ಕನ್ನಡಿ ಹಿಡಿದಾಳು ಹಿರಿ ಯಕ್ಕ ದಿಬ್ಬಣವನ್ನೆ ಹೊರಟಾರು ॥ ೧೪ ॥

# ಹೆಣ್ಣಿಗೆ ಸೀರೆ ಉಡಿಸುವಾಗ ಹಾಡುವ ಹಾಡು

ಸಂಗ್ರಹಗಾರರು :

**ಶ್ರೀಮತಿ ಮೂಲೆ ಮಜ್ಲು ಶಿವಣ್ಣ ನೀಲಮ್ಮ**

ಚಿತ್ತದಿ ಗಣಪನ ಪುತ್ತಳೀಮರಣದ ಸೀರಿ ಉತ್ತಮ ಕರಣಿಕರ ಮಡದಿ ಮಹಾಲಕ್ಷ್ಮಿ ಉಡುಬಾರೆ।

ಗೋಡೆ ಜೇಡನು ನೈದ ಹಳವಿನೋರಣದ ಸೀರೆ ನಿಚ್ಚಳು, ನಿಜಕಂಬಿ ನಟುಬೆಳೆದು। ನಿಚ್ಚಳು ನಿಜಕಂಬಿ ನಡುಬೀಡೋರಣದ ಸೀರೆ ರಾಣಿ ನೀನೀಗ ಉಡುಬಾರೆ। ಅಂಚಿಗೆ ಅರಗಿನ ಬಣ್ಣ ಸೆರಗೀಗೆ ಸೀತೆಯ ಬಣ್ಣ ಅಂಚಿ ಗಂಚಿಗೆ ಗಿಳಿಸೂರು। ಅಂಚಿಗಂಚಿಗೆ ಗಿಳಿಸೂರು ಬಣ್ಣದ ಸೀರೆ ರಾಣಿ ನೀನೀಗ ಉಡುಬಾರೆ। ಸೆರಗೀಗೆ ಸೀತೆಯ ಬಣ್ಣ ಅಂಚಿಗೆ ಅರಗಿನ ಬಣ್ಣ ನಡುವಿನ ಬಣ್ಣ ಗುರಗಂಜಿ। ಗುರಗಂಜಿ ಬಣ್ಣದ ಸೀರೆಯ ರಾಣಿ ನೀನೀಗ ಉಡುಬಾರೆ। ಬೊಚ್ಚಳಿಗೆ ಅಡಗುವುದು ಉಟ್ಟ ಬಣ್ಣದ ಸೀರೆ ನಾರಿ ಯವರು ಹೋಗಿ ಜಿಲೆಮಾಡಿ ತಂದ। ನಾರಿಯವರು ಹೋಗಿ ಜಿಲೆಮಾಡಿ ತಂದಂತಹ ಸೀರೆ ನಾರಿ ಜಾನಕ್ಕಿ ಉಡುಬಾರೆ। ಕತ್ತಲೆಗೆ ಅಂಜುವುದು ಕಾಗುಣಿಸಿ ನಗೆಯು ವುದು ಮುತ್ತಿನ ಭರಣಿಯಲ್ಲಿ ಅಡಗುವುದು। ಮುತ್ತಿನ ಭರಣಿಯಲ್ಲಿ ಅಡಗುವ ಸೀರೆಯ ಉಡುಬಾರೆ। ಪಟ್ಟೆ ಸೀರೆಯ ಮೇಲೆ ತೇಲಾಡುವ ಗೊಂಬೆಗಳು ನಲವತ್ತೊಂದು ವರಹಕ್ಕೆ ಬೆಲೆಯಾದೊ। ನಲವತ್ತೊಂದು ವರಹಕ್ಕೆ ಬೆಲೆಯಾದ ಸೀರೆಯು ರಾಣಿ ನೀನೀಗ ಉಡುಬಾರೆ। ಮುಂದಲೇ ತಂದೆವು ಮುತ್ತು ಸಾರುವ ಮುತ್ತುರಂಗ ಪತಿಯೆಂಬ ರವಿಕೆಯ। ರಂಭೆ ನೀನೀಗ ಉಡುಬಾರೆ। ಆಗಸನಿಗೆ ಹಾಕುವುದಲ್ಲ ಬಿಸಲಿಗೆ ತೋರುವುದಲ್ಲ ತಾಳಿಯ ಮೇಲೆ ನೈದ ಪಟ್ಟೆ। ತಾಳಿಯ ಮೇಲೆ ನೈದ ಪಟ್ಟೆಗಳ ನಾರೀ ಜಾನಕ್ಕಿ ಉಡುಬಾರೆ। ಅಳೆದರೆ ಅರವತ್ತು ಮೊಳ ಹಿಡಿದರೆ ಹಿಡಿತುಂಬ, ಬಿಟ್ಟರೆ ಬೀದಿಯೆಲ್ಲ ತೆಕೆಪಿಲ್ಲಾದ ಸೀರೆ ತರಣಿ ತಂಗಮ್ಮಳಿಗೆ ಉಡುಸ್ಯಾರು.

# ಹೆಣ್ಣು ಹುಡುಕುವ ಸೋಬಾನೆ

ಸಂಗ್ರಹಿಸಿದವರು : **ಶ್ರೀಮತಿ ಕುದುಕುಳಿ ಬೋಜಮ್ಮ**

ಬಾಳೆಹಣ್ಣಿ ಬಿದ್ದು ಬಾಲೆವರು ಸತಿಗದ್ದು ಬಾಲೆವರು ನಾವು ಗೆದ್ದ ಗಳೀಗೇಲ । ಬಾಲೆಯವರು ನಾವು ಗೆದ್ದ ಗಳಿಗೇಲಿ ಮಾವನವರೇ ನಾವು ಹೋಗಿ ಬರುತ್ತೇವೆ ಮನೆ ಮೂರ ॥ ಸಿಂಬೆ ಹನಿ ಬಿದ್ದು ರಂಬೆಪುರ ಬಳಿಗೆದ್ದು ರಂಬೆಯವರು ನಾವು ಗೆದ್ದ ಗಳೀಗೆಲಿ । ರಂಬೆವರು ನಾವು ಗೆದ್ದ ಗಳಿಗೇಲ ಅತ್ತೆಮ್ಮನವರೇ ನಾವು ಹೋಗಿ ಬರುತ್ತೇವೆ ಮನೆ ದೂರ ॥ ಸೇರಲ್ಲಿರುವ ಮುತ್ತು ಸೇರಲಿಕ್ಕೆ ಅತಿ ಕಷ್ಟ ಸೇರಿತೋ ಶಿವನ ದಯದಿಂದ । ಸೇರಿತೋ ಶಿವನ ದಯದಿಂದ ಮಾವನವರೆ ನಾವು ಹೋಗಿ ಬರುತ್ತೇವೆ ಮನೆ ದೂರ ॥ ಮಾನದಲ್ಲಿರುವ ಮುತ್ತು ಸಿಕ್ಕಲಿಕ್ಕೆ ಅತಿ ಕಷ್ಟ ಸಿಕ್ಕಿತೋ ಶಿವನ ದಯದಿಂದ । ಸಿಕ್ಕಿತೋ ಶಿವನ ದಯದಿಂದ ಅತ್ತೆಮ್ಮನವರೇ ನಾವು ಹೋಗಿ ಬರುತ್ತೇವೆ ಮನೆ ದೂರ ॥ ಪಟ್ಟೆ ಹಚ್ಚಡದೊಳಗೆ ಮುಚ್ಚಿ ಮಡುಗಿದ ಮಗಳು ಸಿಕ್ಕಿತೋ ಶಿವನ ದಯದಿಂದ । ಸಿಕ್ಕಿತೋ ಶಿವನ ದಯದಿಂದ ಮಾವನವರೇ ಹೋಗಿ ಬರುತ್ತೇವೆ ಮನೆ ದೂರ ॥ ಶ್ಯಾಲೆ ಹಚ್ಚಡದೊಳಗೆ ಮುಚ್ಚಿ ಮಡುಗಿದ ಮಗಳು ಸಿಕ್ಕಿತೋ ಶಿವನ ದಯದಿಂದ। ಸಿಕ್ಕಿತೋ ಶಿವನ ದಯದಿಂದ ಅತ್ತೆಮ್ಮನವರೇ ಹೋಗಿ ಬರುತ್ತೇವೆ ಮನೆ ದೂರ ॥ ಕಡಲೆ ಹೊಲದಲ್ಲಿ ನಿಂತುಂಟು ನಮ್ಮ ದಿಬ್ಬಣ ನಾವು ಹೋಗಿ ಬರುವ ತನಕ ಬಲು ಜೋಕೆ । ಉದ್ದಿನ ಹೊಲದಲ್ಲಿ ನಿಂತುಂಟು ನಮ್ಮ ದಿಬ್ಬಣ ನಾವು ಹೋಗಿ ಬರುವ ತನಕ ಬಲು ಜೋಕೆ ॥

# ಹೆಣ್ಣು ಹಿಡಿಯುವ ಸೋಬಾನೆ

ಸಂಗ್ರಹಗಾರರು : **ಶ್ರೀಮತಿ ಮೂಲೆಮಜಲ್ಲ ದಮಯಂತಿ**

ಮುತ್ತಿನ ಸೆರಗಡಲ ಮುಚ್ಚಿಟ್ಟ ಮಾವನ ಮಗಳು ಸಿಕ್ಕಿತೋ ನಮಗೆ ಶಿವನ ದಯೆಯಿಂದ ॥ ಸಿಕ್ಕಿತ್ತೋ ಶಿವನ ದಯದಿಂದ ಮಾವನ ಮಗಳ ರಾಜ್ಯಕ್ಕೆ ನಮ್ಮಣ್ಣ ದೊರೆರಾಯ ॥ ಹವಳದ ಸೆರಗಡಲಿ ಮುಚ್ಚಿಟ್ಟ ಎಳೆ ಮುದ್ದು ॥ ಸಿಕ್ಕಿತ್ತೋ ಶಿವನ ದಯದಿಂದ ॥ ಸಿಕ್ಕಿತ್ತೋ ಶಿವನ ದಯದಿಂದ ಅತ್ತೆಯ ಮಗಳೀ ನಾವು ನೆನೆದ ಕಾರ್ಯ ಸೆರವಾದೋ ॥ ಅತ್ತೆಯ ಮಗಳ ರಾಜ್ಯಕ್ಕೆ ನಮ್ಮಣ್ಣ ದೊರೆರಾಯ ॥ ಚಿನ್ನದ ಸೆರಗಡಲಿ ಮುಚ್ಚಿಟ್ಟ ಮಾಣಿಕ್ಯ ಸಿಕ್ಕಿತ್ತೋ ಶಿವನ ದಯದಿಂದ ಸಿಕ್ಕಿತ್ತೋ ॥ ಭಾವನ ತಂಗಿ ರಾಜ್ಯಕ್ಕೆ ನಮ್ಮಣ್ಣ ದೊರೆರಾಯ ॥ ಪಾರ್ವತಿ ಸೀತಾದೇವಿಗಳ ವಸ್ತ್ರದಡಿಯಲ್ಲಿ ಮುಚ್ಚಿಟ್ಟ ಎಳೆ ಶಿಸುವು ಸಿಕ್ಕಿತ್ತೋ ॥ ಶಿವನಾ ದಯದಿಂದ ॥ ಸಿಕ್ಕಿತ್ತೋ ॥ ನಾದಿನಿ ಮೈದುನರ ಅಕ್ಕಂಗೆ ನಾವು ನೆನೆದ ಕಾರ್ಯ ಸೆರವಾದೋ ಶಿವನಾ ದಯದಿಂದ ಸೆರವಾದೋ ನಾದಿನಿ ಮೈದುನರ ಅಕ್ಕನ ರಾಜ್ಯಕ್ಕೆ ನಮ್ಮಣ್ಣ ದೊರೆ ರಾಯ ॥

# ಅಳಿಯನ ನೋಡುವ ಹಾಡು

ಸಂಗ್ರಹಗಾರರು : **ಕುಮಾರಿ ಕೊಡೆಕೆಲ್ಲು ಸಂಜಮ್ಮ**

ಚಾಣೆ ಕಲ್ಲಿನ ಮೇಲೆ ಸರಮುತ್ತು ಸುರಿಯೋನೆ ಚಂದ್ರ ಮಂಡಲ ಕೊಡೆ ಬಂತು ನಿಮ್ಮನೆಗೆ ಅತ್ತೆ ನೋಡತ್ತೆ ಅಳಿಯಾನ ಚಾಣೆ ಕಲ್ಲಿನ ಮೇಲೆ ಸರಮುತ್ತು ಸುರಿಯೋ ಸೂರ್ಯ ಮಂಡಲದ ಕೊಡೆ ಬಂತು. ಅತ್ತೆ ಅಳಿಯನ। ಚಪ್ಪರಕ್ಕೆ ದೀವಿಗೆ ಬೇಗ ತಂದಿರಿಸಿ ಅರ್ಕ ಮಂಡಲದ ಕೊಡೆಬಂತು ಅತ್ತೆ ನೋಡತ್ತೆ ಅಳಿಯನ। ಬಾಲಟ್ಟುವಾಗ ಘಂಟೆ ಬಾರಿಸುವಾಗ ಬಾಯಿಗೆ ಬಜಿ ಬೆಣ್ಣೆ ಕೊಡುವಾಗ ಆಗ ನೋಡಿದನೆ ಅಳಿಯನ। ಪುತ್ರ ಸುಟ್ಟುವಾಗ ಬಟ್ಟಲು ಬಾರಿಸುವಾಗ ನಾನಾ ರಾಗಗಳು ನುಡಿಸುವಾಗ ಆಗ ನೋಡಿದೆನೆ ಅಳಿಯಾನ। ಯಾವಾಗಲೂ ನಮ್ಮನೆಗೆ ಪಗಡೆಯಾಡಲಿಕ್ಕೆ ಬರುತ್ತಿದ್ದ ಆಗ ನೋಡಿದನೆ ಅಳಿಯನ। ನಿತ್ಯವಾಗಲು ನಮ್ಮನೆಗೆ ಚೆಂಡಾಟಡಲಿಕ್ಕೆ ಬರುತ್ತಿದ್ದ ಆಗ ನೋಡಿದೆನೆ ಅಳಿಯಾನ। ಅದೊಂದು ಹೆಚ್ಚೇನು ಇದೊಂದು ಕುಂದೇನು ಇದೊಂದು ದೋತ್ರ ಹೇಗಲಲ್ಲಿ. ಇದೊಂದು ದೋತ್ರ ಹೆಗಲಲ್ಲಿಟ್ಟಿದ್ದೀರಿ ಧಾರೆರೆದು ನೋಡಿ ಅಳಿಯಾನ। ಮಾಳಿಗೆ ಮನೆ ಕಂಡು, ಜೋಳಿಗೆ ಹೊನ್ನಕಂಡು ಅಳಿಯರಾಯರ ಗುಣಕಂಡು ಮೇಲಾದ ಮಗಳ ಕೊಡಬೇಕು, ॥



# ದಿಬ್ಬಣ ಹೊರಡಿಸುವ ಹಾಡು

ಸಂಗ್ರಹಗಾರರು : **ಶ್ರೀಮತಿ ಮೂಲೆಸಂಜಪ್ಪ ಶಿವಣ್ಣ ನೀಲಮ್ಮ**

ಅರಮನೆ ಸಾರಿಸಿ ರಂಗೋಲೆ ಬರೆದಿರಿಸಿ। ಮಗನ ಶೃಂಗರಿಸಿ ಒಳಗಿಂದ ತಾಯವ್ವ। ಚಿನ್ನದ ಪೆಟ್ಟಿಗೆ ತೆಗೆದಿರಿಸಿ ॥ ಉಪ್ಪರಗೆ ಸಾರಸಿ ರಂಗೋಲೆ ಬರೆದಿರಿಸಿ। ಮಗನ ಶೃಂಗರಿಸಿ ಒಳಗಿಂದ ತಾಯವ್ವ। ಒಳಗಿಂದ ತಾಯವ್ವ ಹಣದ ಪೆಟ್ಟಿಗೆ ತೆಗೆದಿರಿಸಿ। ಏಳೇಳು ಇಂದ್ರನೇ ಏಳೇಳು ಚಂದ್ರನೇ ಏಳೇಳು ಗಂಭೀಗರುಡನೆ! ಏಳೇಳೆಂದರೆ ಏಳುವನು ನಾನಲ್ಲ ॥ ಸೋದರ ಅತ್ತೇ ಮಾವಂದಿರು ಬರಾಬೇಕು. ॥ ೧ ॥ ಹಸೆ ಮೇಲಿಂದ ಒಂದು ಓಲೆ ಬರೆದಾನು ಅಣ್ಣಯ್ಯ। ಓಲೆ ಕಂಡಾಕ್ಷಣ ಬರಬೇಕು ಅತ್ತೆ ಮಾವನವರೇ। ಕೂತಲ್ಲಿಂದ ಒಂದು ಓಲೆ ಕಳೂಗನ ॥೩॥ ಓಲೆಯು ತೆಕ್ಕೊಂಡು ಹೋದಾರು ಅಣ್ಣಯ್ಯ ಸಣ್ಣಕ್ಕಿ ಬಯಲಲ್ಲಿ ನಡೆದಾರು। ದೂರದಿಂದಲಿ ಮಾವನವರು ಅಳಿಯ ಬರುವುದ ಕಂಡು। ಎಡ ಹಾದಿಯಲ್ಲಿ ಹೋಗುತ್ತಾರೋ। ಬಲ ಹಾದಿಯಲಿ ಬರುತ್ತಾರೋ ನಮ್ಮ ರಾಮು ಅರಮನೆಗೆ ॥ ೩ ॥ ಬೆಳ್ಳಿಯ ಗಿಂಡಿಗಳ ಬೆಳಗಿದರು ಅತ್ತೆಮ್ಮ। ಚಿನ್ನಾದ ಹರಿವಾಣ ಬೆಳಗಿದರು। ಎದುರಿಗೆ ಹಾಲು ನೀರು ತೆಕ್ಕೊಂಡು ಹೋದಾಳು ಅತ್ತೆಮ್ಮ ॥ ನೀರನ್ನೇ ತೆಗೆದು ಕೈ ಕಾಲು ಮುಖ ತೊಳೆದು। ಹಾಲನ್ನೆ ತೆಗೆದು ಬಾಯಾರಿಕೆ ಕಳೆದಾನು। ತೂಗುವ ಮಂಚದಲಿ ಕೂತಾರೀಗ। ಏನಾಗಿ ಬಂದಿರಳೀಯ. ಎಂಥದಾಗಿ ಬಂದಿರಳೀಯ। ಬಂದಂಥ ಕಾರ್ಯ ತಿಳೂದೇಳಿ। ಓಲೆಯನ್ನೆ ತೆಗೆದು ಕೊಟ್ಟಾನು। ಓಲೆ ಓದಿ ನೋಡಿದರು

ಮಾವನವರು ಬೇಗದಿಂದ ಓಲೆ ಓದಿದಾರು ॥ ಮಡದಿಯೆ ನೀ ಕೇಳೂ, ಮಡದಿಯೆ ನೀ ಕೇಳೂ ನೂರೊಂದು ಅನ್ನದ ಡಿಗೆ ಮಾಡು ಬೇಗ । ದೊಡ್ಡ ಮಾಳಿಗೆಯೊಳಗೆ ನಡೆದಾರು ಮಾವನವರು । ದೊಡ್ಡ ಪೆಟ್ಟಿಗೆ ತೆಗೆದಾರು । ಪೆಟ್ಟಿಗೆ ಕೀಲು ಸಡಲಿರಿಸಿ ಮಾವನವರು ಕೋಲ್ಕಂಬಿ ದೋತ್ರ ತೆಗೆದಾರು ॥ ಮುದ್ರೆ ಮುಂಡಾಸು ತೆಗೆದು ಎರಕಾಗಿ ಇರುಸಿ ಅಳಿಯನರಮನೆಗೆ ಹೊರಟಾರು । ವಜ್ರದ ಶರಟುಗಳ ತೆಗೆದು ಭುಜನೇರಿ ಇಳುಸಿದಾರು, ಅಳಿಯನೆರಮನೆಗೆ ಹೊರಟಾರು ॥ ಆಳುದ್ದ ಕೋಲ್ಕೊಡೆ ಹಿಡಿದಾರು ಮಾವನವರು ಅಳಿಯನರಮನೆಗೆ ಹೊರಟಾರು ॥ ಅತ್ತೆಮ್ಮ ಎದ್ದಾರು ಸಣ್ಣ ಮಾಳಿಗೆಯೊಳಗೆ ನಡೆದಾರು । ಸಣ್ಣ ಪೆಟ್ಟಿಗೆ ತೆಗೆದಾರು ಅತ್ತೆಮ್ಮ । ಪೆಟ್ಟಿಗೆ ಕೀಲಿ ಸಡಿಲಿರುಸಿ ಜರಿ ಬಂದ ಸೀರೆ ಉಟ್ಟಾರೀಗ ॥ ಗುರುಗುಂಜಿ ಬಣ್ಣದ ರವಕೆಯು ತೊಟ್ಟಾರು ಅತ್ತೆಮ್ಮ । ಅಳಿಯನರಮನೆಗೆ ಹೊರಟಾರು । ಮುಂಡೆ ಬಾಚಿದರು ಮಲ್ಲಿಗೆ ಹೂವ ಮುಡಿದಾರು ಅತ್ತೆಮ್ಮ । ಅಳಿಯಾನರಮನೆಗೆ ಹೊರಟಾರು ॥ ಮುನ್ನಲ್ಲಿ ಮುನ್ನೂರು ವರಹ ಕಟ್ಟಿದಾರು ಮಾವನವರೂ ಅಳಿಯನರಮನೆಗೆ ಹೊರಟಾರು ॥ ಸೆರಗಲ್ಲ ಸೆರೆಹೊನ್ನ ಕಟ್ಟಿದಾರು ಅತ್ತೆಮ್ಮ ಅಳಿಯನರಮನೆಗೆ ಹೊರಟಾರು ॥ ಗೆಜ್ಜೆ ಕತ್ತಿಪಸೆ ಕೊಡೆ ಹಿಡಿದಾರು ಅತ್ತೆಮ್ಮ । ಅಳಿಯನರಮನೆಗೆ ಹೊರಟಾರು । ಸಣ್ಣಕ್ಕಿ ಬಯಲಲ್ಲಿ ಹೊರಟುನೇ ಹೋದಾರು । ದೂರದಿಂದಲಿ ಅಳಿಯ. ನೋಡುತ್ತಾನೆ 1 ನನ್ನ ಅತ್ತೆ ಮಾವನವರು ಸಣ್ಣಕ್ಕಿ ಬಯಲಲ್ಲಿ ಬರುತ್ತಾರೆ ॥ ಎದುರಿಗೆ ಹಾಲು ನೀರು ತೆಕ್ಕೊಂಡು ಹೋಗಿರೆಂದು ಕೂತಲ್ಲಿಂದ ಹೇಳೀದಾನು । ನೀರನ್ನೆ ತೆಗೆದು ಕೈ ಕಾಲು ಮುಖ ತೊಳೆದು ಹಾಲನ್ನೇ ತೆಗೆದು ಬಾಯಾರಿಕೆ ಕಳೆದಾರು । ತೂಗುವ ಮಂಚದಲಿ ಕೂತಾರೀಗ ॥ ಸೂಡಿ, ಸೂಡಿ ವೀಳ್ಯವ ಹಾರಿವಾಣದೊಳಿರಿಸಿ ಮಾವಗೆ ವೀಳ್ಯವ ಕೊಡಿಸೀದನು । ವೀಳ್ಯವನ್ನೆ ಮೆದ್ದಾರು ಮಾವನವರು ದೊಡ್ಡಾ ಮಾಳಿಗೆಯೊಳಗೆ ನಡೆದಾರು ॥ ಮುನ್ನಿಂದ ಮುನ್ನೂರು ವರಹ ಹೆಚ್ಚಿದಾರು ಮಾವನವರು ಅಳಿಯನ ಸೆರಗಿಗೆ ಕಟ್ಟಿದಾರು ।

ಅತ್ತೆಮ್ಮ ಹೋದಾರು ಸೆರಗಿಂದ ಸೆರೆಹೊನ್ನ ಬಿಚ್ಚಿ ಅಳಿಯನ ಸೆರಗೀಗೆ ಕಟ್ಟಿದಾರು ॥ ಏಳೇಳು ಇಂದ್ರವನೇ ಏಳೇಳು ಗಂಭೀಗರೊಡನೇ । ಹಸೆ ಮೇಲಿಂದ ಎದ್ದಾನು ಮದುವಣ್ಣ । ಅಕ್ಕ ಬಾರಕ್ಕ ಕಳಸ ಕನ್ನಡಿ ಹಿಡಿ ನೀನೂ ಮುತ್ತಿನ ಮೆಟ್ಟು ಕಲ್ಲು ಇಳಿಮುಂದೆ ॥ ಅಕ್ಕ ಬಂದಾಳು । ಕಳಸ ಕನ್ನಡಿ ಹಿಡಿಯಲಿಕೆ । ತಾಯವ್ವ ಎದ್ದಾರು ಕಳಸ ಕನ್ನಡಿ ತೆಗೆದು ಕೊಟ್ಟಾರು । ಮಗಳ ಕೈಯಲ್ಲಿ ಕೊಟ್ಟಾರೀಗ । ಮುತ್ತಿನ ಮೆಟ್ಟು ಕಲ್ಲು ಇಳುದಾಳು ಅಕ್ಕಯ್ಯ ಚಪ್ಪರದ ಒಳ ಮಧ್ಯ ಮುತ್ತಿನ ಮೇಲು ಕಟ್ಟಡಿಯಲಿ ದಿಬ್ಬಣ ಇಳಿದು ನಿಂತರೀಗ ॥ ಹತ್ತು ಬೆರಳಿಗೆ ಕೆತ್ತಿಸಿದ ಉಂಗುರವನಿಟ್ಟು ತಂದೇಗೆ ವೀಳ್ಯ ॥ ಕೊಟ್ಟಾನು । ತಂದೆ ಪಾದ ಹಿಡಿದು ಶರಣವ ಮಾಡಿದಾನು । ಆಯಸ್ಸುವಂತ ನೀನಾಗು ಮಗನೇ ಭವಿಷ್ಯಕ್ಕೆ ದೊಡ್ಡವನಾಗು ಪುತ್ರರ ಫಲವ ಪಡೇ ನೀನು । ಹತ್ತು ಬೆರಳಿಗೆ ಕೆತ್ತಿಸಿದ ಉಂಗುರವನಿಟ್ಟು, ಮಾವನಿಗೆ ವೀಳ್ಯ ಕೊಟ್ಟಾನು । ಮಾವನಿಗೆ ವೀಳ್ಯಾವ ಕೊಟ್ಟಾನು ಮದುವಣ್ಣ ಮಾವ ಬುದ್ಧಿಯ ಹೇಳೀದಾರು ॥ ಮಾವನವರ ಮನೇಲಿ ಭಾವಮೈದುನರು ಹೆಚ್ಚು । ಬಲು ಜೋಕೆಯಲಿ ಹೋಗೀ ಬರಾಬೇಕು ॥ ಕುದುರೆ ಮೇಲೇರಿದಾನು ಮದುವಣ್ಣ । ಒಂದೆ ಕಿರುಗಿ ಹೋದಾನು ಮುಂದೆ ಸಾಲದೆಂದು ಮೊಗಮಾಡಿ । ಮದುವಣ್ಣ । ರಾಗಿ ಕಾಳಂತೆ ರಾಜ್ಯೆಲ್ಲ ನನ್ನ ಬಳಗಾ ಬಳಗ ಕೊಂದೋಲೆ ಬರೆದಾನು ॥ ಕುದುರೆಯ ಮೇಲೇರಿ ಮುಂದೆ ನೋಡಿದಾನು ಮದುವಣ್ಣ । ಮುಂದೆ ಸಾಲದೆಂದು ಮೊಗ ಬಾಡಿ ಮುಂದೆ ಸಾಲದೆಂದು ಮೊಗಬಾಡಿ ಮದುವಣ್ಣ ಸಾಸುವೆ ಕಾಳಂತೆ ಊರೆಲ್ಲ ಅಕ್ಕ ತಂಗಿಯರು ಊರಿಗೆ ಒಂದು ಓಲೆ ಬರೇದಾನು ॥ ಹಿಂದೆ ಸಾವಿರ ಮುಂದೆ ಸಾವಿರ ಎರಡು ಸಾವಿರ ಜನರೆಲ್ಲಾ । ಎರಡು ಸಾವಿರ ಜನವೆಲ್ಲ ದಿಬ್ಬಣವೆನೆ ಹೊರಟಾರು ॥ ಮಾವನರಮನೆಯಲಿ ಅತ್ತಿಗೆ ನಾದುನಿಯರು ಬಲು ಹೆಚ್ಚು । ವೀಳ್ಯದಲಿ ಕಪಟ ತಂದಿರುಸ್ಯಾರು ಮಗನೇ ಬಲು ಜೋಕೆಯಲಿ ಕನ್ಯೆಯ ಕರಕೊಂಡು ಅರಮನೆಗೆ ಬರಾಬೇಕು ॥

# ಹಾಲು ತುಪ್ಪ ಕುಡಿಸುವ ಸೋಬಾನೆ

ಸಂಗ್ರಹಿಸಿದವರು : **ಶ್ರೀಮತಿ ಪೂಜಾರೀರ ಬೆಳ್ಯವ್ವ**

ಬಟ್ಟ್ಬಾಲು ತೊಳೆದಿರಿಸಿ ಸರೋರುಹ*ನೆರಿಯವಳೆ ಸಣ್ಣ ಮುತ್ತೀನ ಕೊರಳವಳೆ । ಸಂಣ್ಣ ಮುತ್ತಿನ ಕೊರಳವಳೆ ತಾರಮ್ಮ ಬಟ್ಟ್ಬಾಲು ತೊಳೆದು ಎಡೆಮಾಡಿ ॥ ಕಿನ್ನಾಲು ತೊಳೆದಿರಿಸಿ ಮುತ್ತಿನ ನೆರಿಯವಳೆ ಸಂಣ ಮುತ್ತಿನ ಕೊಳವಳೆ । ತಾರಮ್ಮ । ಕಿದ್ನಾಲು ತೊಳೆದು ಎಡೆಮಾಡಿ । ಕಾಳಿಯ ಕರೆದಾಳು ಕೆಂದೆಯ ಕರೆದಾಲು ಕೆಂದೆಯ ಕರೆದ ನೊರೆ ಹಾಲು ಸಕ್ಕರೆ । ಸ್ವಾಮಿಗೆ ಅರ್ಪಿಸಿದ ನವ ಧಾನ್ಯ ॥ ಕೆಂದೆಯ ಕರೆದಾಲು । ಕೆಂಪಿಯ ಕರೆದ ನೊರೆಹಾಲು ಸಕ್ಕರೆ ॥ ದೇವರಿಗೆ ಅರ್ಪಿಸಿದ ನವ ಧಾನ್ಯ ॥ ಅಕ್ಕರ ದಿನದಲ್ಲು ಸುಕ್ರ ಮುತ್ತಿನಾರತಿಯ । ಅಕ್ಕರದಾರತಿಯ ಬೆಳಾಗಿರೆ ॥ ಸಕ್ರಮ ದಿನದಲ್ಲು ಸಕ್ರ ಮುತ್ತಿನಾರತಿ । ಶ್ರೀಮಂದಾರತಿಯ ಬೆಳಾಗಿರೆ ॥ ನೂರೆ†ಲೆಯ ಎಲೆ ತಂದು ಬೊಗ್ಗಿಸಿ ದೊನ್ನೆಯ ಕಟ್ಟಿ ನುಗ್ಗಮ್ಮನಂತೆ ಮಡದಿಯರು । ನುಗ್ಗವ್ಮನಂತೆ ಮಡದಿಯರು ಕನ್ನೆಗೆ ಹಾಲು ತುಪ್ಪ ಎಡೆಮಾಡಿ । ಬಾಳೆಯ ಎಲೆ ತಂದು ಬೊಗ್ಗಿಸಿ ದೊನ್ನೆಯ ಕಟ್ಟಿ :ನುಗ್ಗಮ್ಮನಂತೆ ಮಡದಿಯರು । ನುಗ್ಗಮ್ಮನಂತೆ ಮಡದಿಯರು ನಿಸ್ತ್ರೆಗೆ ಹಾಲು ತುಪ್ಪ ಯೆಡೆಮಾಡಿ

---

* ಸರೋವರ = ಕಮಲ ; ತಾವರೆ.   † ನೂಲೆ = ನೂರು + ಎಲೇ (ದಳ) = ಶತದಲ ; ತಾವರೆ



Be calm in arguing ; for fierceness makes and error a fault, and truth discsurtesy.

—Herbert

The poet enters into himself in order to create. The contemplative enters into God in order to be created.

—Thomas Merton



# ಬಣ್ಣ ಬಂಗಾರದ ಹಾಡು

ಸಂಗ್ರಹಿಸಿದವರು : **ಪೂಜಾರಿರ ಚೆಳ್ಯವ್ವ**

ಮುತ್ತಿನ ಚೆಂಡು ಮುವತ್ತು ನವಲಕ್ಕಿ* ಹೋಗಿ ಮಾತಾಡುವ ಒಲಿ ಮಾಲೆ। ಹೋಗಿ ಮಾತಾಡುವ ಒಲಿಮಾಲೆ§ ಕಂಚಿಗೂ ಪ್ರದಿಂದೋದಿಸುವ† ರೂಪಾ.... ಗಳಾ॥ ಹವಳದಾ ಚೆಂಡು ಹದಿನಾರು ನವಲಕ್ಕಿ ಕರೆದು ಮಾತಾಡುವ ಒಲಿಮಾಲೆ ಕಂಚಿಗೂ ಪ್ರದಿಂದೋದಿಸುವ ರೂಪಾ... ಗಳಾ। ಚಿನ್ನದ ಚೆಂಡು ಹನ್ನೆರಡು ನವಲಕ್ಕಿ ನಿಂತು ಮಾತಾಡುವ ಒಲಿಮಾಲೆ। ನಿಂತು ಮಾತಾಡುವ ಒಲಿಮಾಲೆ ಕಂಚಿಗೂ ಪ್ರದಿಂದೋದಿಸುವ ರೂಪಾ.. . ಗಳಾ॥

ಹೋದ ಹೋದಲೆಲ್ಲಾ- [ಬಾಲಯ್ಯಗೆ ಗುಡಿ ಹೊಯಿಸ್ಸಿ, ಬಾಲಯ್ಯಗೆ ಹಾಲ ಕೊಡೂ....ವಳು। ಬಾಲಯ್ಯಗೆ ಹಾಲ ಕೊಡುವಳು ಸೋಬಾನದವಳು ಸಾಗಿ ಸೋಬನಕ್ಕೆ ಬರಾ ಹೇಳಿ। ನಿಂತ ನಿಂತಲೆಲ್ಲಾ ಕಂದಯ್ಯಗೆ ಗುಡಿಹೊಯಿಸಿ, ಕಂದಯ್ಯಗೆ ಹಾಲು ಕೊಡೂವಳು। ಕಂದಯ್ಯಗೆ. ಹಾಲು ಕೊಡುವಳು ಸೋಬಾನದವಳು ಸಾಗಿ ಸೋಬಾನಕ್ಕೆ ಬರಾ....ಹೇಳಿ॥ ಕೂತ ಕೂತಲೆಲ್ಲಾ ಪುತ್ರಯ್ಯಗೆ ಗುಡಿಹೊಯಿಸಿ ಪುತ್ರ ಯ್ಯಗೆ ಹಾಲು ಕೊಡೂ....ವಳು। ಪುತ್ರಯ್ಯಗೆ ಹಾಲ ಕೊಡುವರು ಸೋಬಾನದವಳು ಸಾಗೀ ಸೋಬಾನಕ್ಕೆ ಬರಾ....ಹೇಳಿ।

ಆ ಊರು ಮಳೆ ಬಂದು ಈ ಊರು ಹೊಳೆ ತುಂಬಿಗುತ್ತಿಸಾಗರದ ಹೊಸ ಮಳೆ। ಗುತ್ತಿ ಸಾಗರದ ಹೊಸ ಮಳೆ ಬಂದು ಮಾವನವರೆ ನಮಗೊಂದು ದೋಣಿ ಕಳೂ....ಗಿರಿ॥

ನಮಗಿಲ್ಲದ ದೋಣಿ ನಾವೆಲ್ಲಿಂದ ಕಳುಗಾಲಿ ನಿಲ್ಲಲೀ ಜನರು ಹೊಳೆತಾವಾ....।

ಆ ಊರು ಮಳೆ ಬಂದು ಈ ಊರು ಕೆರೆ ತುಂಬಿ, ಗೋವೆ ಸಾಗರದ ಹೊಸಾಮಳೆ। ಗೋವೆ ಸಾಗರದ ಹೊಸ ಮಳೆ ಬಂದು ಮಾವನವರೇ ನಮಗೊಂದು ಚಿಮಣಿ ಕಳೂ....ಗಿರಿ॥

ನಮಗಿಲ್ಲದ ಚಿಮಣಿ ನಾವೆಲ್ಲಿಂದ ಕಳುಗಾಲಿ ಮೆಲ್ಲಗೆ ಸಾಗೆ ಬರಾಹೇಳಿ....। ಎಂದಾಗವರು ಮಾವ ಮುದ್ರಾದುಂಗುರವ ಕಳೂಗ್ಯಾರು॥

ಗದ್ದೆ ಏರಿಯ ಮೇಲೆ ಇರುವೆ ಸಾಲಿಟ್ಟಂತೆ ದಿಬ್ಬಣ ನಿಮ್ಮನೆಗೆ ಬರೂತೇವೆ। ದಿಬ್ಬಣ ನಿಮ್ಮನೆಗೆ ಬರುತೇವೆ ಮಾವನವರೇ ನಮಗೊಂದು ಹೊತ್ತೆ ಕಳೂ.... ಗಿರಿ॥

---

* ನವಿಲು (ನವಿಲು) + ಹಕ್ಕಿ § ಒಲಿ (ಪ್ರೀತಿಯ) + ಮಾಲೆ (ಸಮೂಹ) = ಪ್ರೀತಿಯ ಬಂಧುಗಳು.

† ಪ್ರ (ಮೊದಲಲ್ಲಿ)ದಿಂದ + ಒದಿಸುವ (ಅಲಂಕರಿಸುವ)

ನಮಗಿಲ್ಲದ ಹೊತ್ತೆ ನಾವೆಲ್ಲಿಂದ ಕಳುಗಾಲಿ ಕನ್ನೆವರ ಓಲೆ ಬೆಳಕಲ್ಲಿ ಬರಾ ...ಹೇಳಿ ॥

ಗದ್ದೆ ಏರಿಯ ಮೇಲೆ ಗುಬ್ಬಚ್ಚಿ ಸಾಲಿಟ್ಟಂತೆ ದಿಬ್ಬಣ ನಿಮ್ಮನೆಗೆ ಬರುತೇವೆ। ದಿಬ್ಬಣ ನಿಮ್ಮನೆಗೆ ಬರು ತೇವೆ ಮಾವನವರೇ ನಮಗೊಂದು ಹೊತ್ತೆ ಕಳೂ.... ಗಿರಿ ॥

ನಮಗಿಲ್ಲದ ಹೊತ್ತೆ ನಾವೆಲ್ಲಿಂದ ಕಳುಗಾಲಿ। ನೇತ್ರೆವರ ಕಪಿನ ಬೆಳಕಲಿ ಬರಾ....ಹೇಳಿ॥

ದೂರದ ದಿಬ್ಬಣ ಧೂಳಿದ್ದು ನಾವು ಬಂದು ಗುಡ್ಡೆಯ ನವಿಲೆಲ್ಲಾ ಬೆದರಿ ಬೆಟ್ಟವ ಸೇರಿ ಒಪ್ಪತ್ತಿನ ಊಟ ತಡವಾದೊ। ಹತ್ತಿರದ ದಿಬ್ಬಣ ಹತ್ತಿಳಿದು ನಾವು ಬಂದು ಹಟ್ಟಿಯ ದನವೆಲ್ಲಾ ಬೆದರಿಯಾವು। ಹಟ್ಟಿಯ ದನವೆಲ್ಲ ಬೆದರಿ ಬೆಟ್ಟವ ಸೇರಿ ಒಂದೊತ್ತಿನ ಮೇವು ತಡವಾವೊ ॥

ಹತ್ತನಾರದ ಗಟ್ಟವ ಹತ್ತಿತು ನಮ್ಮ ದಿಬ್ಬಣ, ಹತ್ತು ಕೊಪ್ಪರಿಗೆ ಬಿಸಿ ನೀರು। ಹತ್ತು ಕೊಪ್ಪರಿಗೆ ಬಿಸಿ ನೀರು ಬಾಳೆಯ ಹಣ್ಣು ಬಚ್ಚಲು ಮನೆಲಿಡ ಹೇಳಿ॥ ಇಳಿಯನಾರದ ಗಟ್ಟವ ಇಳಿದೀತು ನಮ್ಮ ದಿಬ್ಬಣ ಏಳು ಕೊಪ್ಪರಿಗೆ ಬಿಸಿ ನೀರು। ಏಳು ಕೊಪ್ಪರಿಗೆ ಬಿಸಿ ನಿಂಬೆಯ ಹಣ್ಣು ಬಚ್ಚಲು ಮನೇಲಿಡಹೇಳಿ ॥

ಹಾರವರ ಮನೆ ಮುಂದೆ ಹಟ್ಟೆ ಕೆಸರು, ಹಟ್ಟೆ ಕೆಸರು ನೇವಳ ಜಾರಿದರೆ ಮಧಾಲಿಗೆ। ನೇವಳ ಜಾರಿದರೆ ಮಳಲಿಗೆ ಮಾವನವರೇ, ರುವಾರದ ಬಾಣ ಬಿಡುತ್ತಾನೆ। ರುವಾರದ ಬಾಣ ಬಿಡುತ್ತಾನೆ ಆಚೆಲೊಬ್ಬ ಮುತ್ತಿನ ಚೆಂಡಿಡಿದು ಬಲೂ ಜತನ ॥

ಶೆಟ್ಟಿಯವರ ಮನೆ ಮುಂದೆ ಹಟ್ಟೆ ಕೆಸರು ಹಟ್ಟೆ ಕೆಸರು ಸರಪಣಿ ಜಾರಿದರೆ ಮಳಲಿಗೆ। ಸರಪಣಿ ಜಾರಿದರೆ ಮಳಲಿಗೆ ಮಾವನವರೆ ರುವಾರದ ಬಾಣ ಬಿಡುತ್ತಾನೆ। ರುವಾರದ ಬಾಣ ಬಿಡುತ್ತಾನೆ ಆಚೆಲೊಬ್ಬ ಚಿನ್ನದ ಚೆಂಡಿಡಿದು ಬಲೂ ಜತನ ॥

ಮುತ್ತಿನಂತಹ ಬಯಲಲ್ಲಿ, ಮುತ್ತಿನಂತಹ ದೊರೆ ರಾಯ, ಮುತ್ತು ಚೆಲ್ಲಾಡಿ ಬರೂತ್ತಾನೆ। ಮುತ್ತು ಚೆಲ್ಲಾಡಿ ಬರುತ್ತಾನೆ ಮಾವನವರೇ ಮುತ್ತು ಬೇಕೋ ಚಪ್ಪರಕ್ಕೆ, ಮುತ್ತು ಬೇಕೋ ಚಾವಡಿಗೆ, ಮುತ್ತು ಬೇಕೋ ಮಾವನ ಮಗಾಳಿಗೆ ॥

ಚಿನ್ನದಂತಹ ಬಯಲಲ್ಲಿ ಚಿನ್ನದಂತಹ ದೊರೆ ರಾಯ ಚಿನ್ನ ಚೆಲ್ಲಾಡಿ ಬರೂತ್ತಾನೆ। ಚಿನ್ನ ಚೆಲ್ಲಾಡಿ ಬರುತ್ತಾನೆ ಮಾವನವರೇ ಚಿನ್ನ ಬೇಕೋ ಚಪ್ಪರಕ್ಕೆ ಚಿನ್ನ ಬೇಕೋ ಚಾವಡಿಗೆ ಚಿನ್ನ ಬೇಕೋ ಮಾವನ ಮಗಾಳಿಗೆ ॥

ಹವಳದಂತಹ ಬಯಲಲ್ಲಿ ಹವಳದಂತಹ ದೊರೆ ರಾಯ, ಹವಳ ಚೆಲ್ಲಾಡಿ ಬರೂತ್ತಾನೆ। ಹವಳ ಚೆಲ್ಲಾಡಿ ಬರುತ್ತಾನೆ ಮಾವನವರೇ ಹವಳ ಬೇಕೋ ಚಪ್ಪರಕ್ಕೆ ಹವಳ ಬೇಕೋ ಹವಳ ಬೇಕೋ ಮಾವನ ಮಗಾ ಳಿಗೆ ॥

ಮುತ್ತಿನಂತಹ ಚಪ್ಪರದಡಿಯಲ್ಲಿ ಮುತ್ತಿನಂತಹ ಮಣೆ ಇರಿಸಿ, ನಂದಾದೀವಿಗೆ ಎದೂರಿಗೆ। ಬಾಳೆಯ ಹಣ್ಣ ನೋಡಿ ಬಾಲೆವರು ಬರೋಡು ನೋಡಿ ಬಾಗಂಚಿನ ಸೇಲೆ ಸೆರಗಾ ನೋಡಿ। ಬಾಗಂಚಿನ ಸೇಲೆ ಸೆರಗಾವ ನೋಡಿ, ಬಾಲೆವರು ಬರದೊಂದು ಬೆಡಗಾ ನೋಡಿ ॥ ಇಂಬೆಯ ಹಣ್ಣ ನೋಡಿ ರಂಬೆಗೆರು ಬರುವುದು। ನೋಡಿ ರಂಗಂಚಿನ ಸೇಲೆ ಸೆರಗಾ ನೋಡಿ ರಂಗಂಜಿನ ಸೇಲೆ ಸೆರಗಾವ ನೋಡಿ, ರಂಬೆವರು ಬರುವುದೊಂದು ಬೆಡಗರ ನೋಡಿ ॥ ಕಿತ್ತಳೆ ಹಣ್ಣು ನೋಡಿ, ಚಿಕ್ಕವರು ಬರುವುದ ನೋಡಿ, ಚಿಕ್ಕಂಚಿನ ಸೇಲೆ ಸೆರಗಾವ ನೋಡಿ; ಚಿಕ್ಕವರು ಬರುವುದೊಂದು ಬೆಡಗಾ ನೋಡಿ ॥

ಹಿಂಗಡಗ ಮುಂಗಡಗ ಬೆಳ್ಳಿಯ ಎಂಟು ಕಡಗ

ಒಪ್ಪಾವೆ ನಿಮ್ಮ ಮನಸ್ಸೀಗೆ। ಒಪ್ಪಾವೆ ನಿಮ್ಮ ಮನಸ್ಸಿಗ್ಗೆ ಮಾವನವರೇ ತೋರಿರಿ ನಿಮ್ಮ ಸಭೇಗೆಲ್ಲಾ....

ಓಲಿಗೆ ಚಿನ್ನ ಕೊಂಡು ವೈನಾಡ ತಿರುಗಿದೆ ವೈನಾಡ ಅಗಸಾಲೆ ಮನೆಲಿಲ್ಲ ವೈನಾಡಗಸಾಲೆ ಮನೆಲಿಲ್ಲ ಮಂಟಪ ದಲ್ಲಿಲ್ಲ ಓಲೆ ತಿದ್ದುವಾಗ ಬೆಳಗಾದೊ ॥ ಕೊಪ್ಪಿಗೆ ಚಿನ್ನ ಕೊಂಡು ಒಪ್ಪೂರ ತಿರುಗಿದೆ, ಒಪ್ಪೂರ ಅಗಸಾಲೆ ಮನೆ ಲಿಲ್ಲ। ಒಪ್ಪೂರ ಅಗಸಾಲೆ ಮನೆಲಿಲ್ಲ ಮಂಟಪದಲಿಲ್ಲ ಕೊಪ್ಪು ಕೊಳ್ಳುವಾಗ ಬೆಳಗಾದೊ ॥

ಸ್ಯಾಲೆ ತಂದಿದೇವೆ ಹನ್ನೆರಡು ವರಹದ ಪಟ್ಟಿ, ಒಪ್ಪ್ಯಾವೆ ಮಾವ ನಿಮ್ಮ ಮನಸ್ಸಿಗೆ। ಒಪ್ಪ್ಯಾವೆ ನಿಮ್ಮ ಮನಸ್ಸಿಗೆ ಮಾವನವರೆ ತೋರಿರಿ ನಿಮ್ಮ ಸಭೇಗೆಲ್ಲ। ರವಕೆ ತಂದಿದ್ದೇವೆ ಬಟ್ಟುಕುಚ್ಚದ ಪಟ್ಟೆ ಆದವೋ ನಿಮ್ಮ ಮಗಳಿಗೆ ಮಾವನವರೇ ತೋರಿರಿ ನಿಮ್ಮ ಸಭೇ ಗೆಲ್ಲಾ ॥

ಚಿನ್ನದ ಹೊರಗೋಡೆ ಚಿನ್ನದ ಒಳಗೋಡೆ, ಚಿನ್ನ ಹನಿಸಿದ*ಅರಾಮನೆ। ಚಿನ್ನ ಹನಿಸಿದ ಅರಮನೆಯ ಒಳ ಗಿರುವ ಕನ್ನೆಯನೀಚೆಗೆ ಕರೇತನ್ನಿ। ಮುತ್ತಿನ ಹೊರ ಗೋಡೆ ಮುತ್ತಿನ ಒಳಗೋಡೆ ಮುತ್ತು ಹನಿಸಿದ ಅರಾ ಮನೆ ಮುತ್ತು ಹನಿಸಿದ ಅರಮನೆ ಒಳಗಿರುವ ಕನ್ಯೆಯ ನೀಚೆಗೆ ಕರೇತನ್ನಿ॥

ಪಟ್ಟೆ ಸೇಲೆಯೊಳಗೆ ಮುಚ್ಚಿಟ್ಟ ಮಗಳು ಸಿಕ್ಕಿತು ಶಿವನ ದಯೆಯಿಂದ। ಸಿಕ್ಕೀತು ಶಿವನ ದಯೆಯಿಂದ ಮಾವನವರೇ ಬಾಳೆ ಸುಳಿಯಂತೆ ಸುಳೂಕುತ್ತಾ। ಶ್ಯಾಲೆ ಹಚ್ಚಡದೊಳಗೆ ಮುಚ್ಚಿಟ್ಟ ಮಗಳು ಸಿಕ್ಕೀತು ಶಿವನ ದಯೆಯಿಂದ। ಸಿಕ್ಕೀತು ಶಿವನ ದಯೆಯಿಂದ ಕುಂಠಿ ಸುಳಿಯಂತೆ ಸುಳೂಕುತ್ತಾ....॥

* ಹನಿಸಿದ — ಜಿಲ್ಲಿದ.

## ದಾರೆ ಆಗುವಾಗ ಹೇಳುವ ಹಾಡುಗಳು

ಸಂಗ್ರಹಿಸಿದವರು : **ಶ್ರೀಮತಿ ಪೂಜಾರಿರ ಬೊಳ್ಳವ್ವ**

**ತಾಯಿ ಶ್ರೀ ಕಮಲ ತಂದೆಯು ವಿಶ್ವೇಶ** ॥ ಕಲ್ಯಾಣವೇ ॥* ತಾಯಿ ಶ್ರೀ ಕಮಲ ಎಂಬುದ ಕೇಳೀಗ ಕನ್ಯೆಗೆ ದಾರೆ ಒದಗೀತು ॥ ಕಲ್ಯಾಣವೆ ಸೀತೆ ಕಲ್ಯಾಣವೇ ॥ ಕನ್ಯೆಗೆ ದಾರೆ ಒದಗೀತೆಂಬುದ ಕೇಳಿ ಸ್ವಾಮಿ ಯವರಿಗೆ ಓಲೆ ಕಳುಹಿದರು ॥ ಕಲ್ಯಾಣವೇ ॥ ಓಲೆಗಳನ್ನು ಓದಿಸಿ ನೋಡ್ಯಾರು ಗೌಡವರೆ ಗೌಡವರೆಯಿತ್ತ ಕೇಳಿ ॥ ಕಲ್ಯಾಣವೇ ॥ ಗೌಡವರೇ ಗೌಡವರೆಯತ್ತ ಕೇಳಿ ಗೌಡವರೆ ಕನ್ಯೆಯರ ಮನೆಗೆ ಹೋಗುತ್ತೇವೆ ॥ ಕಲ್ಯಾಣವೇ ॥ ಕನ್ಯೆಯರ ಮನೆಗೆ ಹೋಗುತ್ತೇವೆ ಗೌಡವರೆ ಒಚ್ಚಲ ಮನೆಗೆ ಝಂಕಿಯ ಹಾಕಿ ॥ ಕಲ್ಯಾಣವೇ ॥ ಕಾಮನ ಗುಡ್ಡಕ್ಕೆ ಬೇಕ್ಯಾದರು ಹಾಕ್ಯೇವು ಭೀಮನ ಗುಡ್ಡಕ್ಕೆ ನೀರು ಬೆರಸಿ ॥ ಕಲ್ಯಾಣವೇ ॥ ಭೀಮನ ಗುಡ್ಡಕ್ಕೆ ನೀರಾದರೆ ಬೆರಿಸ್ಯಾವು ನೀರು ಭೋಜನಕ್ಕೆ ಹೊರಡೆಂದು ॥ ಕಲ್ಯಾಣವೇ ॥ ನೀರ ಭೋಜನ ಮಾಡಿ ದರು ಸ್ವಾಮಿಯವರು ಸೀಗೆಯ ಬಾಗೆ ತೆಕ್ಕೊಂಡು ॥ ಕಲ್ಯಾಣವೇ ॥ ಸೀಗೆ ಬಾಗೆಯು ತಕ್ಕೊಂಡು ಸ್ವಾಮಿ ಯವರು ನೀರು ಭೋಜನಕ್ಕೆ ಹೋದಾರು ॥ ಕಲ್ಯಾಣವೇ ॥ ನೀರು ಬೋಜನ ಮಾಡಿದರು ಸ್ವಾಮಿಯವರು ಒಳ್ಳೊಳ್ಳೆ ಪಂಚೆ ಉಟ್ಟಾರು ॥ ಕಲ್ಯಾಣವೇ ॥ ಪಾಗ ಮುಂಡಾಸ ತಲೆ ಮೇಲಿಟ್ಟುಕೊಂಡು ನೂಲಿನ ಜನಿವಾರ

* ಕಲ್ಯಾಣವೇ ಸೀತೆ ಕಲ್ಯಾಣವೇ ಎಂಬ ಪಲ್ಲವಿಯನ್ನು ಪ್ರತಿ ಪಂಕ್ತಿಯೊಡನೆ ಹೇಳುವುದಾಗಿದೆ.

ಹೆಗಲಲ್ಲಿ ॥ ಕಲ್ಯಾಣವೇ ॥ ನೂಲಿನ ಜನಿವಾರ ಹೆಗಲ ಮೇಲಿಟ್ಟುಕೊಂಡು ನೀಟಾದ ನಾಮ ಧರಿಸ್ಯಾರು ॥ ಕಲ್ಯಾಣವೇ ॥ ನೀಟಾದ ನಾಮಗಳ ಧರಿಸ್ಯಾರು ಸ್ವಾಮಿಯವರು ಬೆಳ್ಳಿ ಗಿಂಡಿಯ ಹಿಡಿದಾರು ॥ ಕಲ್ಯಾಣವೇ ॥ ಬೆಳ್ಳಿ ಗಿಂಡಿಯು ಬೆಳಗ್ಯಾರು ಪಾತಾಳದ ಪನ್ನೀರ ಹಿಡಿದಾರು ॥ ಕಲ್ಯಾಣವೇ ॥ ಕಾಗೆ ಮುಟ್ಟದ ನೀರು ಜೋಗಿ ತುಳಿಯದ ನೀರು ಪಾತಾಳದಿಂದ ಪನ್ನೀರು ॥ ಕಲ್ಯಾಣವೇ ॥ ಪಾತಾಳದ ಪನ್ನೀರ ಹಿಡಿದಾರು ಸ್ವಾಮಿಯವರು ನಾಗಾ ಬೆತ್ತವ ಕೈಯಲ್ಲಿ ॥ ಕಲ್ಯಾಣವೇ ॥ ನಾಗ ಬೆತ್ತವ ಕೈಯಲ್ಲಿ ತಕ್ಕೊಂಡು ಹೂವಿನ ತೋಟಕ್ಕೆ ನಡೆದಾರು ॥ ಕಲ್ಯಾಣವೇ ॥ ತನ್ನರಮನೆಗೆ ನಡೆದಾರು ಸ್ವಾಮಿಯವರು ತಾಯವ್ವ ತಾಯಿವ್ವ ಯಿತ್ತ ಕೇಳಿ ॥ ॥ ಕಲ್ಯಾಣವೇ ॥ ತಾಯವ್ವ ತಾಯವ್ವ ಯಿತ್ತ ಕೇಳಿ ತಾಯವ್ವ ಕನ್ಯೆಗೆ ದಾರೆ ಒದಗೀತು ॥ ಕಲ್ಯಾಣವೇ ॥ ಕನ್ಯೆಗೆ ದಾರೆ ಒದಗೀತೆಂಬುದ ಕೇಳಿ ಕನ್ಯೆಯರ ಮನೆಗೆ ಹೋಗುತೇವಿ ॥ ಕಲ್ಯಾಣವೇ ॥ ನಂದಾದೀವಿಗೆಗೆ ಆರ‍್ರೈದು ಶರಣಾವ ಮಾಡಿ ತಾಯಿ ಪಾದಕೆ ಶರಣೆಂದು ॥ ಕಲ್ಯಾಣವೇ ॥ ತಾಯಿ ಪಾದಕೆ ಶರಣಾವ ಮಾಡಿ ಮುತ್ತಿನ ಮೆಟ್ಟುಕಲ್ಲು ಇಳಿದಾರು ॥ಕಲ್ಯಾಣವೇ॥ ಮುತ್ತಿನ ಮೆಟ್ಟುಕಲ್ಲು ಇಳಿದಾರು ಸ್ವಾಮಿಯವರು ಕನ್ಯೆ ಅರಮನೆಗೆ ಹೋದಾರು ಸ್ವಾಮಿಯವರು ಕನ್ಯೆಗೆ ದಾರೆ ಒದಗೀತು ॥ ॥ ಕಲ್ಯಾಣವೇ ॥ ನುಗ್ಗಿ ಮರದಡಿಯಲ್ಲಿ ನುಗ್ಗಿ ಬರುವ ಹಾರುವಯ್ಯ ಕನ್ಯೆಗೆ ದಾರೆ ಒದಗೀತು ॥ ಕಲ್ಯಾಣವೇ ॥ ಕನ್ಯೆಗೆ ದಾರೆ ಒದಗೀತೆಂಬಂದ ಕೇಳಿ ಕನ್ಯೆಯರಮನೆಗೆ ಹೋಗುತ್ತೇವೆ ॥ ಕಲ್ಯಾಣವೇ ॥ ಹಲಸೀನ ಮರದಡಿಯಲ್ಲಿ ಹತ್ತಿ ಬರುವ ಹಾರುವಯ್ಯ ಕನ್ಯೆಗೆ ದಾರೆ ಒದಗೀತು ॥ ಕಲ್ಯಾಣವೇ ॥ ಕನ್ಯೆಗೆ ದಾರೆ ಒದಗೀತೆಂಬುದ ಕೇಳಿ ಕನ್ಯೆಯರ ಮನೆಗೆ ಹೋಗುತ್ತೇವೆ ॥ ॥ ಕಲ್ಯಾಣವೇ ॥ ಬಾಳೆ ಮರದಡಿಯಲ್ಲಿ ಬಗ್ಗಿ ಬರುವ ಹಾರುವಯ್ಯ ಕನ್ಯೆಗೆ ದಾರೆ ಒದಗೀತು ॥ ಕಲ್ಯಾಣವೇ ॥ ಕನ್ಯೆಗೆ ಧಾರೆ ಒದಗೀತೆಂಬುದ ಕೇಳಿ ಕನ್ಯೆಯರ ಮನೆಗೆ ಹೋಗುತ್ತೇವೆ ॥ ಕಲ್ಯಾಣವೇ ॥ ಕಂದನ ಕೈ ಕೆಳಗೆ ಕನ್ಯೆಯ ಕೈಮೇಲೆ ಕನ್ಯೆಗೆ ದಾರೆ ಎರೆದಾರು ॥ ಕಲ್ಯಾಣವೇ ॥ ಕನ್ಯೆಯ ಕೈ ಕೆಳಗೆ ಕಂದನ ಕೈಮೇಲೆ ಕಂದಾಗೆ ಧಾರೆ ಎರೆದಾರು ॥ ಕಲ್ಯಾಣವೇ ॥ ಕಂದಾನ ಕೈ ಕೆಳಗೆ ಕನ್ಯೆಯ ಕೈ ಮೇಲೆ ಕನ್ಯೆ ದಾರೆಗೆ ಎರೆದಾರು ॥ ಕಲ್ಯಾಣವೇ ॥

---

## ಹೂ ಮುಡಿಸುವ ಹಾಡು

**ಸಂಗ್ರಹಿಸಿದವರು : ಶ್ರೀಮತಿ ಚಿಟ್ಟಿಮೂಡ ಅಮ್ಮವ್ವ, ಮಡಕೇರಿ**

ಕೆದಡು ತಾಯೆ ಕುಸುಮವನು ಶಾರದ ತಾಯೆ । ಕೊಡುತಾಯೆ ಕುಸುಮವನು ॥ ಪರಕೀನದವನಾದ ಮರುಗ ಮಲ್ಲಿಗೆ ಜಾಜಿ । ಸುರಗೆ ಸಂಪಿಗೆ ಸರವ ಕೊಡು ತಾಯೆ ಕುಸುಮವನು ॥ ಸಂತತಿ ಧನವಾದ ದಂದಿನ ವಾಸಿನಿ । ಸಂತರ ರೂಪಿನೊಳಿರುವ ಸಂಪಿಗೆ ಹೂವಿನ ಸರವ । ಕೊಡುತಾಯೆ ಕುಸುಮವನು ಶಾರದ ತಾಯೆ ಕೊಡು ತಾಯೆ ಕುಸುಮವನು ॥ ಎಲ್ಲರ ಮನಸ್ಸಿಗೆ ಉಲ್ಲಾಸ ತೋರುವ । ಬಲ್ಲವರು ಮೆಚ್ಚಿದ ಮಲ್ಲಿಗೆ ಹೂವಿನ ಸರವ ಕೊಡು ತಾಯೆ ಕುಸುಮವನು ॥ ಅರಳಿದ ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳನು । ಸುರರು ತಂದಿರುವರು । ವನಿತ ಜಾನಕಿಗೆ । ಕೊಡು ತಾಯೆ ಕುಸುಮವನು ॥

---

## ವಧುವನ್ನು ಶೃಂಗರಿಸುವಾಗ ಹೇಳುವ ಹಾಡು

ಸಂಗ್ರಹಿಸಿದವರು : **ಶ್ರೀಮತಿ ಚಿಟ್ಟಿಯಾಡ ಅಮ್ಮವ್ವ,** ಮಡಿಕೇರಿ

ಪಂಕಜಾಕ್ಷನ ಸತಿಗೆ ಕುಂಕುಮಾಕ್ಷತೆ ತಳಿದು ವಂಕಿ ಬಳೆಯನಿಟ್ಟು । ನಾರಿಯರೆಲ್ಲ ತಂಕ ಮಾಡದೆ ತಾ ಉಟ್ಟು । ಪರಿಪರಿಯವ ತರಿಕೆಯಿಂದಲಿ ಬರಬಿಟ್ಟು । ಕಂಕಣವ ನಿಟ್ಟು । ಶಂಕಿಸದೆ ಬಲು ಹರುಷದಿಂದಲಿ ಶಂಕರಾಥ್ಯರ ಸತಿಯರ ಸಹಿತಲಿ ಪಂಕರಾದಿ ಜನರು ಮತಿಸುತ । ಶಂಕೆ ಇಲ್ಲದೆ ಬಗೆ ಬಗೆಯ ಸುಮು ಬಿಂಕ ದಿಂದಲಿ ಮಂಡಿಸಿದರು ॥ ಸೋಭಾನೆ ॥ ಚಾರುರಮಣೀ ಯರ ವಿಚಾರಿಸಿ ಮನದೊಳು । ಸಾರವಾಗಿಹುದು ನೋಡಿ ದೋಷಗಳೆಲ್ಲ ಪಾರುವಾಗುವುದೆಂದಾಡಿ । ಗರ್ಭಿಣಿಯರು ಸೇರಿ ಶಂಕರನೆಂದೋಡಿ ಪರಿಚಯ ಮಾಡಿ ಮೂರು ಲೋಕದೊಳ್ ಮೆರೆವ ಕುಸುಮದೊಳ್ । ಬಾರಿ ಖ್ಯಾತಿ ಯನು ಪಡೆದು ಸುಲಭದೊಳಾಗಿರಿಗೂ ದೊರೆಯಲಸಾಧ್ಯದ ವಾರಿಜಾಕ್ಷನ ರಾಣಿಗೆ ಸುರ ಪಾರಿಜಾತದ್ಹೂವ ಮುಡಿಸಿ ದರು ॥ ಸೋಬಾನೆ ॥ ಗರುಡಗಮನರಾಣಿ ಪನ್ನಗವೇಣಿ ಕಿರುವಿಲ್ಲ ದೊರೆಗಳು ಇಟ್ಟರು ಮತ್ತೆ। ವರ ಸ್ವರ್ಣಾಭರಣ ಗಳು । ಉಟ್ಟರು ಪರಿಪರಿಯ ಶೀರೆಗಳು ಮಣಿಮಯದ ಸರಗಳು । ವಾರೆ ನೋಟದ ವಾರಿಜಾನನೆಯರು ಸೇರಿದ । ಭಾರಿ ಸಭೆಯೊಳು । ಸಾರ ಸಾಕ್ಷೆಯು ಸೇರಿ ಬರುತ ಗಂಭೀರಗಾನದೊಳ್ ಏರಿ ರಭಸದಿ ಮರುಗ ಮಲ್ಲಿಗೆ ಮುಡಿಸಿದರು ॥ ಸೋಬಾನೆ ॥ ಹಸ್ತ ಕಡಗವಿಟ್ಟು ಚಿತ್ತ ಜಮಾತೆಗೆ ಭೃತ್ಯ ನಾರಿಯರು ಕೂಡಿ ಆನಂದದೊಳು ತ್ತಮ ಸಭೆಯ ಮಾಡಿ ತೋಷದೊಳ್ಳೈದು । ಮುತ್ತೈದೆ ಕೈಗೂಡಿ । ಮಂಟಪದಿ ಪಾಡಿ ಅಸ್ತಮಯಕಾಲದೊಳರ ಳುವ ಚಿತ್ತಕೆ ಆನಂದವೀಯುವ ಪೃಥ್ವಿಯೊಳು ಬಲು ಉತ್ತಮವೆನ್ನುವ ಮತ್ತ ಕಾಶಿಸಿ ಸತ್ಯಭಾಮೆಗೆ ಕಸ್ತೂರಿ ಮಲ್ಲಿಗೆ ಮುಡಿಸಿದರು ॥ ಸೋಬಾನೆ ॥

---

## ಬಾಗಿಲು ತಡೆಯುವ ಹಾಡು

ಸಂಗ್ರಹಕಾರರು : **ಕುಮಾರಿ ಕೊಡೆಕಲ್ಲು ಎಸ್. ವೇದಾವತಿ**

ಅಂದು ಗೋಕುಲದಿಂದ ನಾರಾಯಣ ಶ್ರೀಕೃಷ್ಣ ಮಂಟಪದ ನಡುಗಾಗಿ ಬರುವ ಹಾಗೆ ॥ ಮಂಟಪದ ನಡುಗಾಗಿ ಹರುವ ಹಾಗೆ ನಣ್ಣಯ್ಯ ಮಡದಿ ಬಿಡುಗೊಂಡು ಬರುತ್ತಾರೆ, ಮಡದಿ ಬಿಡುಗೆಂಡು ಬಿರುವಾಗ ಅಣ್ಣಯ್ಯ, ತಂಗಿಯು ಕದಗಾಳ ತಡೆದ್ದಾಳು ॥ ತಂಗಿಯು ಕದಗಾಳ ತಡೆದಾಳು ತಂಗ್ಯಮ್ಮ । ನಿ । ತಡೆದ ಕದವಾ ಬಿಡು ಬೇಗ ನಾ ತಡೆದ ಕದವಾ ಬಿಡುವಲ್ಲೆ ಪ್ರತಿಯೊಂದು ಮಾತು ನುಡಿ ಬೇಗ ॥ ದೇಶ ಉಂಬಳಿ ಕೊಡುವೆ । ಶೇಷ ಉಪ್ಪರಿಕೆ ಕೊಡುವೆ ನೀ ಬಿಡು ಬೇಗ । ದೇಷ ಉಂಬಳಿ ನನಗುಂಟು ಶೇಷ ಉಪ್ಪರಿಕೆ ನನಗುಂಟು । ಎನ್ನುವ ನೀ ನನಗೆ ಕೊಡುವೆ ಎನ್ನಮ್ಮ ॥ ಪ್ರೀತಿಗೊಂದು ಮಾತು ನುಡಿ ಬೇಗ ॥

## ಪಾರ್ವತಿಯಮ್ಮನ ಹಸೆಗೆ ಕರೆಯುವುದು

ಸಂಗ್ರಹಿಸಿದವರು : **ಶ್ರೀಮತಿ ಚಿಟ್ಟಿಮಾಡ ಅಮ್ಮಣ್ಣ**

---

ಬ್ರಹ್ಮನ ರಾಣಿಯು ಒಮ್ಮೆಗೆ ಬಲಗೊಂಡು ನಿರ್ಮಲ ಚಿತ್ತದಿ ಚರಣ ಕಮಲಗಳಿಗೆ ಎರಗಿ ಪೇಳುವೆನು| ಚಿನ್ನದ ಹಾವುಗೆ * ಮೆಟ್ಟಿದ ಪಾದವು ಚೆನ್ನಾಗಿ ಮತಿಗಳ ಕರುಣಿಸು ಎಂದೆನುತ | ಚೆನ್ನಾಗಿ ಪಾದಕ್ಕೆರಗುವೆನು | ಎಡಬಲದಲಿ ಸೂರ್ಯಚಂದ್ರಗಳು ಹೊಳೆಯುವ ಜಡೆ ಬಂಗಾರಿನ ರಾಕೂಟೆಸೊಂಡೆಗಳು | ಅರಳು ಮಲ್ಲಿಗೆಯಂತೆ ಅರಸಗಳಾಡುತ ವರಗಳ ಕೊಡುವ ಶ್ರೀ ಪಾರ್ವತಿ ಯಮ್ಮನ ಬರಹೇಳಿ ಹಸೆಗೆ ಕರೆದಾರು | ಚಿನ್ನದ ಮಣೆ ಪಂಕಜಮುಖಿ ಅಳುವ ಶ್ರೀ ಪಾಪನತಿಯಮ್ಮನ ಬಿಂಕ ದಲಿ ಹಸೆಗೆ ಕರೆದಾರು | ಆನೆಯ ಸೊಂಡಿಲ ಹೋಲುವ ತೋಳಿಗೆ ಬಾಳೆಯ ಕುಪ್ಪಸ ಭುಜ ಕೀರ್ತಿ ಇಂತೊಪ್ಪುವ ತೋಳು ಬಳೆಯು ಏಳು ಪಾರ್ವತಿಯಮ್ಮ ನೀವು ನಿಸ್ತ್ರೀ ವರು ಹಸೆಗೆ ಕರೆವಾರು| ವೇಷದಿ ಬಾವಿಯ ಮೇಲೆ ವೇಷದಿ ಕುಳ್ಳಿರಲು ಹಸುಳೆ ಪಾರ್ವತಿದೇವಿ ಬಂದು ಭಜಿಸಿದವರಿಗೆ ವರಕೊಟ್ಟು ರಕ್ಷಿಸು ಪಾರ್ವತಿಯಮ್ಮ ನೀವು ನಿಸ್ತ್ರೀವರು ಹಸೆಗೆ ಕರೆವಾರು | ಕಾಶಿಯ ಪುರದಿಂದ ನೀವು ಬಂದು ನೀನೆಸಿದವರಿಗೆ ವರಗಳ ಕೊಟ್ಟು ಪುತ್ರ ಸಂತಾನವ ನೀವು ಕೊಟ್ಟು | ರಕ್ಷಿಸು ಪಾರ್ವತಿಯಮ್ಮ ನೀವು ವನಿತೆಯರು ಹಸೆಗೆ ಕರೆವಾರು ||

* ಹಾವುಗೆ=ಪಾದುಕೆ.

## ಹಸೆಗೆ ಕರೆಯುವ ಹಾಡು

ಸಂಗ್ರಹಕಾರರು : **ಶ್ರೀಮತಿ ಮಾಲೆಮಜ್ಲು ನೀಲಮ್ಮ**

ಹಸೆಗೆದ್ದು ಬಾ ನೀಲಮೇಘ ಶ್ಯಾಮ ಹಸೆಗೆದ್ದು ಬಾ | ಜನಕನಾ ಪುರಕೆ ಹೋಗಿ ಹರಧನುವ ಮುರಿದ ದೇವ ಜಾನಕ್ಕಿಯ ಕರವ ಪಿಡಿದು ಭಕ್ತರಸು ಪೊರೆದ ದೇವ | ಮಥುರೆಯಲ್ಲಿ ಪುಟ್ಟಿದನಂತೆ ಮಾವ ಕಂಸನ ಕೊಂದ ದೇವ ಮಾತಾಪಿತರ ಪೊರೆದ ದೇವ | ಹಸೆಗೆದ್ದು ಬಾ ಶೃಂಗಾರ ಶೀಲನೆ ಸಂಗೀತ ಲೋಲನೆ ರಂಗನಾಯಕಿ ಸಹಿತ ತುಂಗಪೀಠಕ್ಕೆ ಬಾ ಅಂಗನೆಯ ಕೂಡಿ ಮಂಗಳ ವನ್ನು ಪಾಡಿ ಮುತ್ತಿನಾಕ್ಷತೆಗಳ ನೆತ್ತಿಯೊಳಿಡುತಲಿ ರಂಗ ಬಾ ಎನ್ನುವರು "ಹಸೆಗೆದ್ದು ಬಾ"

# ತಲೆ ಬಾಚುವಾಗ ಹೇಳುವ ಹಾಡು

ಸಂಗ್ರಹಿಸಿದವರು : **ಶ್ರೀಮತಿ ಚೆಟ್ಟಿಮಾಡ ಅಮ್ಮಣ್ಣ**, ಮಡಕೇರಿ

ಬ್ರಹ್ಮನ ರಾಣಿಯು ನಿಮ್ಮ ಶ್ರೀ ಚಿನ್ನ ಚರಣಕ್ಕೆರಗುವೆನು । ಹಣ್ಣು ತೆಂಗಿನಕಾಯಿ ತರಗು ಚಕ್ಕುಲಿಯು ಚಿನ್ನ ಗಣಪತಿಗೆ ನೈವೇದ್ಯಕ್ಕೆ ಇಟ್ಟು । *ನಿಸ್ತಲವ್ಮಾಯಿಗೆ ತರುಬಿಕ್ಕುವ । ಪದವನೆ ಮಂಡಿಸುವೆ ನಾನು ಮುದದಿಂದ । ಹನ್ನೆರಡು ಜನಗಳ ಮುತ್ತಿನ ಚಪ್ಪರ ಚಿನ್ನದ ಕಂಬವು ಮುತ್ತು ರತ್ನದ ನವರತ್ನ ಬೀದಿಗೆಯು । ಚಿನ್ನ ಮಾಣಿಕದ । ತಲೆ ಜಂತೆಗಳ ತಂದಿರಿಸಿ ನಿಸ್ತಲಮ್ಮಾಯಿಗೆ ಕುಳ್ಳಿರುವ ಜನರಿಗೆ ವಿಸ್ತಾರವ ನೋಡಿ ಜನರೆಲ್ಲಾ । ಹತ್ತೆಂಟು ಜನಗಳಿಗೆ ಮುತ್ತಿನ ಕಂಬವು ಚಿನ್ನದ ಚಪ್ಪರ । ಚಿನ್ನ ಮಾಣಿಕದ ತಲೆ ಜಂತೆಗಳ ತಂದಿರಿಸಿ । ‡ಕನ್ನಮ್ಮಾಯಿಗೆ ಕುಳ್ಳಿರುವ ಜಗಲಿಯು ವಿಸ್ತಾರವ ನೋಡಿ ಜನರೆಲ್ಲ । ಮುತ್ತಿನ ಚಪ್ಪರದೊಳಗೆ ಸುತ್ತೇಳು ದೀವಿಗೆ ಬೆಳಗಿರಲು । ಓರಣದಿಂದಲಿ ಬಂದು ಹಸೆಗಳ ಬರೆದು । ಕರುಣೆ ಕಲಸಿದ ಹಸ ಮಣೆಗಳ ತಂದಿರಿಸಿ । ಹಸಿರು ಪಟ್ಟೆಗಳ ಉಪಚರಿಸಿ ಹಾಸಿ । ಹಸಿರು ಮುತ್ತೈದೆಯರು ಕುಳ್ಳಿರಲು ಚಿನ್ನದುಪ್ಪರಿಕೆಯೊಳಗೆ ಸುತ್ತೇಳು ದೀವಿಗೆ ಬೆಳಗಿರಲು । ಓರಣದಿಂದ ಬಂದು ಹಸೆಗಳ ಬರೆದು ಕರುಣೆ ಕಲಸಿದ ಹಸೆ ಮಣೆಗಳ ತಂದಿರಿಸಿ ಜೋಡು ಪಟ್ಟೆಗಳ ಉಪಚರಿಸಿ ಹಾಸಿ । ಹಸಿರು ಮುತ್ತೈದೆಯುರು ಕುಳ್ಳಿರಲು । ಬರಹೇಳಿ ಹೊರಕ್ಕೆ ಒಳಗಿರುವವರ ನಾರಿ ಸತಿ ಚೆಲುವೆ ಚೆಲುವಿಕೆಯರು । ತುರುಬನಿಕ್ಕುವರ ಬರಾಹೇಳಿ ॥

---

* ನಿಸ್ತಲ (ಚಂಚಲೆಯಾದ) + ಅಮ್ಮಾಯಿಗೆ ದೇವಿಗೆ) = ಲಕ್ಷ್ಮಿಗೆ.

† ಕನ್ನ (ಸುಂದರವಾಥ) × ಅಮ್ಮಾಯಿಗೆ (ದೇವಿಗೆ).

The test of courage is not to die but to live:

—V. Alifierl.

If thou art a master, be sometime blind, if a servent, sometimes deaf:

—Fuller.

Always look for the sunlight the Lord sends into your days.

—Hope Campbell

—Collected by
Sri D. S. Subbas
Ist year B.Com, Bangalore

# ಬಾಗಿಲು ತಡೆಯುವ ಹಾಡು

ಸಂಗ್ರಹಕಾರರು : ಶ್ರೀಮತಿ ಚಿಟ್ಟಿಮಾಡ ಅಮ್ಮವ್ವ

ರಂಗನ ಪರಿಣಯ ಐದನೆ ದಿವಸದಿ ಮಂಗಳೋಕುಳಿಯನಾಡಿ ಭೂಸುರರುಂತ ರಂಗದಿಪ್ಪವ ನೀಡಿ। ವಿನೋದದೊಳಂಗನೆಯೊಡಗೂಡಿ ಬರುತಿರಲು। ನೋಡಿ ಅಂಗಜನ ಮದದಾನೆಯಂದದಿ। ಅಂಗನೆಯವರ ಸಮ್ಮೇಳದಿಂದಲಿ ಅಂಗನಾಮಣಿ ರುಕ್ಮಿ * ರೂಪಿಣಿ ರಂಗನಾಥನ ತಡೆದು ದ್ವಾರದಿ ತಂಗಿ ಸೌಭದ್ರೆ ನುಡಿದಾಳು ॥ ಸೋಬಾನೆ ॥ ೧ ॥ ವಲ್ಲಭೆಯನು ಕರಕೊಂಡು ವಿನೋದದಿ ಎಲ್ಲಿಗೆ ಗಮನವಿದು ಅಣ್ಣಯ್ಯ ಕೇಳ್ ನಿಲ್ಲೊಂದು ಮಾತುಂಟನ್ನೂ ಈ ಲೋಕಕ್ಕೊಡೆಯ ಲಕ್ಷ್ಮಿವಲ್ಲಭನೆ। ನೀನೊಲಿದು ಕಡುಕೃಪೆಯಲ್ಲಿ ಎನಗಿಷ್ಟವನು ಈ ಕ್ಷಣದಲಿ ಪಾಲಿಪುವನಿಕ ಕದಬಿಡೆ ದಯಮಾಡಣ್ಣಯ್ಯಾ ಶ್ರೀ ಕೃಷ್ಣಯ್ಯಾ ॥ ೨ ॥ ಆ ಕಮಲಾಕ್ಷಿಯರುಗಳ ಸಮ್ಮೇಳದಿರಾಕೆಂದು † ಮುಖಿಯೇ ನೀನು। ದ್ವಾರದೊಳೆನ್ನ ಯಾಕಪ್ಪ ತಡೆದೆ ನೀ ಬೇಡಿಕೊಬೇಕಾದ ಬಯಕೆಯನು ನೀ ಪೇಳಿದುದನು ಲೋಕವೀರೇಳರೊಳಗೆ ಇದ್ದರು ನಾ ತರಿಸಿ ಕೊಡಿಸುವೆನು ಈ ಕ್ಷಣ। ಕೋಕಿಲಸ್ವರೆ ಕಂಬುಕಂಧರೆ ‡ ಪಾಕಶಾಸನ † ಸುತನ ಪ್ರಿಯಳೇ ॥ ಕದಬಿಡೆ ತಂಗಿ ಮೋಹನಾಂಗಿ ॥ ೩ ॥ ಲೋಕನಾಯಕನೇ ನಿನ್ನುದರದಿ ಜನಿಸಿದ ಲೋಕಯಿರಾರೇಳರಲಿ। ನೀನರಿಯದ ಲೋಕ ಪ್ರಪಂಚದಲಿ ಯಾವುದು ಸಾಕು ಸಾಕೆನ್ನೊಳೀ ಮಾತ ತಿಳಿದವನು ನೀನು। ಲೋಕಬಾಧಕರಾದ ದುರುಳ ರಕ್ಕಸರನು ಸಂಹರಿಸಿ ಲಗ್ನದಿ ಆಕರಿಸಿ ಬರುವಾಗುವಾ ತಡೆದ ವಿವೇಕ ಮನದೊಳಗರಿತು ಈ ಕ್ಷಣ ದಯಮಾಡಣ್ಣಯ್ಯ ಶ್ರೀ ಕೃಷ್ಣಯ್ಯಾ ॥ ೪ ॥ ಪನ್ನಗ ವೇಣಿ ಕಾಲಂದುಗೆ ಕಿರುಗೆಜ್ಜೆ ಹೊನ್ನ ಕಾಲುಂಗುರವನು। ಸಣ್ಣ ನಡುವಿನ ಹೊನ್ನಿನೊಡ್ಯಾಣವನು ಜೋಡಾಗಿಹ ರನ್ನದ ನೇವಳವನು। ಸರಪಣಿಯನು ಚಿನ್ನದುಂಗುರ ದೋರೆ ಚಳಕಿ ಸುವರ್ಣ ಕಡಗವು ವಂಕಿ ಹಿಂಬಳೆಯನ್ನು ನಾನಿನಗೀಗ ಕೊಡುವೆನು। ಸುಗಣೆ ಕೇಳಲಿ ತಲೆಯದೀಕ್ಷಣ ಕದ ಬಿಡೆ ತಂಗಿ ಮೋಹನಾಂಗಿ ॥ ೫ ॥ ಪನ್ನಗಶಯನ ಕಾಲಂದುಗೆ ಕಿರುಗೆಜ್ಜೆ ಹೊನ್ನ ಕಾಲುಂಗರವನು। ಸಣ್ಣ ನಡುವಿನ ಹೊನ್ನಿನೊಡ್ಯಾಣವನು! ಜೋಡಾಗಿಹ ರನ್ನದ ನೇವಳವನು। ಸರಪಣಿಯನು ಚಿನ್ನದುಂಗರದೋರ ಚಳಿಕೆ ಸುವರ್ಣ ಕಡಗವು ವಂಕಿ ಹಿಂಬಳೆಯನು ಎನಗೆನ್ನವ್ವ ಕೊಡುವಳು ಹರುಷದಿಂದಲಿ ಮನ್ಮನೋರಥ ದಯಮಾಡಣ್ಣಯ್ಯ ಶ್ರೀ ಕೃಷ್ಣಯ್ಯಾ ॥ ೬ ॥ ಚಿತ್ತದ ಅರಗಿಣಿ ನೀ ಕೇಳು ಕತ್ಮಾಣೆ ಮುತ್ತಿನ ಸರಗಳನೂ। ಶೋಭಿಪನವರತ್ನದ ಮಾಲೆಯನು ಮೇಲೊಪ್ಪುವ ಕೆತ್ತಿಗೆಯ ಪದಕವನು। ಏಕಾವಳಿಯನು॥ ಪುತ್ಥಳೀ ಸರಮಾಲೆ ಸರಪಣಿ ಕೆತ್ತಿಗೆಯ ಮೂಗುತಿಯ ಸರಸಿಜನೇತ್ರೆ ನಾ। ನಿನಗೀಕ ಕೊಡುವೆನು ತರುಣಿ ರನ್ನಳೆ ಕೀರಭಾಷಿಣಿ ॥ ಕರಬಿಡೆ ತಂಗಿ ಮೋಹನಾಂಗಿ ॥ ೭ ॥ ಚಿತ್ತಜನಕನೇ ನೀ ಕೇಳು ಕತ್ಮಾಣೆ ಮುತ್ತಿನ ಸರಗಳನು। ಶೋಭಿಪ ನವರತ್ನದ ಮಾಲೆ

† ರಾಕಾ (ಹುಣ್ಣಿಮೆ) + ಇಂದು (ಚಂದ್ರ)
= ಹುಣ್ಣಿಮೆಯ ಚಂದ್ರ

† ಪಾಕಶಾಸನ (ಇಂದ್ರನ) + ಸುತನ (ಮಗನ)
= ಅರ್ಜುನನ

ಯನ್ನು । ಮೇಲೊಪ್ಪುವ ಕೆತ್ತಿಗೆ ಪದಕವ ಏಕಾವಳಿ ಯನು ಪುತ್ಥಳೀ ಸರವಮಾಲೆ ಸರಪಣಿ ಕೆತ್ತಿಗೆಯು ಮೂಗುತಿಯು ಸಸಿನೇತ್ರಯನಗೆನ್ನಪ್ಪ ಕೊಡುವರು । ಹರುಷದಿಂದಲಿ ಮನ್ಮನೋರಥ ದಯಮಾಡಣ್ಣಯ್ಯಾ ಶ್ರೀ ಕೃಷ್ಣಯ್ಯ ॥ ೮ ॥ ಸರಸಿ ಜಾಂಬಕಿ ಕೇಳು ಕರು ಎಮ್ಮೆ ಗೋವ್ಗಳು ತುರುಗಾವಲರುಗಳು । ನಾವಾಳುವ ಸರಿಯರ್ದ ಧರಣಿಯೊಳು ನೂತನವಾದವರ ಪೀತವಸನಂಗಳು ಹಯ ವಾರಣಂಗಳು ॥ ಮರೆವ ದಾಸಿಯರುಗಳ ಗಡಣದಿ ಪರಮ ದ್ರವ್ಯಗಳೆಂಟು ಕಿಭಿಕೊಪ್ಪುರಿಗೆ ಸಾವಿರವೀಗ ಕೊಡುವೆನು । ತರುಣಿರನ್ನಳೆ ಕೀರಭಾಷಿಣಿ ಕದಬಿಡೆ ॥ ತಂಗೀ ಮೋಹನಾಂಗೀ ॥ ೯ ॥ ಸರಸಿ ಜಾಂಬಕ ಕೇಳುಕರು ಎಮ್ಮೆ ಗೋವ್ಗಳು ತುರುಗಾವಲರುಗಳೂ । ನೀನಾಳುವ ಸರಿಯರ್ದ ಧರೆಯೊಳು ನೂತನವಾದ ವರ ಪೀತ ಪತನಂಗಳು । ಹಯವಾರಣಂ * ಗಳಂ ಮೆರೆವ ದಾಸಿಯರುಗಳ ಗಡಣದಿ ಪರದ್ರವ್ಯಗಳೆಂಟು ಕಿವಿ ಕೊಪ್ಪುರಿಗೆ ಸಹ ಹಿರಿಯಣ್ಣ ಕೊಡುವನು । ಹರುಷದಿಂದಲಿ ಮನ್ಮನೋರಥ ದಯಮಾಡಣ್ಣಯ್ಯ ಶ್ರೀ ಕೃಷ್ಣಯ್ಯಾ ॥ ೧೦ ॥ ಏನ ಹೇಳಿದರು ಸಮ್ಮತವಿಲ್ಲಾ ನಿನಗೆ ಮತ್ತೇನುಂಟು ಮನಸಿನೊಳು ನಿನ್ನಯ ಗುಟ್ಟ ನ್ನಾಣೆ ಹೇಳಲೆಂನ್ನೊಳು । ನಿನಗೆ ಅನುಮಾನವಿಲ್ಲದೆ ಎನ್ನೊಳು ಈ ಸಭೆಯೊಳು ಸಾನುರಾಗದಿ ನೀನು ಬೇಡಿಕೊ ಮಾನಿನೀಯರ ಕುಲ ಶಿರೋಮಣಿ । ಜಾಣೆ ಮನ್ಮಥನಾಣೆ ಸರಸ ಪ್ರವೀಣೆ ಗಣ ನಿಧಾನೆ ಬೇಗದಿ ಕದ ಬಿಡೆ ತಂಗೀ ಮೋಹನಾಂಗೀ ॥ ೧೧ ॥ ಕಡಲಶಯನ ದೆನ್ನ ಮಗಳೆನ್ನ ಮಗನಿಗೆ ಕೊಡಬೇಕೆಂದೆನುತ ನಾನು ಈ ಸಮಯದಿ ತಡೆದಿಹೆ ಬಾಗಿಲನು । ವೀಳ್ಯವನಿತ್ತು ಕೊಡಿಸೆನಗಭಯವನು . ನಿನ್ನಾತ್ಮಜೆಯನು ಕೊಡುವೆನ್ನಯ ಕುವರಗೆನುತಲಿ ಪೃಥದಿ ಭಾಷೆಯ ಸಿತ್ತರೀಕ್ಷಣ ಬಿಡುವೆ ನಾ ತಡೆದಿಹ ಕವಾಟವ ತಡೆಯ ದೀಕ್ಷಣ ದಾನವಾಂತಕ ದಯಮಾಡಣ್ಣಯ್ಯಾ ಶ್ರೀ ಕೃಷ್ಣಯ್ಯಾ ॥ ೧೨ ॥ ನಂದನಂದನ ಚೆಲ್ವ ಕುಂದನ ‡ ವದನೆಪೂರ್ಣ ಚಂದಿರ ಮುಖಿಯೆ ಕೇಳು । ನಾ ಬಯಸುವೆ ಕಂದರ್ಪ ಮೊದಲು ಜೊಚ್ಚಲು ಮಗಳೆಂದು ನೀ ವರದೆನ್ನೆಳು । ಈ ಸಭೆಯೊಳು ಹಿಂದೆ ಮಾಡಿದ ಸುಕೃತವೆಂತಿಹುದೆಂದು ಕಂಡವರಾರು ಲೋಕದಿ । ಕಂದ ಮೊದಲೆನಗಾದರಕೋ । ನೆಂದು ವರ್ಣಿಸು ಕಂಬುಕಂಠಿಣಿ ॥ ಕದಬಿಡೆ ತಂಗೀ ಮೋಹನಾಂಗೀ ॥ ೧೩ ॥ ಗಂಡುಮಗ ನುಡಿಸಿದರೆ ಮಾಂಡಲಿಕರ ಗಂಡಾಗಿ ತೇಜದಲಿ ಆಳಿರಲಿ ಭೂಮಂಡಲ ಸೌಖ್ಯದಲಿ ಕೀರ್ತಿಯನೊಡಗೊಂಡು ವಿನೋದದಲಿ ಹೆಣ್ಣಾದರೆನ್ನ ಚಂಡ ವಿಕ್ರಮಕುವರಗೆನುತಲಿ ಪುಂಡರೀಕ * ದಳನಯನ ಜದುದ್ದಂಡ ಮೂರುತಿ । ಈಶ ಸಖಮಾರ್ತಾಂಡ ಶತಕೋಟಿ ಪ್ರಕಾಶನೇ ದಯ ಮಾಡಣ್ಣಯ್ಯಾ ಶ್ರೀ ಕೃಷ್ಣಯ್ಯಾ ॥ ೧೪ ॥ ಮತ್ತೊಂದು ಮಾತುಂಟು ನೀ ಕೇಳು ಸೌಭದ್ರೆ ಅತ್ತಿಗೆಯೊಡನೆ ನೀನು । ನಾಳೆಗೆ ಬದಲುತ್ತರ ಬರುವುದನು ಈ ಹೊತ್ತೆ ನಿವೃತ್ತಿಯ ಮಾಡದನು ಜನರಿದಿರೊಳಿನ್ನು । ಮತ್ತೆ ನೀ ನುಡಿದಂತೆ ಭಾಷೆಗೆ ವೀಳ್ಯವನಿತ್ತು ಕೊಡಿಸುವೆ ಮತ್ತ ಕಾಶಿನಿ ಮಂದಗಾಮಿನಿ । ವೃತ್ತ ಕುಂಜೆ ‡ ನೀನೀಗ ದಯವಿಡೆ ಕದಬಿಡೆ ತಂಗೀ ಮೋಹನಾಂಗೀ ॥ ೧೫ ॥ ಜಾಣೆಯರರಸಿ ಎನ್ನಣ್ಣನ ಪಟ್ಟದರಾಣಿ ಕಲಾಪಿ‡ ವೇಣಿ। ಸುಲಲಿತ ಗುಣಶ್ರೇಣಿ ಪರಮ ಕಲ್ಯಾಣಿ । ಸ್ತ್ರೀಯರೊಳು ಕಣ್ಮಣಿ ಕಲಕೀರವಾಣಿ । ಶತಪತ್ರ ಪಾಣಿ । ಮೀನ ಕೇತನ * ಪಿತಗೆ ಕಳುಹಿಸಿ ತಾನು ಲೇಖನ ಬರೆದು ಅಣ್ಣನ ಮಾನಭಂಗಿಸಿ ಓಡಿ ಬಂದ ಪ್ರವೀಣೆ ಗುಣ ನಿಧಾನೆ ಬೇಗದಿ ಬಿಡೆ ನಿನ್ನ ಮಗಳ ಕೊಡಬೇಕು ೧೬ ॥ ಸಾರಸೋಪಮಪಾಣೆ ಕಲಕೀರ ಭಾಷಿಣಿ ನಾರಾಹಿ ಸಮಗಂಭೀರೆ ಮಾತಿನೊಳತಿ ಶೂರೆ ನಿನಗೆ ಭಾಪುರೆ । ಎನಗಿಪ್ಪುಪಚಾರ ಮಾಡಿದಿಯೆ ನೀರೆ ಸರಸ ವೈಯಾರೆ । ಚಾರುತನದಿ ಸನ್ಯಾಸಿ ವೇಷದಿ ಚೋರತನದಲಿ ಸೇರಿದವನೊಳು ಧೀರ ಹಿರಿಯಣ್ಣನಿಗೆ ವಂಚಿಸಿ ಜಾರಿಬಂದ ಮಹಾನುಭಾವಳೆ ಕರೆತಾರೆ ನಿನ್ನ ಕುವರನ್ನ ॥ ೧೭ ॥ ನೂತನಗಾರ್ತಿ ಕೇಳ್ ಮಾತಿಗೆ ಮಾತುಂಟು ಯಾತಕೀ

‡ ದೋರ (ಮುತ್ತು) = ಚಳಿಕೆ (ಹೂವಿನ ಒಳೆ

* ರಾಶ್ಮ — ಹೊಳೆಯುವ * ಕಂಬು (ಶಂಕ) — ಕಂದರೆ (ಕುತ್ತಿಗೆಯವಳು) * ಹಯ (ಕುದುರೆ) — ವಾರಣ (ಆನೆ)

*ಕುಂದನ = ತಾವರೆಯು. * ಪುಂಡರೀಕ = ಬೆಳ್ದಾವರೆ * ಕುಂಜೆ = ದವಡೆಯುವಳ.

† ಕಲಾಪಿ = ಹೆಣ್ಣು ನವಿಲು. ಮೀನ ಕೇತನ (ಮನ್ಮಥನ) ... ಪಿತ (ತಂದೆ) = ಕೃಷ್ಣ.

ಮಾತುಗಳು ತೋರಿಕೆ ಜಗನ್ಮಾತೆ ನಿನ್ನಯ ಮಗಳು । ನಲಿನಲಿದೆನ್ನಸು ಜಾತನು ಎದುರಿನೊಳು ಬರುವ ನೀ ಕೇಳು ಮಾತು ನಿಶ್ಚಯವೆಂದು ಅತಿ ಸಂಪ್ರೀತಿಯಲಿ ವೀಳ್ಯವನು ಭೀಷ್ಮಕ । ಜಾತೆ ಮೂಜಗ ಮಾತೆ ಸರಸ ವಿಖ್ಯಾತ ಅಣ್ಣನ ಪ್ರೀತೆ ರುಕ್ಮಿಣಿ ಬಿಡೆ ನಿನ್ನ ಮಗಳ ಕೊಡಬೇಕು ॥೧೮॥ ಮಂದಹಾಸದೊಳರವಿಂದ ಲೋಚನೆ ಯೆರಿಗೆಂದು ಮಾತಿಗೆ ಮಾತನ್ನು ಆಡುತ ನಗುತೆಂದು ಚಿನ್ಮಯರೂಪನು । ಒಡಂಬಡಿಸ್ಯಾನಂದದೊಳರಸಿಯನು ಸೌಭದ್ರೆಯನು ಎಂದು ವಿನಯೋಕ್ತಿಯನು ಪೇಳುತ । ಇಂದು ಮುಖಿಯೆ ಕೇಳು ನಿನ್ನಯ ಕಂದಗೆನ್ನಯ ಕುವರಿ ಕೊಡುವೆನು ಎಂದು ವೀಳ್ಯವನೀಯಲಾಕ್ಷಣ ಬಾಲೆ ಸಾರಿದಳು ಸಭೆಯೊಳು ॥ ೧೯ ॥ ಪೌರೋಹಿತರಿಗೆ ಸಾಕ್ಷಿಯ ನಿಟ್ಟು ಮುತ್ತಿನ ದ್ವಾರ ಬಿಟ್ಟಳು ನಗುತ । ಹರುಷದಿ ತನ್ನ ನಾರಿ ರುಕ್ಮಿಣಿ ಸಹಿತ ಮನಸಿಜನ ಪಿತ * ಭೂರಮಣ ಭೀಷ್ಮಕನವರ ಸುಕುಮಾರಿ ಸಹ ಒಪ್ಪಿರಲು ಹಸೆಯಲಿ । ಚಾರುಕರುಣಾಕರನ ಮಕುಟದಿ ಭೂರಿ ಸಂತೈಸಿದರು ಗಗನದಿ ನಾರಿಯರು ಸೇಸೆ ತಳಿದರು ಸೋಬಾನೆ ॥ ೨೦ ॥ ಮಂಗಳಂ ಯದುಕುಲತಿಲಕ ಗೋಪಾಲಗೆ ಮಂಗಳಂ ಮಾಧವಗೆ ಮತ್ಸ್ಯಗೆ ಜಯಮಂಗಳಂ ಕೂರ್ಮನಿಗೆ ವರಾಹಗೆ ಶುಭಮಂಗಳಂ ನರಸಿಂಹಗೆ । ವಾಮನಸತಾರೆಗೆ ಮಂಗಳಂ । ಶ್ರೀ ಪರಶುರಾಮಗೆ ಮಂಗಳಂ ಶ್ರೀರಾಮ ಕೃಷ್ಣಗೆ ಮಂಗಳಂ । ಶ್ರೀ ಬೌದ್ಧಕಲ್ಕ್ಯಗೆ ಮಂಗಳಂ । ಶ್ರೀ ಕೃಷ್ಣರಾಯಗೆ ಮಂಗಳಾರತಿಯ ಬೆಳಾಗಿರೆ ॥ ಸೋಬಾನೆ ॥ ೨೧ ॥

† ಮನಸಿಜ [ಮನ್ಮಥ] .... ಪಿತ [ತಂದೆ] = ಕೃಷ್ಣ.



## ಹೆಣ್ಣೊಳಿಸಿಕೊಡುವಾಗ ಹೇಳುವ ಹಾಡು

ಸಂಗ್ರಹಿಸಿದರು : **ಶ್ರೀಮತಿ ಪೂಜಾರಿರ ಮಾಚವ್ವ**

ಪಟ್ಟೆ ಅಂಚಿನ ಮುದ್ದು ಮುತ್ತಿನ ಉಂಗುರವ ನಿಟ್ಟು । ಮುತ್ತಿನ ಹರಿವಾಣ ಬಲಗೈಲಿ । ಮುತ್ತಿನ ಹರಿವಾಣ ಬಲಗೈಲಿಡಕ್ಕೊಂಡು । ಮಗಳ ನಿಮ್ಮೊಶ ಕೊಡುತ್ತೇವೆ॥ ಸಾಲು ಅಂಚಿನ ಮುದ್ದು ನೀಲ ದುಂಗುರವ ನಿಟ್ಟು । ನೀಲ ದರಿವಾಣ ಬಲಗೈಲಿ । ನೀಲವಾಣ ಬಲಗೈಡಕ್ಕೊಂಡು । ಮಗಳ ನಿಮ್ಮೊಶ ಕೊಡುತ್ತೇವೆ ॥ ಆರು ವರುಷ ಸಾಗಲಿಲ್ಲ, ಬಾಯಿ ಹಲ್ಲು ತಗೆಯಲಿಲ್ಲ । ಆರೆಂಬ ಲೆಕ್ಕೆ ಅರಿಯಾಳು । ಆರೆಂಬ ಲೆಕ್ಕೆ ಅರಿಯಾಳು ನಮ್ಮಗಳು ಮಗಳ ನಿಮ್ಮೊಶ ಕೊಡುತ್ತೇವೆ॥ ಏಳು ವರುಷ ಸಾಗಲಿಲ್ಲ, ಬಾಯಿ ಹಲ್ಲು ತೆಗೆಯಲಿಲ್ಲ । ಏಳೆಂಬ ಲೆಕ್ಕೆ ಅರಿಯಾಳು । ಏಳೆಂಬ ಲೆಕ್ಕೆ ಅರಿಯಳು ನಮ್ಮಗಳು । ಗಿಂಡಿ ಬೆಳಗಲಿಕ್ಕೆ ಅರಿಯಾಳು ॥ ಅಂಗಳ ಗುಡಿಸೋಳಲ್ಲ, ತಂಗಳ ಊಟ ಮಾಡೋಳಲ್ಲ । ಅಂಗಳದಲ್ಲಿ ಆಡುವ । ಅಂಗಳದಲ್ಲಿ ಆಟ ಆಡಿ ಬರುವ ಶಿಸು ಮಗಳ । ನಿಮ್ಮೊಶ ಕೊಡುತ್ತೇವೆ॥ ತಾಯಿಗು ತಂದೆಗು ಮೋಹದ ಕಿರಿಮಗಳು । ಸಲೆ ತುಪ್ಪ ಬಿಟ್ಟು ಸಲುಗ್ಯಾರು । ಸಲೆತುಪ್ಪ ಬಿಟ್ಟು ಸಲುಗೀದ । ನಮ್ಮಗಳು ನಿಮ್ಮೊಶ ಕೊಡುತ್ತೇವೆ॥ ಅಣ್ಣಗು ತಮ್ಮಗೂ ಮೋಹದ ಕಿರುತಂಗಿ । ಸಲೆಎಣ್ಣೆ ಬಿಟ್ಟು ಸಲುಗ್ಯಾರು । ಸಲೆಎಣ್ಣೆ ಬಿಟ್ಟು ಸಲುಗೀದ । ತಂಗಿಯ ನಿಮ್ಮೊಶ ಕೊಡುತ್ತೇವೆ ॥ ಹಣ್ಣಡಿಕೆ ಎಲೆ ಮೆದ್ದು ಕಣ್ಣಿಗೆ ಕನವಿದ್ರ್ಯ । ತಂದೆ ತೊಡೆಮೇಲೆ ಒರಗ್ಯಾಳು ನಮ್ಮಗಳು । ಮಗಳ ನಿಮ್ಮೊಶ ಕೊಡುತ್ತೇವೆ॥ ಕಾಯಡಿಕೆ ಎಲೆ ಮೆದ್ದು ಕಣ್ಣಿಗೆ ಕನವಿದ್ರ್ಯ ತೊಡೆಮೇಲೆ ಒರಗ್ಯಾಳು । ತಾಯ ತೊಡೆಯ ಮೇಲೆ ಒರಗೀದ ಶಿಶು ಮಗಳ । ಮಗಳ ನಿಮ್ಮೊಶ ಕೊಡುತ್ತೇವೆ ॥ ಮುತ್ತಿನ ತಲೆಕಂಬ ಈಗೆರಡು ಇದ್ದಾವು । ಮುತ್ತಿಸಂತ ಕಂಬ ಜೇಡಾನಾದೊ॥ ಕನ್ನೆ ಹುಟ್ಟಿದಮೇಲೆ

ಕನ್ನಡಿ ಯಾಕವ್ವ। ಕನ್ನೆ ತಂಗ್ಯಮ್ಮ ಒಳಗಿಂದ। ಕನ್ನೆ ತಂಗ್ಯಮ್ಮ ಒಳಗಿಂದ ಬರುವಾಗ। ಕನ್ನಡಿಯಂತೆ ಹೊಳೆದಾಳು॥ ಬಾಲೆ ಹುಟ್ಟಿದ ಮನೂ ಬೀಸಣಿಗೆ ಯಾಕವ್ವ। ಬಾಲೆ ತಂಗ್ಯಮ್ಮ ಹೊರಗಿಂದ ಬರುವಾಗ। ಬೀಸಣಿಗೆ ಸಾಕು ಮನೆಗೆಲ್ಲಾ॥ ಆಡುವಾಟವ ಬಿಟ್ಟು ಓದುವ ಪುಸ್ತಕ ಬಿಟ್ಟು। ಅಣ್ಣಾತಮ್ಮಂದಿರ ಮನೆ ಬಿಟ್ಟು। ಈ ಮಗಳ। ಮಗಳ ನಿಮ್ಮೊಶ ಕೊಡುತ್ತೇವೆ॥ ಒಂದು ಮೆಟ್ಟು ಇಳಿದಾಳು ಹಿಂದಿರುಗಿ ನೋಡಿಯಾಳು। ಅಪ್ಪಯ್ಯ ಬನ್ನೀಂತ ಕರೆದಾಳು। ಅಪ್ಪಯ್ಯ ಬನ್ನೀಂತ ಕರೆದು ಮಾತಾಡಲು ತುಂಬಿದ ಕಣ್ಣ ಜಲ ನೀರು। ತುಂಬಿದ ಕಣ್ಣ ಜಲ ನೀರು ಹರಿದಾವು। ಪಟ್ಟೆ ಸೆರಗೆಲ್ಲಾ ನೆನೆದಾವು ಎರಡು ಮೆಟ್ಟು ಇಳಿದಾಳು ಹಿಂದೆ ತಿರುಗಿ ನೋಡಿಯಾಳು। ತಾಯವ್ವ ಬನ್ನೀಂತ ಕರೆದಾಳು। ತಾಯವ್ವ ಬನ್ನೀಂತ ಕರೆದು ಮಾತಾಡಲು ತುಂಬಿದ ಕಣ್ಣ ಜಲ ನೀರು। ತುಂಬಿದ ಕಣ್ಣ ಜಲ ನೀರು ಹರಿದಾವು। ಸಾಲು ಸೆರಗೆಲ್ಲಾ ನೆನೆದಾವು॥ ಮೂರು ಮೆಟ್ಟು ಇಳಿದಾಳು ಹಿಂದೆ ತಿರುಗಿ ನೋಡಿಯಾಳು। ಅಣ್ಣಯ್ಯ ಬನ್ನೀಂತ ಕರೆದಾಳು। ಅಣ್ಣಯ್ಯ ಬನ್ನೀಂತ ಕರೆದು ಮಾತಾಡಲು ತುಂಬಿದ ಕಣ್ಣ ಜಲ ನೀರು। ತುಂಬಿದ ಕಣ್ಣ ಜಲ ನೀರು ಹರಿದಾವು। ಸೀರೆ ಸೆರಗೆಲ್ಲಾ ಕರೆದಾವು॥ ಮೂಡಣ ಮಂಟಪದಲಿ ನಿಂತಾಳು ಮದು ಮಗಳು। ಕೂಡ್ಯಾಡಿ ಆಡುವ ಸಂಸಾರ। ಕೂಡ್ಯಾಡಿ ಆಡುವ ಸಂಸಾರ ಕರೆದು ಮಾತಾಡಲು। ತುಂಬಿದ ಕಣ್ಣ ಜಲ ನೀರು॥ ತಾಯಿ ತಂದೆಯರೆಲ್ಲಾ ಮುತ್ತಿನ ತೋರಣ ತನಕ। ಚಿಕ್ಕಕ್ಕ ಮಕ್ಕಳು ಹೊಳೆ ತನಕ। ಚಿಕ್ಕಕ್ಕ। ಮಕ್ಕಳು ಹೊಳೆತನಕ ಬರುವಾಗ। ಚಿಂತಿಸದಿರು ಮಗಳೆ ಮನದಲ್ಲಿ॥ ಮಾವ ಬರುವಾಗ। ಎದುರಿಗೆ ನಿಲ್ಲದಿರು ಜಾನಕಿ, ಮಾವನಿಗೆ ಉತ್ತರ ಕೊಡದೀರು। ಮಾವನವರಿಗೆ ಉತ್ತರ ಕೊಡದೀರು ಜಾನಕಿ। ಹಾಲು ಹಣ್ಣ ಕೊಟ್ಟು ಸಲುಗ್ಯಾರು॥ ಅತ್ತೆ ಬರುವಾಗ ಎದುರಿಗೆ ನಿಲ್ಲದಿರು ಜಾನಕಿ। ಅತ್ತೆಗೆ ಉತ್ತರ ಕೊಡದೀರು। ಅತ್ತೆಗೆ ಉತ್ತರ ಕೊಡದೀರು ಜಾನಕಿ। ಬಾ, ಬಾಲೆ ಎಂದು ಕರೆದಾರು॥ ಪುರುಷ ಬರುವಾಗ ದೇವರೆಂಬಂತೆ ನಿಂತಿರು ಜಾನಕಿ। ಪುರುಷನಿಗೆ ಉತ್ತರ ಕೊಡದೀರು। ಪುರುಷರಿಗೆ ಉತ್ತರ ಕೊಡದಿರು ಜಾನಕಿ। ಪಟ್ಟೆಯ ಕೊಟ್ಟು ಸಲುಗ್ಯಾರು॥ ಮಗಳತ್ತ ಕಳುಹಿಸಿ ತಾಪಿತ್ರ ತಿರುಗಿದರು। ಮಗಳು ಸಾಕಿನ್ನೀ ಜನ್ಮಕ್ಕೆ। ಬಳೆಗಾರ ಬಳೆಸೆಟ್ಟಿ ಬಳೆಯಾಕೆ ತಂದೀರೊ। ಬಳೆ ಇಡುವ ಮಗಳು ಮನೆಲಿಲ್ಲ। ಬಳೆಯಿಡುವ ಮಗಳು ಮನೆಲಿಲ್ಲ। ಮಂಟಪದಲಿಲ್ಲ ಅವಳೀಗ ಭಾಗ್ಯವಂತರರಮನೆಗೆ ನಡೆದಾಳು॥ ಹೂವುಗಾರ ಹೂಸೆಟ್ಟಿ ಹೂವುಯಾಕೆ ತಂದೀರೊ। ಹೂವು ಮುಡಿವಾ ಮಗಳು ಮನೆಲಿಲ್ಲ। ಹೂವು ಮುಡಿವಾ ಮಗಳು ಮನೆಲಿಲ್ಲ। ಮಂಟಪದಲಿಲ್ಲ ಅವಳೀಗ ಬಾಳುವವರರಮನೆಗೆ ನಡೆದಾಳು॥ ಕೆರೆ ಸುತ್ತ ಕೇದಿಗೆ, ಮನೆ ಸುತ್ತ ಮಲ್ಲಿಗೆ। ಕೊಯ್ದು ಮುಡಿಯುವಾ ಮಗಳಿಗೆ, ಕೊಯ್ದು ಮುಡಿಯುವಾ ಮಗಳಿಲ್ಲ ಶೆಟ್ಟಿಗರೆ। ಅವಳೀಗ ಬಾಳುವವರ ಅರಮನೆಗೆ ನಡೆದಾಳು॥



# ಹೆಣ್ಣು ಇಳಿಸಿಕೊಡುವಾಗ ಹಾಡುವ ಹಾಡು

ಸಂಗ್ರಹಿಸಿದವರು : **ಕುಮಾರಿ ಚರಿಯುಮನೆ ಲೀಲಾ, ಬೆಂಗಳೂರು.**

ಮುತ್ತು ಕಟ್ಟಿದ ಕಂಬಿ ಮತ್ತೊಂದು ಬಿಡನಾತಿ । ನಿದ್ರೆ ಮದು ಮಗಳ ಕಳುಹಿಸಿ ॥ ನಿದ್ದೆ ಮದುಮಗಳ ಕಳುಹಿಸಿ ಕೊಟ್ಟಾರೆ । ಕತ್ತಲಾದುವು ಮನೆಯೆಲ್ಲಾ ॥ ಕನ್ನೆ ಹುಟ್ಟಿದ ಮನೆಗೆ ಕನ್ನಾಡಿ ಯಾಕವ್ವಾ । ಕನ್ನೆನಮ್ಮ ಗಳು ಒಳಗಿಂದ ॥ ನಮ್ಮಗಳು ಒಳಗಿಂದ ಬರುವಾಗ । ಕನ್ನಾಡಿ ಹೊಳೆಪಂತಿ ಹೊಳೀಪಾಳು ॥ ಬಾಲೆ ಹುಟ್ಟಿದ ಮನೆಗೆ ಬೀಸಣಿಗೆ ಯಾಕವ್ವಾ । ಬಾಲೆ ನಮ್ಮಗಳು ಒಳಗಿಂದ ॥ ಬಾಲೆ ನಮ್ಮಗಳು ಒಳಗಿಂದ ಬರುವಾಗ ಬೀಸೂವಳು ॥

ಆಡುವ ಆಟವ ಬಿಟ್ಟು । ತೂಗುವ ತೊಟ್ಟಿಲ ಬಿಟ್ಟು । ಕೂಡಿ ಆಡುವವರ ಎಣೆ ಬಿಟ್ಟು ॥ ಕೂಡಿ ಆಡು ವವರ ಎಣೆ ಬಿಟ್ಟು "ಜಾನಕಿ" ಬಾಳುವವರಾ ಮನೆಗೆ ನಡೆದಾಳು ॥ ಅಂಗ್ಳ ಗುಡಿಸದು ಬಿಟ್ಟು ಗಂಗ್ಳ ತೊಳೆ ಯದು ಬಿಟ್ಟು । ಕೂಡಿ ಆಡುವವರ ಎಣೀ ಬಿಟ್ಟು ॥ ಕೂಡಿ ಆಡುವವರ ಎಣೆ ಬಿಟ್ಟು ॥ "ಜಾನಕಿ" ಬಾಳು ವವರಾ ಮನೆಗೆ ನಡೆದಾಳು ॥ ಮುತ್ತು ಕಟ್ಟಿದ ಕಂಬ ನಾರಿ ನಿಂತವಳೇ ತಾಳಿ ಕಟ್ಟಿದವನೂ ಬಿಡೋನಲ್ಲ । ತಾಳಿ ಕಟ್ಟಿದವನು ಬಿಡೊನಲ್ಲ ಎಲ್ಲೈ ಮಗಳೇ । ಬಾಳುವವರಾ ಮನೆಗೆ ನಡೀ ಬೇಗ ॥

ಒಂದು ಮೆಟ್ಟು ಇಳಿವಾಳು ಹಿಂತಿರುಗಿ ನೋಡಿ ಯಾಳು ತಂದೆ ಬರಲೆಂದು ಕರೆದಾಳು । ತಂದೆ ಬರಲೆಂದು ಕರೆದಾಳು "ಜಾನಕಿ"ಯ ತಂದೆಯ ಪಾದ ಹಿಡಿದು ಎರಗಿ ದಳು ॥ ಹೆಣ್ಣು ಹೆತ್ತೇನಂತ ದುಃಖಪಡಬೇಡ । ಹೆಣ್ಣು ನಿನ್ಮನೆಯ ಸಿರಿದೇವಿ ॥ ಹೆಣ್ಣು ನಿನ್ಮನೆಯ ಸಿರಿದೇವಿ ತಾಯಮ್ಮ ದುಃಖ ನೀನೋಡಿ ಮರೇಯಮ್ಮ ॥ ಹೆಣ್ಣು ಇಲ್ಲವೆಂದು ಬೇಜಾರಪಡಬೇಡ ॥ ಹಸೆಯ ಬರೆಸಿದೀನಿ ನಡುಮನೆಗೆ ॥ ಹಸೆಯ ಬರೇಸೀನಿ ನಡುಮನೆಗೆ ತಾಯಮ್ಮ ಹಸೆಯ ನೋಡಿ ನನ್ನ ಮರೆಯಮ್ಮ ॥ ಒಂಟಿಗೇರಿಯಾಳು ಕಾನ್ನಡಗೆ ಹೋದಾಳು । ಮಾವನಾ ಮನೆಯ ಅರಗಿ ಣಿಯು । ಮಾವನಾ ಮನೆಯ ಅರಗಿಣಿಯು ನಿನ್ಮಗಳು । ಹೆಚ್ಚು ಸುಖಿಯಾಗಲೆಂದು ಹರಸಮ್ಮ । ಅಕ್ಕ ತಂಗಿಯ ರೆಲ್ಲ ಹೂವಿನ ತೋರಣ ತನಕ । ಮಿಕ್ಕುಳಿದವರೆಲ್ಲಾ ಬಾವಿತನಕ ಎಲೆ ಮಗಳೇ ಬಾಳುವವರಾ ಮನೆಗೆ ನಡೀ ಬೇಗ ॥

ಅಣ್ಣ ತಮ್ಮಂದಿರೆಲ್ಲಾ ಚಪ್ಪರ ತೋರಣ ತನಕ । ಮಿಕ್ಕುಳಿದವರೆಲ್ಲಾ ಹೊಳೀತನಕಾ ॥ ಮಿಕ್ಕುಳಿದವರೆಲ್ಲಾ ಹೊಳೆತನಕ ಎಲ್ಲೈ ಮಗಳೆ । ಬಾಳುವವರಾ ಮನೆಗೆ ನಡೀ ಬೇಗ ॥ ೧ ॥ ಮಗಳತ್ತ ಕಳುಹಿದರು । ತಾವಿತ್ತ ತಿರುಗಿ ದರು । ಪಟ್ಟೀ ಹೊಲ ಹಾಸಿ ಮಲಗಿದರು ॥ ಪಟ್ಟೀ ಹೊಲ ಹಾಸಿ ಮಲಗಿದರು ತಾಯವ್ವ ಮಗಳು ಸಾಕೆನ್ನ ಜನ್ಮಕ್ಕೆ । ತಂಗ್ಯತ್ತ ಕಳುಹಿದರು । ತಾವಿತ್ತ ತಿಸುಹಿದರು ತಂಗೀ ಸಾಕೆನ್ನ ಜನುಮಕ್ಕೇ ॥ ೧ ॥

ಬಳೆಗಾರ ಬಳೆಸೆಟ್ಟಿ । ಬಳೆಯಾಕೆ ನೀ ತಂದ್ಯೋ ಬಳೆ ಕೊಡುವಾ ಮಗಳು ಮನೇಲಿಲ್ಲ, ಮಂಟಪಲಿಲ್ಲ । ಬಾಳುವವರ್ ಮನೆಗೆ ನಡೀದಾಳು ॥ ಹೂವಾ ಮಾರುವ ಗೊಲ್ಲ । ಹೂವ್ಯಾಕೆ ನೀ ತಂದ್ಯೋ । ಹೂ ಮುಡಿವಾ ಮಗಳು ಮನೇಲಿಲ್ಲ ॥ ಹೂ ಮುಡಿವಾ ಮಗಳು ಮನೇಲಿಲ್ಲ ॥ ಹೂ ಮುಡಿವಾ ಮಗಳು ಮನೆಲಿಲ್ಲ ಮಂಟಪ ಲಿಲ್ಲ । ಬಾಳುವವರ ಮನೆಗೆ ನಡೆದಾಳು ಎಂದೆಲ್ಲಾ ಹಲು ಬಿದರು । ಮತ್ತವರು ಹರಸಿದರು ಪತಿದೇವನೊಂದಿಗೆ ಬಾಳು ಮಗಳೇ ॥ ೧ ॥

ಸೂಚನೆ :– "—" ಈ ಗುರ್ತಿನಲ್ಲಿ ಬರೆದುದನ್ನು ಮದುಮಗಳ ಹೆಸರನ್ನು ಸೂಚಿಸಿ ಹಾಡತಕ್ಕದ್ದು.

# ಹೆಣ್ಣು ವಹಿಸಿಕೊಡುವಾಗ ಹೇಳುವ ಮಾತುಗಳು

ಸಂಗ್ರಹಿಸಿದವರು : **ಶ್ರೀ ಶಿವರಾಮು, ಮೂಲಿಮಜ್ಲು**

ಪರಮ ವೈಭವದಿಂದ ತಮ್ಮ ಇಷ್ಟಮಿತ್ರರಿಂದೊಡಗೂಡಿ ಪುರುಷನ ನಡೆಯಿಂದ ಆಗಮಿಸಲ್ಪಟ್ಟ ದಿಬ್ಬಣದ ಮುಖ್ಯಸ್ಥರಾದ ಮಹನೀಯರು ಯಾರಯ್ಯ? ಹಾಗಾದರೆ ನಾವು ನಮ್ಮ ಪೂರ್ವ ಪದ್ಧತಿಯಂತೆ, ವಿಜ್ಞಾಪನೆಯನ್ನು ಸ್ವೀಕರಿಸಿ, ಚಂದ್ರರಾಜನೆಂಬ ಪುರುಷನಿಗೆ, ಪದ್ಮಾವತಿಯೆಂಬ ಕನ್ನಿಕೆಯನ್ನು! ವಧೂವರರನ್ನಾಗಿ ಮಾಡುವುದೆಂತ ಈ ಮೊದಲು ಮನದತ್ತ ಮಾಡಿ, ಆಮೇಲೆ ವಾಗ್ಧತ್ತ ಮಾಡೋಣಾಯ್ತು, ಅಲ್ಲವೋ? ವಾಗ್ಧತ್ತ ಮೇರೆಗೆ ನಾವು ಉಭಯ ಸಮಸ್ತರು ಕೂಡಿ ಆಕಾಶದಷ್ಟು ದೊಡ್ಡ ಚಪ್ಪರವನ್ನು ಹಾಕಿ, ಭೂಮಿಯಷ್ಟು ದೊಡ್ಡ ಹಸೆಯನ್ನು ಬರೆದು ರತ್ನಖಚಿತವಾದ ಮಂಟಪದಡಿಯಲ್ಲಿ ಸಮಸ್ತ ಬಂಧು, ಬಾಂಧವರ ಸಮಕ್ಷಮದಲ್ಲಿ ಅಗ್ನಿಸಾಕ್ಷಿಯಾಗಿ ನಮ್ಮ ಕನ್ಯಾರತ್ನವನ್ನು ಧಾರೆಯೆರೆದು ಕೊಟ್ಟಿದ್ದೇವೆಯಷ್ಟೆ!

ಹಾಗಾದರೆ ನಿನ್ನೆಯ ದಿವಸ ಪುರುಷನನ್ನು ಮನ್ಮಥನಂತೆಯೂ, ಕನ್ನಿಕೆಯನ್ನು ರತಿದೇವಿಯಂತೆಯೂ, ಶೃಂಗರಿಸಿದರಲ್ಲಾಗಲಿ, ರೂಪು ಲಾವಣ್ಯದಲ್ಲಾಗಲೀ, ಏನೊಂದು ಕುಂದು ಕೊರತೆಯಿಲ್ಲದೆ, ಕಾಮಚಕ್ರೇಶ್ವರನನ್ನು ಹೋಲುವ ಪುರುಷನ ದ್ವಯ ಹಸ್ತಗಳಿಗೆ, ಚಾರು ಹಸ್ತಗಳನ್ನಾಗಿ ಮಾಡಿದರಲ್ಲಾಗಲಿ ಯಾವ ಲೋಪ ದೋಷಗಳು ಕಂಡುಬಂದಿಲ್ಲವಷ್ಟೆ? ಹಾಗಾದರೆ ನಮ್ಮ ಮುದ್ದು ಬಾಲಕಿಯನ್ನು ನಿಮ್ಮ ಸ್ವಾಧೀನಕ್ಕೆ ಒಪ್ಪಿಸಿ ಕೊಡುತ್ತೇವೆ. ಹಾಗೆ ಒಪ್ಪಿಸಿ ಕೊಡುವಾಗ ಬಾಲಕಿಗೆ ಹನ್ನೆರಡು, ಹನ್ನೆರಡು ಇಪ್ಪತ್ತನಾಲ್ಕು ವರಹಗಳನ್ನೂ, ಉಡಲು ವಸ್ತ್ರವನ್ನೂ, ತೊಡಲು ಚಿನ್ನಾಭರಣಗಳನ್ನೂ, ಊಟ ಮಾಡಲು ಬೆಳ್ಳಿ ಬಟ್ಟಲನ್ನೂ, ಕೈ ತೊಳೆಯಲು ಬೆಳ್ಳಿ ಗಿಂಡಿಯನ್ನೂ – ಕರೆದುಣ್ಣಲು ಗೋವಿನ ಹಿಂಡನ್ನೂ ಬಳುವಳಿಯಾಗಿ ಕೊಟ್ಟಿರುತ್ತೇವೆಯಷ್ಟೆ!

ಹೀಗೆ ನಾವು ಕೊಟ್ಟ ಅಲ್ಪ ಐಶ್ವರ್ಯವನ್ನು ಒಂದಕ್ಕೆ ಹತ್ತು, ಹತ್ತಕ್ಕೆ ನೂರು, ನೂರಕ್ಕೆ ಸಾವಿರ ಕಟ್ಲೆ ಅಭಿವೃದ್ಧಿ ಮಾಡಿ ಕೀರ್ತಿ ಗಳಿಸುವಂತೆ ಮಾಡುವ ಖ್ಯಾತಿವಂತ ಮಹಾಶಯರು ಯಾರಯ್ಯ?

ನಮ್ಮ ಬಾಲಕಿಗೆ ಕಡೆ ಹಲ್ಲು ಬರಲಿಲ್ಲ, ನೆತ್ತಿ ಎಣ್ಣೆ ಆರಲಿಲ್ಲ, ಕಡೆ ಬಾಯಿ ಹಾಲು ಆರಲಿಲ್ಲ, ಅಂಗೈ ಬರೆ ಮಾಜಲಿಲ್ಲ, ಬುದ್ಧಿ ಜ್ಞಾನ ಬರಲಿಲ್ಲ, ಹೆತ್ತ ತಂದೆ ತಾಯಿಯರ ನೆನಪು ಮರೆಯಲಿಲ್ಲ, ಹಸಿ ಕಡಿಯಲರಿಯಳು, ಒಣಗಿಲು ಮುರಿಯಲರಿಯಳು, ಬೀಸಿ ಗುಡಿಸಲರಿ

ಯಳು, ಹಾಸಿಗೆ ಹಾಸಲರಿಯಳು. ಅಂಗಳದಲ್ಲಿ ಆಡಿ, ಹಾಲನ್ನು ಉಂಡು, ಮೆಟ್ಟಲಲ್ಲಿ ಓಡಿ ತೊಟ್ಟಲಲ್ಲಿ ಮಲಗ ಬೇಕೆಂದು ಇಚ್ಛಿಸುವ ಬಾಲಕಿಗೆ ತಕ್ಕ ಬುದ್ಧಿವಾದವನ್ನು ಬೋಧಿಸುವಂತಹ ಬೋಧಕರು ಯಾರಯ್ಯ ?

ನಮ್ಮ ಬಾಲಕಿಯ ಚಿಕ್ಕದಾಗಿರುವ ಕಾಲದಿಂದಲೂ ಮಾವನವರ ಮನಗುಣವನ್ನು ಅರಿಯಳು. ಅತ್ತೆಮ್ಮ ನವರ ಅಡಿಗೆ ಕೆಲಸ ತಿಳಿಯಲಿಲ್ಲ, ಭಾವ ಮೈದುನರ ಭಾವನೆ ಗೊತ್ತಿಲ್ಲ. ಅಕ್ಕತಂಗಿಯವರ ಹಂಗಿಗೆ ಒಳಪಟ್ಟ ವಳಲ್ಲ, ಕುಟುಂಬದ ಕೂಟಕ್ಕೆ ಕೂಡಿದವಳಲ್ಲ. ಹೀಗಿರು ವಲ್ಲಿ ತನ್ಮಧ್ಯೆ ಏನಾದರೂ ಮಾತಿನಲ್ಲಿ ಕಲಹಗಳು ಉಂಟಾದರೆ ಇಂತಹ ಕಲಹಗಳನ್ನು ಉಪಶಮನ ಮಾಡು ವಂತಹ ಉಪಶಯಕರು ಯಾರಯ್ಯ ?

ಹಾಗಾದರೆ, ದಿಬ್ಬಣದ ಮಹಾಶಯರೇ, ನಾವು ಹೇಳಿದ ಮಾತಿಗೆ ಎರಡೆನ್ನದೆ ನಾವು ಕೊಡುವ ಕನ್ಯಾರತ್ನ ವನ್ನು ಭಕ್ತವತ್ಸಲನು ಭಕ್ತರನ್ನು ಪ್ರೀತಿಸುವಂತೆಯೂ, ನರಹರಿಯು ಕೂರ್ಮನನ್ನು ಕಾಯುವಂತೆಯೂ, ಹಸು ತನ್ನ ಎಳೆಗರುವನ್ನು ಪ್ರೀತಿಸುವಂತೆಯೂ, ಪ್ರೀತಿಸು ವಿರೆಂಬುದಾಗಿ ಅಗ್ನಿಸಾಕ್ಷಿಯಾಗಿ ನಾವು ನಂಬುತ್ತೇವೆ. ಇನ್ನು ಮುಂದೆ ಈ ನವ ದಂಪತಿಯರನ್ನು ಭಕ್ತವತ್ಸಲನು, ನಾಭಿಕಮಲದಲ್ಲಿ ಬ್ರಹ್ಮನಿಗೆ ಸ್ಥಾನವಿತ್ತವನಾದ ಆ ಕ್ಷೀರ ಶಯನ ಶ್ರೀಮನ್ನಾರಾಯಣರೇ ಕಾಪಾಡಲೆಂದು ನಾವೆ ಲ್ಲರೂ ವಂದಿಸೋಣ.

---

# ಗೌಡರು ಆಚರಿಸುವ ಹಬ್ಬಗಳು

ಲೇಖಕರು : ಶ್ರೀ ಮೂಲೆಮಜ್ಲು ಸೋಮಣ್ಣನವರು,
ಗ್ರಾಮ, ಕಾಜೂರು ಸೋಮವಾರ ಪೇಟೆ ತಾಲ್ಲೋಕು

---

[ಶ್ರೀ. ಮೂಲೆಮಜ್ಲು ಸೋಮಣ್ಣನವರು ಕಾಜೂರು ಗ್ರಾಮದವರಾಗಿದ್ದು ತಮ್ಮ ಊರಿನ ಸಹಕಾರ ಸಂಘ, ಕಾಜೂರಿನ ಮಾದರಿ ಕೋಳಿ ಸಾಕಣೆ ಕೇಂದ್ರ ಮುಂತಾದ ಊರಿನ ಹಲವು ಕ್ಷೇತ್ರಗಳಲ್ಲಿ ದುಡಿದು ಊರಿನ ಅಭಿವೃದ್ಧಿಗೆ ಕಾರಣಕರ್ತರಾಗಿದ್ದಾರೆ. ಬೇರೆಯವರಿಗೆ ಒಬ್ಬ ಮಾದರಿ ರೈತರಾಗಿ ಜನರ ಒಲುಮೆಯನ್ನು ಗಳಿಸಿದ್ದಾರೆ. ಇವರು ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಬೆಂಗಳೂರು, ಇದರ ಕಾಜೂರು ಕೇಂದ್ರದ ಅಧ್ಯಕ್ಷರಾಗಿದ್ದಾರೆ. ಶ್ರೀಮಾನ್ ಸೋಮಣ್ಣನವರ ಹಬ್ಬ ಆಚರಣೆ ಲೇಖನ ಗೌಡರ ಆಚಾರ ಪದ್ಧತಿಗಳ ಪರಿಚಯ ಮಾಡಿಕೊಟ್ಟಿದೆ.]

---

## ಯುಗಾದಿ ಹಬ್ಬ

ಯುಗಾದಿ ಹಬ್ಬವು ಹಿಂದೂಗಳಲ್ಲಿ ವರ್ಷದ ಮೊದಲನೆಯ ದಿನ. ಉಗಾದಿ ಹಬ್ಬವನ್ನು ಬಹು ಸಂಭ್ರಮದಿಂದ ಆಚರಿಸುವ ಹಬ್ಬ. ಉಗಾದಿಯ ಹಬ್ಬದ ದಿನ ಬೆಳಗ್ಗೆ ತಮ್ಮ ಮನೆಗಳನ್ನು ಶುಚಿಗೊಳಿಸಿ ರಂಗೋಲಿ ಮಾವಿನ ಎಲೆಯ ತೋರಣಗಳಿಂದ ಅಲಂಕರಿಸುತ್ತಾರೆ. ಮನೆಯವರು ಸ್ನಾನೆ ಸಾರಣೆ ತಾರಿಸಿ ಅಡಿಗೆ ಮಾಡುವುದಕ್ಕೆ ಪ್ರಾರಂಭಿಸಿ ಮನೆಯುವರೆಲ್ಲರೂ ಸ್ನಾನಮಾಡಿ ಹೊಸಬಟ್ಟೆಗಳನ್ನು ಧರಿಸಿ ಸ್ವಲ್ಪ ಹೊತ್ತು ಉಪವಾಸ ಇದ್ದು ಬೇವು ಬೆಲ್ಲ ಸೇವಿಸುವರು. ಹೊಸ ವರ್ಷದಲ್ಲಿ ಕಹಿ ಸಿಹಿಯು ಆ ವರ್ಷದ ಜೀವನದಲ್ಲಿ ಸಮ್ಮಿಶ್ರವಾಗಿ ಬರಲೆಂಬ ಭಾವನೆಯಿಂದಲೋ ಅಥವಾ ಬೇವನ್ನು ಮಾತ್ರ ಸೇವಿಸಲಿಕ್ಕೆ ಕಷ್ಟವೋ ಹೇಗೂ ಇರಲಿ ಬೇವು ಬೆಲ್ಲವನ್ನು ತಿನ್ನುವುದಕ್ಕೆ ಮೊದಲು ಪೂಜೆಯನ್ನು ಮಾಡಿ ಹಣ್ಣು ಕಾಯಿ ಗಂಧ ಮುಂತಾದ ದೇವರ ಪ್ರಸಾದವನ್ನು ಸ್ವೀಕರಿಸಿದನಂತರ ಬೇವು ಬೆಲ್ಲವನ್ನು ತಿನ್ನುತ್ತಾರೆ.

ಗೌಡರಲ್ಲಿ ಒಂದು ಕುಟುಂಬದವರೆಂದರೆ ತಂದೆ ತಾಯಿ ಮಕ್ಕಳೇ ಮಾತ್ರವಲ್ಲ. ಇಂತಹ ಸಂಸಾರದ ಅನೇಕ ಜನರು ಸೇರಿದುದಕ್ಕೆ ಒಂದು ಕುಟುಂಬವೆನ್ನುತ್ತೇವೆ. ಈ ಕುಟುಂಬದವರೆಲ್ಲ ಸೇರಿ ಏಕ ಮನಸ್ಸಿನಿಂದ ಸಂತೋಷದಿಂದ ಒಂದೇ ಸಭೆಯಲ್ಲಿ ಕುಳಿತು ಪಾಯಸ ಪರಮಾನ್ನ ಭೋಜನವನ್ನು ಮಾಡುತ್ತಾರೆ. ಈ ದಿನ ಯಾರೂ ಮದ್ಯ ಮಾಂಸವನ್ನು ಸೇವಿಸುವುದಿಲ್ಲ. ಹೆಚ್ಚಾಗಿ ತಾವೇ ಸ್ವತಃ ಬೆಳೆಸಿದ ಹೊಸ ತರಕಾರಿ ಕಾಯಿ ಪಲ್ಯಗಳನ್ನೇ ಸೇವಿಸುವರು. ಸವಿಯ ಊಟ ಉಂಡನಂತರ ತಾಂಬೂಲವನ್ನು ಸೇವಿಸಿ ಪ್ರತಿಯೊಬ್ಬನೂ ಅದೃಷ್ಟದ ಫಲ, ಆಯುವ್ಯಯ, ಕಷ್ಟ, ಸುಖ, ಜಯ ಅಪಜಯ ಧನ ಧಾನ್ಯಗಳ ಫಲಭರಿತ ಕಾರ್ಯಗಳ ಸಂಭವ ಇತ್ಯಾದಿ

ಯಾಗಿ ಸಾಮಾನ್ಯ ರೀತಿಯಿಂದ ಕೊಂಡುಕೊಳ್ಳುವ ಹುರುಪಿಗಾಗಿ ಹೊಸ ವರ್ಷದ ಪಂಚಾಂಗವನ್ನು ಯಜಮಾನನಿಂದ ಹಿಡಿದು ಪ್ರತಿಯೊಬ್ಬನೂ ಜನ್ಮ ನಕ್ಷತ್ರಗಳ ಆಧಾರದ ಮೇಲೆ ತನ್ನ ಕಾರ್ಯ ಕಲಾಪಗಳಲ್ಲಿ ತೊಡಗಲು ಗುರ್ತು ಹಾಕಿಕೊಳ್ಳುವರು. ಅದರಂತೆ ಅರ್ಹತೆಯುಳ್ಳವರನ್ನೇ ವಿಶೇಷ ಕಾರ್ಯಗಳಿಗೆ ನೇಮಿಸಿಕೊಳ್ಳ ಬಹುದೆಂದು ತೀರ್ಮಾನಿಸುವರು. ಇನ್ನೂ ಸಂತೋಷದಿಂದ ಕಾಲ ಕಳೆಯಲು ಊರಿನ ಜನರೆಲ್ಲ ಒಂದೆಡೆ ಸೇರಿ ದೇವಸ್ಥಾನ ಯಾ ಅಂಬಾಲದಲ್ಲಿ ಪೂಜೆ ಉತ್ಸವ ಚೆಂಡಾಟ ತೆಂಗಿನ ಕಾಯಿಗೆ ಕೋವಿಯಿಂದ ಗುರಿ ಹೊಡೆಯುವುದು ಆಟೋಟಗಳ ಸ್ಪರ್ಧೆ, ಸಭೆ ಬಹುಮಾನ ವಿತರಣೆಗಳನ್ನು ಬಹಳ ಉತ್ಸಾಹದಿಂದ ಪ್ರತಿವರ್ಷವೂ ಆಚರಿಸುವರು. ಇದಲ್ಲದೆ ಜನರೊಡಗೂಡಿ ಸಮ್ಮಿಲನಕ್ಕಾಗಿ ನೆರೆಮನೆಯವರನ್ನು ಆಹ್ವಾನಿಸಿ ಪ್ರತಿ ಮನೆಯಲ್ಲಿಯೂ ಅತಿಥಿ ಸತ್ಕಾರದ ಜೊತೆಗೆ ದಾಸರಿಗೆ ಭಿಕ್ಷುಕರಿಗೆ ದಾನ ಮಾಡುವ ಪದ್ಧತಿಯೂ ಇದೆ.

## ಬಿಶು ಸಂಕ್ರಮಣ

ಭೂಮಿಯ ಒಂದೆಡೆಯ ನೇಗಿಲ ಯೋಗಿ ಎಂದ ಮೇಲೆ ಉಳುವ ಪ್ರತಿಯೊಬ್ಬನಿಗೂ ಉಳುವ ಸಮಯ ನಿರೀಕ್ಷಣೆ, ಭಕ್ತಿಯಿಂದ ಹುರುಪಿನಿಂದ ಉಳುವುದಕ್ಕೆ ಪ್ರಾರಂಭಿಸುವುದು ಬಿಶು ಸಂಕ್ರಮಣದ ದಿನದಂದು. ಈ ದಿನದಲ್ಲಿ ಗೌಡರು ಅವರ ಕುಟುಂಬದ ಮನೆಗಳಲ್ಲಿ ಬೆಳಗ್ಗಿನ ಝಾವದಲ್ಲಿ ಮನೆಯನ್ನು ಶುಚಿಯಾಗಿರಿಸಿ ಮನೆಯ ಯಜಮಾನ ಭಕ್ತಿಯಿಂದ ಹಾಸುಮಣೆಯ ಮೇಲೆ ಮಡಿಯಾದ ಬಿಳಿ ಬಟ್ಟೆಯನ್ನು ಹಾಸಿ ನೆಲ್ಲಕ್ಕಿಯಲ್ಲಿ ದೀವಿಗೆ ಇಟ್ಟು ಹಾಸಿದ ಮಡಿಯಲ್ಲಿ ಹೊಂಬೆಳಕನ್ನು ಹತ್ತಿಸಿ ಇಡುತ್ತಾರೆ. ಇದರೊಡನೆ ಒಂದು ಹರಿವಾಣದಲ್ಲಿ ಅಕ್ಕಿ ಹಣ್ಣು, ಕಾಯಿ, ಎಲೆ, ಅಡಿಕೆ, ಹೂಗಳಿಂದ ಶ್ರೀ ಗಣಪತಿಗೆ ಇಡುವರು. ಇನ್ನೊಂದರಲ್ಲಿ ಬೆಳ್ಳಿ ನಾಣ್ಯಗಳು, ಸ್ವರ್ಣ, ಗಂಧದ ಕಡ್ಡಿ, ಇತ್ಯಾದಿಗಳಿಂದ ಅಲಂಕರಿಸಿ ಪೂಜಿಸುವರು. ಕುಟುಂಬದ ಸರ್ವರೂ ಆ ಹೊಂಬೆಳಕನ್ನೂ ನೋಡಿ ನಮಸ್ಕಾರ ಮಾಡಿ ಅನಂತರ ಕೆಲಸ ಕಾರ್ಯಗಳಿಗೆ ಮೊದಲಾಗುವರು.

ಹಿರಿಯರ ಹೇಳಿಕೆಯಂತೆ ಇದನ್ನು ಖಣಿ ಪೂಜುವುದೆಂದು ಹೆಸರಿಸಿದ್ದಾರೆ.

ನಂತರ ಕೊಟ್ಟಿಗೆಯಿಂದ ನೇಗಿಲು ಮತ್ತು ಇತರ ಉಪಕರಣಗಳನ್ನು ತೆಗೆದುಕೊಂಡು ಗದ್ದೆಯಲ್ಲಿ ನಿಲ್ಲಿಸಿ ಶಾಸ್ತ್ರೋಕ್ತವಾಗಿ ಗದ್ದೆ ಏರಿಯಲ್ಲಿ ಕುಡಿ ಬಾಳೆಲೆ ಇಟ್ಟು ಶ್ರೀ ಗಣಪತಿಗೆ ಹಣ್ಣು, ತೆಂಗಿನ ಕಾಯಿ, ಎಲೆ ಅಡಿಕೆ ಇವುಗಳನ್ನು ಇಟ್ಟು ಇನ್ನೊಂದು ತುದಿಬಾಳೆಲೆಯಲ್ಲಿ ಸಿಹಿಯಾದ ಹಿಟ್ಟು (ಉಂಣಿಕ್ಕಿ) ಹೂವು ಇಟ್ಟು ಹಣ್ಣು ಕಾಯಿ ಒಡೆದು ಪೂಜೆಮಾಡಿ, ಧೂಪದ ದೀಪಗಳಿಂದ ಎತ್ತುಗಳನ್ನೂ ಪೂಜಿಸಿ ತಾನು ಗಂಧಕ್ಷತೆಗಳನ್ನು ಇಟ್ಟು ಕೊಳ್ಳುವುದಲ್ಲದೆ ಎತ್ತುಗಳಿಗೂ ಹಚ್ಚುವರು. ದೇವರನ್ನು ಪ್ರಾರ್ಥಿಸಿ ಎತ್ತುಗಳ ತಲೆಗೆ ಅಕ್ಕಿ ಹಾಕಿ ನೊಗ ಹಾಕಿ ನೇಗಿಲು ಹೂಡುತ್ತಾರೆ.

ನಂತರ ಒಂದು ಹೊಳಿ ಅಂದರೆ ಅದು ಎರಡು ಅಂಕವಾಗಿ ನಾಲ್ಕೈದು ಸುತ್ತು ಕಿರಿದಾಗಿ ಉತ್ತು ಈ ಉತ್ತ ಜಾಗಕ್ಕೆ ಗೊಬ್ಬರ ಮತ್ತು ಹಸಿರು ಸೊಪ್ಪು (ನೇರಳೆ) ತಂದು ಹಾಕುತ್ತಾರೆ. ಉಳುವವರು ನೆಕ್ಕಿ ಗಿಡದ ಕೋಲನ್ನು ಎತ್ತುಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು ಉಪಯೋಗಿಸುತ್ತಾರೆ. ಹೀಗೆ ಮಾಡಬೇಕೆಂಬ ನಿಯಮ ಇದೆ. ಈ ದಿನದಲ್ಲಿ ದೇವಸ್ಥಾನಗಳಲ್ಲಿ ಪೂಜೆ ಪುರಸ್ಕಾರ ಸಂಬ್ರಾಜನ ಇತ್ಯಾದಿಯಾಗಿ ಪುಣ್ಯ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ.

## ಬೀಜ ಬಿತ್ತುವುದು

ಯುಗಾದಿ ದಿನದಿಂದ ಜನರು ಕೃಷಿಯ ಕೆಲಸಗಳಲ್ಲಿ ತೊಡಗುತ್ತಾರೆ. ಬೇಸಾಯ ಪ್ರಾರಂಭ ಮಾಡುವುದಕ್ಕೆ ಭತ್ತದ ಬೀಜವನ್ನು ಬಿತ್ತುವುದಕ್ಕೆ ಗದ್ದೆಯನ್ನು ಕಾದಿರಿಸಿ ಅದನ್ನು ಉತ್ತು (ಏಕ್ಲ) ಅಗಾಡಿ ಇದನ್ನು ಬಹಳ ಕ್ರಮ ಬದ್ಧವಾಗಿ ತಯಾರಿಸುತ್ತಾರೆ

ಬೀಜ ಬಿತ್ತುವುದಕ್ಕೆ ಮೊದಲು ಬೀಜ ಬಿತ್ತುವುದಕ್ಕೆ ಯೋಗ್ಯವಾದ ನಕ್ಷತ್ರ ಕರಣ, ವಿಷ ಅಮೃತ

ಫಳಿಗೆಗಳನ್ನು ಪಂಚಾಂಗ ನೋಡುವವರ ಸಹಾಯದಿಂದ ತಿಳಿದು ಅದಕ್ಕನುಸಾರವಾಗಿ ಬೀಜ ಬಿತ್ತುವ ರೂಢಿಯಲ್ಲಿದೆ. ಇದರಿಂದ ಭತ್ತದ ಸಸಿಗಳಿಗೆ ಕ್ರಿಮಿ, ಕೀಟ, ಮೃಗ ಮತ್ತು ಪಕ್ಷಿಗಳ ಹಾವಳಿಯಿಂದ ವಿಮುಕ್ತಗೊಳಿಸಲು ಈ ಮುಂಜಾಗ್ರತೆ ವಹಿಸುತ್ತಾರೆ. ಈ ರೀತಿ ತಯಾರಾದ ಅಗಾಡಿಗೆ ಫಲಿ. ಫಲಿ ಎಂದು ಉಚ್ಚರಿಸುತ್ತಾ ಬೀಜ ಬಿತ್ತುತ್ತಾರೆ.

## ಅಗೆ ತೆಗೆಯುವುದು

ಪ್ರಥಮ ಅಗೆ ತೆಗೆಯುವ ದಿನ ಮನೆಯ ಯಜಮಾನಿಯು ಶುಚಿಯಾದ ಉಡುಪನ್ನು ಉಟ್ಟು ಬೆಳಗಿನ ಸಮಯದಲ್ಲಿ, ಹಾಲು ಅಕ್ಕಿ, ಬೆಲ್ಲ ಏಕ್ಲಿಗೆ ತೆಗೆದುಕೊಂಡು ಹೋಗಿ 'ದೋರೆ' ಸೊಪ್ಪನ್ನು ತಂದು ಗದ್ದೆಯ ಏರಿಯ ಮೇಲೆ ಸೊಪ್ಪನ್ನೂ ಮೂಡದಿಕ್ಕಿಗೆ ಮುಖ ಮಾಡಿ ಇಟ್ಟು ಅದರಲ್ಲಿ, ಈ ಹಾಲು ಅಕ್ಕಿ ಬೆಲ್ಲ, ಹೂಗಳಿಟ್ಟು ಪೂಜಿಸಿ ಮೂಡುದಿಕ್ಕಿಗೆ ಮುಖ ಮಾಡಿ ಶ್ರೀ ಮೂಲಕಾವೇರಮ್ಮ ಮತ್ತು ಇಗ್ಗುತಪ್ಪದೇವರನ್ನು ಮನಸ್ಸಾರೆ ನೆನೆಯುತ್ತಾ ಅಗೆಗೆ (ಭತ್ತದ ಸಸಿ) ಹಾಲೆರೆದು ಫಲಿಯೇ ಎಂದು ಹೇಳಿ ಅಗೆ ತೆಗೆಯುತ್ತಾರೆ.

## ನಾಟಿ ನೆಡುವುದು

ಮನೆಯ ಯಜಮಾನನು ನಾಟಿ ನೆಡುವ ಗದ್ದೆಯನ್ನು ಸಜ್ಜುಗೊಳಿಸಿ ಗದ್ದೆಗೆ ಅಗೆಹಾಕಿ ಗದ್ದೆಯ ಏರಿಯ ಒಂದು ಮೂಲೆಯನ್ನ ಚೆನ್ನಾಗಿ ಸಾರಿಸಿ ಹೂ, ಗಂಧದ ಕಡ್ಡಿ ಧೂಪ ಹತ್ತಿಸಿ. ಹರಳೆ ಸೊಪ್ಪಿನಲ್ಲಿ ಹಾಲು ಅಕ್ಕಿ ಬೆಲ್ಲ ಮುಂತಾದುವುಗಳಿಂದ ನೈವೇದ್ಯವನ್ನಿಟ್ಟು. ಪೂಜೆಮಾಡಿ ಕಳಿಕಳಿಯಾಗಿ ಬಾ ಎಂಬುದಾಗಿ ಗಂಭೀರ ಸ್ವರದಿಂದ ಉಚ್ಚರಿಸುತ್ತಾ ಹುರುಪಿನಿಂದ ನಾಟಿನೆಡುತ್ತಾ ಸಾಗುತ್ತಾರೆ. ನಂತರ ನಾಟಿಗೆ ಬಂದವರೆಲ್ಲಾ ನಾಟಿ ನೆಡಲು ಪ್ರಾರಂಭ ಮಾಡುತ್ತಾರೆ. ಅಗೆ ಮತ್ತು ನಾಟಿಕೆಲಸವನ್ನು ಒಬ್ಬರನ್ನೊಬ್ಬರು ಸಹಕರಿಸಿ ಕೂಡಿಕೊಂಡು ಒಗ್ಗಟ್ಟಾಗಿ ಮಾಡುತ್ತಾರೆ.

ರೈತರು ನಾಟಿ ಮತ್ತು ಅಗೆ ಕೆಲಸದಲ್ಲಿ ಮಗ್ನರಾಗುವ ಈ ಕಾಲದಲ್ಲಿ ಅವರಿಗೆ ಬೇರೆ ಯಾವ ರೀತಿಯ ಸಂತೋಷ ಕೂಟಗಳಲ್ಲಿ ಭಾಗವಹಿಸಲು ಮತ್ತು ಭವ್ಯ ಭೋಜನಗಳನ್ನು ಮಾಡಲು ಅವಕಾಶವಿಲ್ಲದ್ದರಿಂದ ಪ್ರತಿಯೊಬ್ಬ ಸದಸ್ಯನ ಪರವಾಗಿ ಒಂದು ಸಮೂಹ ಊಟ ಏರ್ಪಾಡು ಮಾಡಿದ ಹಾಗೆಯೂ ಕೆಲಸವೂ ಹಾಳಾಗದ ಹಾಗೆಯೂ ಒಂದೊಂದು ಕಂಬಳ ನಾಟಿ ಎಂಬುದಾಗಿ ಏರ್ಪಾಡು ಮಾಡುತ್ತಾರೆ. ಈ ಕಾಂಬಳ ನಾಟಿಯಲ್ಲಿ ಭವ್ಯ ಭೋಜನವನ್ನು ಏರ್ಪಡಿಸಿ ಗದ್ದೆಯಲ್ಲಿ ಓಡುವ ಸ್ಪರ್ಧೆಯನ್ನು ಇಡುತ್ತಾರೆ. ದಕ್ಷಿಣ ಕನ್ನಡದ ಕಡೆ ಕೋಣಗಳನ್ನು ಹೋರಿಗಳನ್ನು ಓಡಿಸುತ್ತಾರೆ. ಯಾರು ಈ ಓಟದಲ್ಲಿ ಜಯಗಳಿಸುತ್ತಾರೋ ಅವರಿಗೆ ಬಹುಮಾನವನ್ನು ವಿತರಣೆ ಮಾಡುತ್ತಾರೆ. ಬಹುಮಾನವನ್ನು ಮನೆಯ ಯಜಮಾನ ಸ್ಪರ್ಧೆಯಲ್ಲಿ ಗೆದ್ದವರಿಗೆ ಕೊಡುತ್ತಾರೆ. ಈ ರೀತಿಯ ಕಂಬಳಕ್ಕೆ ಕೊಂಬು ವಾಲಗವನ್ನೂ ಸೇರಿಸುವುದೂ ಇದೆ. ಈ ಕಂಬಳದ ಓಟದ ವೀಕ್ಷಣೆಗಾಗಿ ಸುತ್ತಮುತ್ತಲಿನ ಊರಿನಿಂದಲೂ ದೂರದ ಊರಿನಿಂದಲೂ ಜನರು ಬರುತ್ತಾರೆ. ಇದೊಂದು ಸಣ್ಣ ಜಾತ್ರೆಯೇ ಆಗಿಹೋಗುತ್ತದೆ. ಕೆಲಸಮಾಡಿ ದಣಿವಾದವರಿಗೆ ಇದೊಂದು ಮನರಂಜನೆಯ ಸಂದರ್ಭವೂ ಹೌದು ಓಡುವುದರಲ್ಲೂ ಮಾತ್ರವಲ್ಲದೆ ನಾಟಿ ನೆಡುವುದರಲ್ಲಿಯೂ ಸ್ಪರ್ಧೆಗಳಿವೆ. ನಾಟಿ ನೆಡುವಾಗ ಚುರುಕಾಗಿ ನೆಡದವರನ್ನು ಹಾಸ್ಯಮಾಡಿ ಜರೆಯುತ್ತಾರೆ. ನಾಟಿ ನೆಡುವ ಸಮಯದಲ್ಲಿ ಹಲವಾರು ಕಥೆ ಒಗಟು ಹೇಳುವುದರಿಂದ ಕೆಲಸದ ಕಷ್ಟವೇ ಅರಿವಿಲ್ಲದೆ ನಾಟಿ ನೆಡುವುದು ಬಹಳ ಚುರುಕಾಗಿ ಸಾಗುತ್ತದೆ. ಇದೇ ರೀತಿ ಹೆಂಗಸರೂ ಸಹ (ಸಸಿ) ಅಗೆಯನ್ನು ತೆಗೆಯುವುದಕ್ಕೆ ಬರುವಾಗ ಸಂಭ್ರಮದಿಂದ ಬಂದು ಮನೆಯ ಯಜಮಾನಿ ಬಂದ ಹೆಂಗೆಳೆಯರಿಗೆ ಎಲೆ ಅಡಿಕೆಯನ್ನು ಕೊಟ್ಟು ಸ್ವಾಗತಿಸಿ ಒಗಟು, ಕಥೆ ಸೋಬಾನೆಗಳಿಂದ ಮನರಂಜನೆಯ ಚಟುವಟಿಕೆಗಳಿಂದ ಸಂತೋಷದಿಂದ ಕೆಲಸವನ್ನು ಮಾಡುತ್ತಾರೆ. ಇವೆಲ್ಲವೂ ನಮ್ಮ ಪೂರ್ವಜರು ಯಾವ ರೀತಿಯಲ್ಲಿ ಒಗ್ಗಟ್ಟಿನಿಂದ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರೆಂಬುದು ಅರಿವಾಗುತ್ತದೆ. ಕೆಲಸ ಕಾರ್ಯಗಳಲ್ಲೂ ಯಾವ ರೀತಿಯ ಸೌಹಾರ್ದತೆ ಇತ್ತೆಂಬುದು

ಅರಿವಾಗುತ್ತದೆ. ಕೆಲಸವನ್ನು ಒಟ್ಟುಗೂಡಿ ಸಂತೋಷದಿಂದ ನಗುನಗುತ್ತಾ ಮಾಡುತ್ತಿದ್ದರೆಂಬುದನ್ನು ನಾವು ತಿಳಿದು ಕೊಳ್ಳಬಹುದು.

ನಾಟಿನೆಟ್ಟ ಆ ದಿನದ ನಾಟಿಯನ್ನು ಎಲ್ಲರೂ ನಾಟಿ ಕೊಡುವ ಸಮಯದಲ್ಲಿ ಓ ಹೊ ಯ್ಯಾ ಓ ಹೋ ೀ ಹೊ ಯ್ಯಾ ಎಂಬದಾಗಿ ಎಲ್ಲರೂ ಗಟ್ಟಿಯಾಗಿ ಕೂಗು ತ್ತಾರೆ. ಇದರಿಂದ ಅಕ್ಕಪಕ್ಕದವರಿಗೆ ಕಂಬಳ ನಾಟಿ ಕೂಡಿತು ಎಂಬ ಸಂಕೇತ ಗೊತ್ತಾಗುತ್ತದೆ.

ನಾಟಿಕೆಲಸ ಕೊನೆಗೊಳ್ಳುವ ಸಮಯದಲ್ಲಿ ಗಣೋದಿ ಎಂಬ ಪೂಜೆಯನ್ನು ಮಾಡುತ್ತಾರೆ. ಆಗ ಮನೆಯ ಯಜಮಾನನು ಗದ್ದೆಯ ಏರಿಯ ಮೂಲೆಯಲ್ಲಿ ಶ್ರೀ ಗಣಪತಿಗೆ ನೈವೇದ್ಯ ಇಟ್ಟು ಕಳಿಕಳಿ ನಾಟಿ ; ಶ್ರೀ ಕಾವೇ ರಮ್ಮನ ಮನದಂತೆ, ಇಗ್ಗು ತಪ್ಪನ ಶಿಖರದಂತೆ, ಕಾವೇರಿ ವಾಟೆಪಡದಂತೆ ದೇವರಿಗೂ ನನಗೂ ಸಮಭಾಗವಾಗು ವಂತೆ ಏರಿಗೂ ಭಾರಿಗೂ ಮುಟ್ಟಿ ಬೆಳೆಯುವಂತೆ ಬೆಳೆಯಲಿ ಎಂದು ಹಾರೈಸಿ ನಾಟಿಯನ್ನು ಮುಕ್ತಾಯ ಗೊಳಿಸಿ ಶ್ರೀ ಗಣಪತಿಯ ಪ್ರಸಾದವನ್ನು ಎಲ್ಲರಿಗೂ ಹಂಚಿ ಸ್ವೀಕರಿಸು ವರು.

## ಅಗೆ ಪೂಜೆ

ಒಂದೊಂದು ಕುಟುಂಬದಲ್ಲಿ ಯಾರ ಕಡೆ ಕೊನೆಗೆ ಅಗೆ ತೆಗೆಯುವರೋ ಅಲ್ಲಿ! ಎಲ್ಲಾ ಮಹಿಳೆಯರು ಸೇರಿ ಅಗಾಡಿಯ ಏರಿಯನ್ನು ಚೆನ್ನಾಗಿ ಸಾರಿಸಿ ಅಲ್ಲಿ ಸುರುಳಿ ಎಲೆಯಲ್ಲಿ ಅಕ್ಕಿ ಹಣ್ಣು ಹೂ ವೀಳ್ಯದೆಲೆ ಇಟ್ಟು ಪೂಜೆ ಮಾಡಿ ನಂತರ ಅಗೆಯಿಂದಲೇ ರಸವನ್ನು ತೆಗೆದು ಸುಣ್ಣ ಬೊಟ್ಟನ್ನಿಟ್ಟು ಕೊಳ್ಳುತ್ತಾರೆ. ಇದನ್ನು ಅಗೆ ಪೂಜೆ ಎಂದು ಕರೆಯುತ್ತಾರೆ.

## ನೇಗಿಲು ಪೂಜೆ

ಗದ್ದೆಉಳುವುದು ಕೊನೆಗೊಂಡಿತೆಂದು ಕಂಡುಬಂದ ಮೇಲೆ ನೇಗಿಲು, ನೊಗ ಪಿಕ್ಕಾಸು ಗುದ್ದಲಿ ಮುಂತಾದ ರೈತನು ಕೃಷಿಯ ಕೆಲಸಕ್ಕೆ ಉಪಯೋಗಿಸುವುದಕ್ಕೆ ಉಪ ಯೋಗಿಸುತ್ತಿದ್ದ ಎಲ್ಲಾ ಉಪಕರಣಗಳನ್ನು ಚೆನ್ನಾಗಿ ತೊಳೆದು ಶ್ರೀಗಂಧವನ್ನು ತೇದು ಎಲ್ಲಾ ಉಪಕರಣಗಳಿಗೆ ಹಚ್ಚಿ ಹೂವಿನಿಂದ ಅಲಂಕರಿಸಿ ಕುಟುಂಬದ ಎಲ್ಲಾ ಗಂಡಸರು ಮಕ್ಕಳು ಸೇರಿ ಪೂಜೆ ಮಾಡಿ ತಮ್ಮ ಗುರು ಕಾರಣಿಕರನ್ನು ನೆನೆದು ಶ್ರೀ ಕಾವೇರಮ್ಮನೂ ಮನೆಯ ಗುರುಹಿರಿಯರು ತಮ್ಮ ಎಲ್ಲಾ ಕಾರ್ಯಕಲಾಪಗಳಿಗೆ ನೆರ ವಾಗುವಂತೆಯೂ, ಬಿತ್ತಿದ ಬೆಳೆಗೆ ದನಕರುಗಳು ಸಮೃದ್ಧಿ ಯಾಗಿ ಬೆಳೆಬೆಳೆಯುವುದಕ್ಕೆ ಸಮಯಕ್ಕೆ ಸರಿಯಾಗಿ ಮಳೆ ಯಾಗಿ ಸಮೃದ್ಧಿಯಾಗಲೆಂದು ಪ್ರಾರ್ಥಿಸಿ (ತೊಳಸಿದ ಹಿಟ್ಟಿನ) ನೈವೇದ್ಯವನ್ನು ದೇವರಿಗೆ ಇಟ್ಟು ದೇವರನ್ನು ನೆನೆದು ಪ್ರಸಾದ ಸ್ವೀಕರಿಸುತ್ತಾರೆ.

## ಕೈಲ್‌ಮುಹೂರ್ತ

ಕೈಲ್‌ಮುಹೂರ್ತ ಹಬ್ಬವು ಇಡೀ ಭಾರತದಲ್ಲಿ ಬೇರೆ ಯಾವ ಕಡೆಗಳಲ್ಲೂ ಆಚರಿಸದೆ ಕೊಡಗಿನಲ್ಲಿ ನಡೆಸುವ ಆಯುಧ ಪೂಜೆ ಎಂದು ಹೇಳಬಹುದು. ಆ ದಿನ ಕೊಡಗಿ ನಾದ್ಯಂತ ಭೂವ್ಯವಸಾಯ ಮಾಡುವವರೆಲ್ಲರೂ ತಮ್ಮ ಆಯುಧಗಳನ್ನು ಶುಚಿಗೊಳಿಸಿ ಅವುಗಳನ್ನಿಟ್ಟು ಪೂಜೆ ಮಾಡುತ್ತಾರೆ. ನಂತರ ಊರಿನವರೆಲ್ಲಾ ಸೇರಿ ಆಟೋಟ ಗಳ ಸ್ಪರ್ಧೆ ತೆಂಗಿನಕಾಯಿಗೆ ಗುರಿ ಇಟ್ಟು ಗುಂಡು ಹೊಡೆ ಯುವುದು ಮುಂತಾದ ಸ್ಪರ್ಧೆಗಳಲ್ಲಿ ಭಾಗವಹಿಸಿ ಸ್ಪರ್ಧೆ ಯಲ್ಲಿ ಜಯಗಳಿಸಿದವರಿಗೆ ಬಹುಮಾನ ವಿತರಣೆ ಮಾಡು ವರು.

## ಕಾವೇರಿ ಸಂಕ್ರಮಣ

ಶ್ರೀ ಮೂಲ ಕಾವೇರಮ್ಮನ ಪವಿತ್ರ ತೀರ್ಥೋತ್ಸವ ಸಮಯದ ದಿನ ನಡೆಸುವ ಹಬ್ಬ. ಇದು ತುಲಾಸಂಕ್ರಮಣ ದಂದು ನಡೆಯುತ್ತದೆ. ಒಂದು ಕುಟುಂಬದಲ್ಲಿ ಒಬ್ಬನಾದರೂ ಶ್ರೀ ಕಾವೇರಿ ಉದ್ಭವ ಸ್ಥಾನಕ್ಕೆ ಪುಣ್ಯತೀರ್ಥ ವನ್ನು ತರುವುದಕ್ಕೆ ಹೋಗಿ ತೀರ್ಥವನ್ನು ತರುತ್ತಾರೆ ಮನೆಯಲ್ಲಿ ಹಿರಿಯರು ಸತ್ತಿದ್ದರೆ ದೀಕ್ಷೆನಿಂತವರು ಹೆಂಡತಿ

ಸತ್ತಿದ್ದರೆ ಗಂಡನು ಗಂಡ ಸತ್ತಿದ್ದರೆ ವಿಧವೆಯಾದ ಹೆಂಡತಿಯೂ ಭಾಗಮಂಡಲಕ್ಕೆ ಹೋಗಿ ಪುಣ್ಯ ಸ್ನಾನ ಮಾಡಿ ಸತ್ತವರಿಗೆ ಪಿಂಡ ಹಾಕಿ ತೀರ್ಥವನ್ನು ಮನೆಗೆ ತರುತ್ತಾರೆ. ಮನೆಗೆ ತೀರ್ಥವನ್ನು ತರುವುದಕ್ಕೆ ದಿನದ ಹಿಂದಿನ ದಿನ ಗದ್ದೆತೋಟಗಳನ್ನು ಶೃಂಗರಿಸುವುದಕ್ಕಾಗಿ ಬೆತ್ತು ಎಂಬ ಮರದ ಕೋಲನ್ನು ಎಲ್ಲಾ ಗದ್ದೆಗಳಿಗೆ ನೆಟ್ಟು ಬಿತ್ತು ಬಳ್ಳಿ ಎಂಬ ಬಳ್ಳಿಯ ಎಲೆಯಿಂದ ಅಲಂಕರಿಸುತ್ತಾರೆ. ಕುಟುಂಬದ ಏಕಲಿನಲ್ಲಿ ಒಂದು ಬೆತ್ತಿನ ಕೋಲಿನ ಗುಂಪನ್ನು ನೆಟ್ಟುಅಲ್ಲಿ ತುಂಬಾಬೆತ್ತಿನ ಎಲೆಗಳಿಂದ ಶೃಂಗರಿಸಿ ಮನೆಯ ಯಜಮಾನಿ ತೀರ್ಥೋದ್ಭವ ವಾಗುವ ದಿನ ತಯಾರಿಸುವ ತಿಂಡಿ ತಿನಸುಗಳನ್ನು ಬೆತ್ತಿನಿಂದ ಅಲಂಕೃತವಾದ ಕೋಲುಗಳನ್ನು ನೆಟ್ಟಿದರ ಮೇಲೆ ಬಾಳೆಲೆ ಹಾಸಿ ದೀಪ ಹತ್ತಿಸಿ ಗಂಧದ ಕಡ್ಡಿ ಹತ್ತಿಸಿ ನೈವೇದ್ಯವನ್ನು ಇಟ್ಟು ಶ್ರೀ ಕಾವೇರಮ್ಮನನ್ನು ನೆನೆದು ಜೋರಾಗಿ ಕೂಗಿ ಹೇಳುತ್ತಾರೆ. ಶ್ರೀ ಕಾವೇರಿ ತೀರ್ಥವನ್ನು ಮನೆಗೆ ತರುವ ದಿನ ಎಲ್ಲರೂ ಸ್ನಾನಮಾಡಿ ಶುಭ್ರವಾದ ಬಟ್ಟೆಗಳನ್ನು ಧರಿಸಿ ತಂದ ತೀರ್ಥವನ್ನು ಪೂಜೆ ಮಾಡಿ ಮನೆಯವರೆಲ್ಲರೂ ಸ್ವೀಕರಿಸಿ ನೆರೆ ಹೊರೆಯ ವರಿಗೂ ಕಳುಹಿಸಿ ಕೊಡುತ್ತಾರೆ. ಆ ದಿನದಂದು ತಾವು ತಯಾರಿಸಿದ ಭಕ್ಷ್ಯಗಳನ್ನು ಬಂದವರಿಗೆ ದಾನ ಮಾಡು ತ್ತಾರೆ.

## ಹುತ್ತರಿ ಹಬ್ಬ

ಹುತ್ತರಿ ಹಬ್ಬ ಕೊಡಗಿನಲ್ಲಿ ಆಚರಿಸುವ ಸಂಭ್ರಮದ ಹಬ್ಬ. ತಮಿಳು ನಾಡು ಕೇರಳದಲ್ಲಿ ಆಚರಿಸುವ ಓಣಂ ಹಬ್ಬದಂತೆ ಕೊಡಗಿನಲ್ಲಿ ಹೊಸ ಭತ್ತವನ್ನು ಮನೆಗೆ ತೆಗೆದು ಕೊಂಡು ಬರುವ ಸಮಯದಲ್ಲಿ ಆಚರಿಸುವ ಹಬ್ಬ. ಈ ಹಬ್ಬವನ್ನು ಆಚರಿಸಿದ ನಂತರವೇ ಬೆಳೆಕುಯ್ಲಿಗೆ ಪ್ರಾರಂಭ ಮಾಡಬೇಕೆಂಬ ಪದ್ಧತಿ ಹಿಂದೆ ಇತ್ತು. ಆದರೆ ಈಗ ವಿವಿಧ ರೀತಿಯ ಭತ್ತವನ್ನು ಬೆಳೆಯುವುದರಿಂದ ಈ ಕಟ್ಟಳೆಗೆ ಬದ್ಧವಾಗಿರುವುದಿಲ್ಲ. ಹುತ್ತರಿ ಹಬ್ಬದಲ್ಲಿ ಪ್ರತಿಯೊಬ್ಬರೂ ಮನೆಯನ್ನು ಸಾರಿಸಿ ಸುಣ್ಣವನ್ನು ಹೊಡೆದು ಮನೆಯ ಅಂಗಳ, ಓಡಾಡುವ ದಾರಿ, ಭತ್ತದ ಕಣ ಮುಂತಾದವುಗಳನ್ನು ಶುಚಿಗೊಳಿಸಿ ಅಂಗಳ ಕಣಕ್ಕೆ ಸಗಣಿ ಸಾರಿಸಿ ರಂಗೋಲೆ ಬಳಿದು ಶೃಂಗರಿಸುತ್ತಾರೆ. ಮನೆಯನ್ನು ತಳಿರು ತೋರಣ, ಚೆಂಡು ಹೂವಿನಿಂದ ಅಲಂಕರಿಸುತ್ತಾರೆ. ಆಯಾ ಕುಟುಂಬದ ಐನ್‌ಮನೆ (ಮೂಲಮನೆ) ಯಲ್ಲಿ ಸಾಯಂಕಾಲ ಎಲ್ಲರೂ ಸೇರಿ ಫಲಹಾರವನ್ನು ಮಾಡಿದ ನಂತರ ಕುಂಬಳ ಮರದ ಎಲೆ, ಗೇರದ ಮರದ ಎಲೆ, ಮಾವಿನ ಮರದ ಎಲೆ, ಆಲದ ಮರದ ಎಲೆ ಮತ್ತು ಹಲಸಿನ ಮರದ ಎಲೆಯನ್ನು ಒಂದರ ಮೇಲೊಂದು ಇಟ್ಟು ಸುರುಳಿಮಾಡುತ್ತಾರೆ. ಸುರುಳಿಮಾಡುವ ಸಂದರ್ಭದಲ್ಲಿ ಮನೆಯ ಗಂಡಸರೆಲ್ಲಾ ಸೇರಿ 'ಪೊಲಿ ಪೊಲಿಯೇ' ಬಾ ಎಂಬುದಾಗಿ ಜೋರಾಗಿ ಕೂಗುತ್ತಾ ನೆರೆಕಟ್ಟುತ್ತಾರೆ. ಮಕ್ಕಳು ಪಟಾಕಿ ಹತ್ತಿಸಿ ಆನಂದದಿಂದ ಓಡಾಡುತ್ತಿರು ತ್ತಾರೆ. ನಂತರ ಹೊಸ ಬಟ್ಟೆಯನ್ನು ತೊಟ್ಟು ಗ್ರಾಮದ ವರೆಲ್ಲಾ ಸೇರಿ ಕದಿರುತೆಗೆಯುವುದಾದರೆ ದೇವಸ್ಥಾನಕ್ಕೆ ಹೋಗಿ ಕದಿರು ತೆಗೆದುಕೊಂಡು ಬರುತ್ತಾರೆ. ನಂತರ ಮನೆಯ ಯಜಮಾನನು ಕದಿರು ಗುತ್ತಿ ಎಂಬ ಬಿದುರಿನ ಗುತ್ತಿಯನ್ನು ಅಲಂಕರಿಸಿದ ಗುತ್ತಿ ಅಥವಾ ಚೆಂಬನ್ನು ತೆಗೆಯುವುದಕ್ಕೆ ಮೊದಲು ಕುಟುಂಬದ ಅಡಿಗೆಮನೆಯಲ್ಲಿ (ಉಂಬೊಳಗೆ) ಸೇರಿ ದೇವರನ್ನು ಪ್ರಾರ್ಥಿಸಿ ನೆಲ್ಲಕ್ಕಿಗೆ ಅಕ್ಕಿ ಹಾಕಿ ಎಲ್ಲರೂ ಯಜಮಾನ ಯಜಮಾನಿಗೆ ಮರ್ಯಾದೆ ಕೊಡುವುದಕ್ಕಾಗಿ ಕಾಲುಮುಟ್ಟಿ ನಮ ಸ್ಕರಿಸುತ್ತಾರೆ. ಕಿರಿಯರು ಹಿರಿಯರ ಕಾಲನು ಮುಟ್ಟಿ ನಮಸ್ಕರಿಸಿ ಪೊಲಿ ಪೊಲಿಯೇ ಬಾ ಎಂಬುದಾಗಿ ಜೋರಾಗಿ ಕೂಗುತ್ತಾ ಮನೆಯಿಂದ ಹೊರಡುತ್ತಾರೆ. ಗದ್ದೆಯಲ್ಲಿ ಈ ಸಮಯದಲ್ಲಿ ಭತ್ತ ಕದಿರುಹೋಗಿರುತ್ತದೆ ಭತ್ತದ ಗದ್ದೆಯಲ್ಲಿ ಒಂದನ್ನು ಆರಿಸಿ ಮನೆಯ ಯಜ ಮಾನನು ಬೆಳೆಯನ್ನು ಕುಯ್ದು ಕದಿರು ಗುತ್ತಿಯಲ್ಲಿಟ್ಟು ಪೊಲಿ ಪೊಲಿಯೋ ಎಂದು ಎಲ್ಲರೂ ಕೂಗುತ್ತಾರೆ. ಯಜಮಾನನು ಬೆಳೆಯನ್ನು ಕುಯ್ಯುವ ಸಮಯದಲ್ಲಿ ಕೋವಿಯಿಂದ ಗುಂಡನ್ನು ಆಕಾಶಕ್ಕೆ ಹೊಡೆಯುತ್ತಾರೆ ಪಟ್ಟಾಕಿ ಮುಂತಾದವುಗಳನ್ನು ಹೊಡೆಸಿ ಕದಿರನ್ನು ಮನೆಗೆ ತಂದು ಪೂಜೆಮಾಡಿ ಅದರ ಅಕ್ಕಿಯನ್ನು ಈಗಾ ಗಲೇ ತಯಾರಿಸಿದ ಪಾಯಸಕ್ಕೆ ಹಾಕಿ ಮನೆಯ ಹಲವು ಸ್ಥಳಗಳಲ್ಲಿ ಅಟ್ಟಕ್ಕೆ ದನದ ಕೊಟ್ಟಿಗೆಗೆ, ಕಣದ ಗೂಟಕ್ಕೆ ಮುಂತಾದ ಸ್ಥಳಗಳಿಗೆ 'ನೆರೆ'ಯನ್ನು ಕೂಡಿಸಿ ಕಟ್ಟುತ್ತಾರೆ

ಹುತ್ತರಿ ಕಳೆದ ದಿನದಿಂದ ಮೂರು, ಐದು ಏಳು ದಿನಗಳ ವರೆಗೆ ಗ್ರಾಮದಲ್ಲಿ ಕೋಲಾಟ ಮುಂತಾದ ಮನರಂಜನೆಯ ಮೇಳಗಳಿರುತ್ತವೆ. ಹುತ್ತರಿ ಕಳೆದ ಮೂರು, ಐದು ಏಳು ದಿನಗಳಲ್ಲಿ "ಊರುಪರಮೆ" ಎಂಬ ಕಂಬಳದ ಊಟ ವನ್ನು ಊರಿನವರು ಸೇರಿ ನೆರವೇರಿಸುತ್ತಾರೆ.

## ಗೊರವನಿಗೆ ಇಡುವುದು

ಆಹಾರವನ್ನು ಬೆಳೆದರೆ ಸಾಲದು ಅದನ್ನು ಶೇಖರಿಸಿ ದರೆ ಸಾಲದು ಅದನ್ನು ಶೇಖರಿಸಿ ಇನ್ನೊಂದು ಬೆಳೆಬರುವ ವರೆವಿಗೂ ಕಾಪಾಡಬೇಕೆಂಬ ಮುಂದಾಲೋಚನೆ. ಆ ಮುಂದಾಲೋಚನೆಯೊಡನೆ ದೇವರನ್ನು ನೆನೆಯದ ಕಾರ್ಯವಿಲ್ಲ. ಅದೇ ರೀತಿ ಒಕ್ಕಲು ಹಾಕಿ ಬಂದ ಭತ್ತವೇನೂ ಹಾಳಾಗದಂತೆ ಯಾವುದೇ ಹುಳ ಸೇರ ಬಾರದೆಂಬ ನಂಬಿಕೆಯಿಂದ ಹುಳುಗಳ ದೇವರು ಗೊರವ ನಿಗೆ ನೈವೇದ್ಯಯನಿಟ್ಟು ಗೊರವನನ್ನು ಕರೆದು ತಿನ್ನಿಸಿ ಕಣದಿಂದ ಓಡಿಸುತ್ತಾರೆ. ಇದು ಕುಟುಂಬದ ಕೊನೆಯ ಒಕ್ಕಲಿನಲ್ಲಿ ಒಕ್ಕಲಿನಿಂದ ದನಗಳನ್ನು ಬಿಡುವ ಸಮಯ ದಲ್ಲಿ ಹುರಿದ ಅಕ್ಕಿ ಬೆಲ್ಲವನ್ನು ಒಂದು ಕುಡಿ ಬಾಳೆ ಎಲೆಯಲ್ಲಿ ಇಟ್ಟು ತೆಂಗಿನಕಾಯಿಯನ್ನು ಒಡೆದು ಭೇಟಿಯ ಹತ್ತಿರ ಇರುವ ಭತ್ತ ಮತ್ತು ಹುಲ್ಲನ್ನು ಜೊತೆಸೇರಿಸಿ ಹುರಿದ ಅಕ್ಕಿ ಬೆಲ್ಲ ತೆಂಗಿನಕಾಯಿ ಚೂರನ್ನು ಸೇರಿಸಿ ಗಂಟುಕಟ್ಟಿ ಒಂದು ಮರಕ್ಕೆ ಕಟ್ಟುತ್ತಾರೆ. ಕಟ್ಟಿದ ನಂತರ ಕಣದ ಸುತ್ತಲು ಗೊರವನನ್ನು ಕೂಗಿ ಓಡಿಸುವಂತೆ ಓಡಿ ನಂತರ ಗೊರವನ ಪ್ರಸಾದವನ್ನು ಎಲ್ಲರಿಗೂ ಹಂಚುತ್ತಾರೆ ಇದನ್ನು ಗೊರವನಿಗೆ ಕೊಡುವುದು ಎನ್ನುತ್ತಾರೆ.

## ಕಿಡ್ತಾಸ ಹಬ್ಬ

ಒಕ್ಕಲು ಆದನಂತರ ಭತ್ತವನ್ನು (ಲಕ್ಷ್ಮಿಯನ್ನು) ಪೂಜಿಸುವ ಹಬ್ಬ ಕಿಡ್ತಾಸ ಹಬ್ಬವೆಂದು ಹೇಳಬಹುದು ಇದನ್ನು ತುಳು ತಿಂಗಳ ಪೊನ್ನಿ (ಫೆಬ್ರವರಿ) ತಿಂಗಳಲ್ಲಿ ಆಚರಿಸುವರು ಈ ಹಬ್ಬವನ್ನು ಮೂರು ದಿನ ಆಚರಿಸು ವರು ಮೊದಲನೆಯ ದಿನ (ಲಕ್ಷ್ಮಿ) ಭತ್ತ ತನ್ನ ಮನೆಗೆ ಬಂದದ್ದು ಇನ್ನು ಯಾರ ಮನೆಗೂ ಹೋಗಬಾರದೆಂಬ ಭಾವನೆಯಿಂದ ಭತ್ತದ ಕಡಿಕೆಯ ಮೇಲಿರುವ ಭತ್ತದ ರಾಶಿಯ ಮೇಲೆ ಚೂರಿಮರದ ಮುಳ್ಳನ್ನು ಕತ್ತಿ ಮತ್ತು ಕಲ್ಲನ್ನು ಏರುತ್ತಾರೆ. ಇದನ್ನು ತಪ್ಪಿಸಿ ಭತ್ತ ಹೋಗುವು ದಿಲ್ಲವೆಂಬ ನಂಬಿಕೆ. ಅಲ್ಲದೆ ಈ ರೀತಿ ಭಾರ ಹೇರಿದ ಮೂರು ದಿನಗಳವರೆಗೆ ಅಲ್ಲಿಂದ ಭತ್ತವನ್ನು ತೆಗೆದು ಕೊಳ್ಳಬಾರದು. ಎರಡನೆ ದಿನ ಮನೆ ಮತ್ತು ಅಂಗಳವನ್ನು ಸಾರಿಸಿ ಎಲ್ಲರೂ ಶುಭ್ರವಾದ ಬಟ್ಟೆಯನ್ನು ತೊಟ್ಟು ವಿರಾಮಪಡೆಯುವ ದಿನ. ಅಂದಿನ ದಿನ ಕೆಲವರು ಕಾಡು ಮೃಗಗಳ ಬೇಟೆ ಯಾಡುವರು ಇನ್ನು ಕೆಲವರು ಕಾರೆ ಕಾಯಿ ಮತ್ತು ಉಮರೆಬಳ್ಳಿಯನ್ನು ಗುದ್ದಿ ರಸತೆಗೆದು ಬೂದಿ ಮಿಶ್ರಣಮಾಡಿ ನದಿ ಮತ್ತು ತೋಡುಗಳಲ್ಲಿ ಮೀನು ಹಿಡಿಯುವರು. ಇನ್ನು ಕೆಲವರು ಕೋಳಿಯ ಜೂಜಾಟವನ್ನು ಮಾಡುವರು. ಈ ರೀತಿ ಆ ದಿನ ದೈನಂದಿ ನದ ಯಾವ ಕೆಲಸವನ್ನೂ ಮಾಡದೆ ಹಲವಾರು ರೀತಿಯ ಮಾಂಸ ಮೀನಿನ ಊಟ ಮಾಡಿ ಸಂತೋಷದ ದಿನ. ಮೂರನೆ ದಿನ ಇನ್ನು ಮುಂದೆ ಬೇಸಿಗೆ ಕಾಲ ಬರುವುದರಿಂದ ಭೂತಾಯಿ ತಂಪಾಗಿ ಇರಬೇಕೆಂಬ ಭಾವನೆಯಿಂದ ಭೂಮಿಗೆ ಎಣ್ಣೆ ಬಿಡಬೇಕೆಂದು ಮನೆಯ ಅಂಗಳದಲ್ಲಿ ಸಗಣಿಯಿಂದ ಸಾರಿಸಿ ಸಾರಿಸಿದ ಸ್ಥಳದಲ್ಲಿ ರಂಗೋಲೆ ಹಾಕಿ ಎಣ್ಣೆ ಹುಯ್ದು ಅಲ್ಲಿ ಮಸಿ ಚೂರನ್ನೂ, ಸೀಗೆ ಕಾಯಿಯ ಚೂರನ್ನೂ ಕತ್ತಿಯನ್ನು ಇಡುವರು. ಇದರಿಂದ ಭೂತಾಯಿ ಇಷ್ಟುರವರೆಗೆ ಅಶುದ್ಧಳಾಗಿದ್ದುದರಿಂದ ಸ್ನಾನ ಮಾಡಿ ಶುಚಿಯಾಗಿರೆಂಬ ಅಭಿಪ್ರಾಯ. ಈ ರೀತಿ ಕಿಡ್ತಾಸ ಹಬ್ಬವನ್ನು ಮೂರು ದಿನಗಳ ವರೆಗೆ ಆಚರಿಸುವರು.

# "ತಾ ಬೆ ದಾ ರಿ ಕೆ"

ಲೇಖಕರು : ಕೂಡಕಂಡಿರ ಎ. ಪೊನ್ನಪ್ಪನವರು, B.A.,B.L.

[ಶ್ರೀಯುತ ಕೂಡಕಂಡಿರ ಪೊನ್ನಪ್ಪನವರು ಮಡಿಕೇರಿಯ ಯುವಕ ವಕೀಲರು, ಅವರ ಈ ಈ ಕವನ ನಾವು ಇದ್ದೂ ಅನುಭವಿಸದ ಸಂಪತ್ತಿನ ಆವಿಷ್ಕಾರ. ಇದನ್ನವರು ನಮ್ಮ ತಾಯ್ನುಡಿಯಾದ ಅರೆಗನ್ನಡದಲ್ಲಿ ಬರೆದಿದ್ದಾರೆ. ಇದೊಂದು ದಿಟ್ಟ ಹೆಜ್ಜೆ. ಅರೆಗನ್ನಡದಲ್ಲಿ ಸಾಹಿತ್ಯ ನಿರ್ಮಾಣ ಅಪರೂಪ. ಶುದ್ಧ ಹಳೆಗನ್ನಡ ಪದಗಳಿಂದ ಕೂಡಿರುವ ಅದರಲ್ಲಿ ಕೆಲವೊಂದು ಗ್ರಾಮ್ಯ ಪದಗಳು ಸೇರಿದ ಮಾತ್ರಕ್ಕೆ ಅದನ್ನು ಅರೆಗನ್ನಡವೆನ್ನಲು ಕಾರಣವೇನೊ? ನಮ್ಮ ನುಡಿಯ ಪದಗಳನ್ನು ಸಾಹಿತಿಗಳಾದವರು ಬಳಸುವುದರಿಂದ ಕನ್ನಡ ನುಡಿ ಹೆಚ್ಚು ಸಂಪನ್ನವಾಗಬಹುದಲ್ಲವೆ? ಈ ದಿಶೆಯಲ್ಲಿ ಮುನ್ನಡೆ ಅಗತ್ಯ. ಈ ಕವನದಲ್ಲಿ ಶ್ರೀಯುತರು ನಮ್ಮ ತಾಯ್ನುಡಿಯ ಮಾಧುರ್ಯವನ್ನು ಹೊರಸೂಸಿದ್ದಾರೆ. ಇದನ್ನು ಬರೆದು ಅವರು ಈ ಸಂಚಿಕೆಗೆ ಮೆರಗಿತ್ತಿದ್ದಾರೆ; ತನ್ನತನವನ್ನು ಗಳಿಸಿಕೊಟ್ಟಿದ್ದಾರೆ. ಇವರು ಈ ತಾಬೆದಾರಿಕೆಯಲ್ಲದೆ ಹಿಂದಿನ ಸಂಚಿಕೆಯಲ್ಲಿ ಕೊಡಗಿನ ಬೆಡಗು, ಬಡವರ ಬಾಳು, ಮಿಲನ ಮತ್ತು ಮಲೆನಾಡ ಹೆಣ್ಣು ಎಂಬ ಪದ್ಯಗಳನ್ನು ರಚಿಸಿ ಪ್ರಕಟಗೊಂಡಿವೆ.

—ಸಂ.]

ದೊಡ್ಡವಗೊಂದು ಪಟ್ಟೆದಾರಿಕೆ
ಸಣ್ಣಂವಗೊಂದು ತಾಬೆದಾರಿಕೆ
ಕೊಡೆಕಣ್ಣಗೊಂದು ಪಾಲ್‌ದಾರಿಕೆ
ಕೊಯಿಲೆ ಮಾಸಿಗೊಂದು ಓಡುಗಾರಿಕೆ ॥ ೧ ॥

ರೂಪಾಯಿ ಮನುಷ್ಯಂಗೆ ದೊಡ್ಡಗಾರಿಕೆ
ಸಿಪಾಯಿ ಮನುಷ್ಯಂಗೆ ಎದೆಗಾರಿಕೆ
ದೊಡ್ಡಂವನಾನ್ ಸಣ್ಣಂವ ನೀನ್
ಹಂಗೆ ಹೇಳುವ ದೌಲುಗಾರಿಕೆ ॥ ೨ ॥

ಮಾಳಿಂದ ಹೊರ್‌ಟ್ ಮಟಮಟ ನೋಡುವ
ಬರಿಮಾನಿಗೊಂದು ಯಜ್‌ಮಾನಿಕೆ
ಕುರಿಗಳ ಹಂಗೆ ಜೈ ಜೈ ಹೇಳುವ
ತರತರ ಮನುಷ್ಯಂಗೆ ಗಂಡ್‌ಗಾರಿಕ್ಕೆ ॥ ೩ ॥

ಕಾರವನಂಗೆ ಜಗಳಕ್ಕೆ ಬಂದ್
ಇಲ್ಲದ ಸಲ್ಲದ ಕೇಡ್‌ನ ತಂದ್
ಊರುನ ದೇಶನ ಹಾಳ್ ಮಾಡುದು
ಮನುಷ್ಯನ ಅಂತ್ಯಕೆ ಇರುವ ಕೇಡ್‌ಗಾರಿಕೆ ॥ ೪ ॥

ಮೊರಟಿ ಮಿಾನಿಗೊಂದು ರಾಜಗಾರಿಕೆ
ಕುರುಟು ನ್ಯಾಯಗಾರಂಗೆ ಸುಭೆದಾರಿಕೆ
ಎಸ್‌ಂಡ್ ಹಿಡಿಕೆ ಕಪ್ಪೆಕೋಲು ಹಾಕುವ
ಕಸ್‌ಂಡ್ ಮಕ್ಕಳಿಗೆ ಪೋಲಿಗಾರಿಕೆ || ೫ ||

ಹುತ್ತೇರಿ ಹಬ್ಬಲಿ ಪಿಟಾಕಿ ಹೊಡ್‌ಸಿ
ಪೊಲಿ ಪೊಲಿ ಹೇಳುದು ಢಂಭಗಾರಿಕೆ
ಕೊಯಿಲೆ ಮಿಾನ್‌ಗೆಯಿಪುಗೆ ಒಣ್‌ಗಿಲ್‌ರೊಟ್ಟಿ
ಹಾಕ್‌ಂಡ್ ತಿಂಜೊದು ಕುಷಿಗಾರಿಕೆ || ೬ ||

ರಬ್ಬರ್ ಬಿಲ್ಲ್‌ನ ಕೈಯಿಲಿ ಹಿಡ್‌ದ್
ಎರಡ್ ಜೋಬಿಗೆ ಕಲ್ಲ್ ತುರಕಿ
ಕಾಡ್‌ನ ಕಡೆಗೆ ಬೇಟೆಗೆ ಹೋದು
ನಮ್ಮೂರು ಮಕ್ಕಳ ಆಟಗಾರಿಕೆ || ೭ ||

ಕಾಡ್‌ಲಿ ನೋಡಿರೆ ತೆಕ್ಕಟೆಕೋಟಿ
ಗದ್ದೆಲಿ ನೋಡಿರೆ ಕುಂಡಾಕೋಳಿ
ರಬ್ಬರ್ ಬಿಲ್ಲಿಗೆ ಹೆದ್‌ರದ ಹಕ್ಕಿ
ತಲೆ ಹಾರುದು ನೀ ಕುದ್ದರೆ ಸೊಕ್ಕಿ || ೮ ||

ಊರೊವು ಎಲ್ಲಾ ಗೇನಾವಮಾಡಿ
ಬೇಟೆಮಾಡಿಕೆ ಒಟ್ಟಾಗಿ ಕೂಡಿ
ಮೂರುದ್ದ ಕೇಪು ಕೋವಿನ ಹಿಡ್‌ದ್
ಕಾಡಿಗೆ ಹೋದು ಬೇಟೆಗಾರಿಕೆ || ೯ ||

ಹೂಡಿಕೆ ಮೂರ್ತ ಮಾಡೋಕುತ್ತೇಳಿ
ಹೂಡೇವು ಎಲ್ಲಾ ಒಟ್ಟಿಗೆ ಕೂಡಿ
"ಬಿಸು" ಹಬ್ಬಲಿ ಎತ್‌ಕ್‌ಟ್ಟುದು
ಎಲ್ಲವುಕ್ಕಿರುವ ರೈತಗಾರಿಕೆ || ೧೦ ||

ಮಾಣಿಕ ಎತ್ತ್‌ನ ಬಲಕ್ಕೆ ಕ್‌ಟ್ಟಿ
ಕ್‌ಯರ್ಣ್ಣ ಎತ್ತ್‌ನ ಎಡಕ್ಕೆ ಬಿಗ್‌ದ್
ಕೈಯ್ಯಲಿ ನೆಕ್ಕಿ ಕೋಲು ಹಿಡ್‌ದ್
ಹರಹರ ಹೂಡುದು ಭೂಮಿಗಾರಿಕೆ || ೧೧ ||

ಅಪ್ಪನು ಮಂಜನು ಹೂದುದು ನೋಡು
ಅವ್ವ ಬುತ್ತಿ ತಾದು ನೋಡು
ಹುಲ್ಲುಕಂತೆ ತಕ್‌ಂಡ್ ಬಾದು
ಅವ್ವಂಗೆ ಇರುವ ಕೆಲಸಗಾರಿಕೆ || ೧೨ ||

ಹಸ್‌ನೆಕ್ಕಿ ಪೊಜ್ಜಿ ಪೊಕ್ಕಳ ರೊಟ್ಟಿ
ಚೊಂಬುಲಿ ತುಂಬಾ ಬಿಸಿಬಿಸಿ ಕಾಪಿ
ಗದ್ದೆ ಪುಣಿಲಿ ಕುದ್ದ್‌ಕ್‌ಂಡ್ ತಿಂಜೊದು
ಹೂಡೊವುಕ್ಕಿರುವ ಪಾಲ್‌ಗಾರಿಕೆ || ೧೩ ||

ನಾಟಿ ಆದಂಗೆ ಕೈಲ್‌ಪೋದು ಹಬ್ಬ
ಕೊಯಿಲ್ ಕೆಲಸ ಆದಂಗೆ ಕಿಡ್ದಾಸ ಹಬ್ಬ
ತೋಡಿಗೆ ಮದ್ದ್ ಹಾಕುದು ಮರ್‌ಲ್
ಕಾತೆಕಾಯಿ ಗುದ್ದುದು ನೋಡಿಕೆ ಪೊರ್‌ಲ್ || ೧೪ ||

ಕುಸ್‌ಲಕ್ಕಿ ಗ್‌ಂಜಿಗೆ ಕ್‌ಂಯುಳಿ ಪೊಜ್ಜಿ
ಅರ್‌ದ್ ಕೊಡುದು ನಮ್ಮ ಅಜ್ಜಿ
ಬೇಸಿಗೆ ಕಾಲಲಿ ಉಂಜೋದಂದರೆ
ಎಲ್ಲವುಕ್ಕಿರುವ ಕುಷಿಗಾರಿಕೆ || ೧೫ ||

ಕೊಮ್ಮೆಲಿ ಇದ್ದರೆ ಒಣಗಿಲ್ ಮಿಾನ್
ಸುಮ್ಮನೆ ಇರ್‌ಕೆ ಆದು ಏನ್ ?
ಮೊತ್ತಿಮಿಾನ್‌ನ ಹಾಕಿರೆ ಒಲೆಗೆ
ತಡೆಕೆ ಆಕಿಲೆ ವಾಸನೆ ನಿಮ್‌ಗೆ || ೧೬ ||

ಮೊದುವೆ ಅಂದರೆ ಮಕ್ಕಳಿಗ್ಹಬ್ಬ
ತಿಂದ್‌ಮಕ್ಕಳ ಹೊಟ್ಟೆಲ್ಲಾ 'ಗಬ್ಬ'
ವಾಲಗ ಸದ್ದ್ ಆದರೆ ಸಾಕ್
ನಾಯಿಗ ಮನೆಸುತ್ತೆಷ್ಟ್ ಬೇಕ್ ? || ೧೭ ||

ಹಾಸಿಗೆ ಅಡಿಲಿ ಸುರಾಲ್ ಮಡ್‌ಗಿ
ಇಸ್ತಿರಿ ಆಕುತ ಅದರ್‌ಲಿ ಮಲಿಗಿ
ಬೆಳ್‌ಕ್‌ನ ಹಬ್ಬಲಿ ಹಾಕಿದೆ ನೋಡಿ
ನೆಗೆ ಆಪ್‌ದೊ ನನ್ನನೇ ನೋಡಿ || ೧೮ ||

ಕೋಲೇಜ್ ಗೂಡೆಗ ಸುರಾಲ್ ಹಾಕಿ
ಕ್ಣ್ಣಿಗೆ ಕ್ಪ್ಪು ಕನ್ನಡಿ ವ್ಡ್ಗಿ
ಹೈಡನು ಗೂಡೆನು ಕೈ ಕೈ ಹಿಡ್ದ್
ಸಿನೇಮಕ್ಕೆ ಹೋದು ಲೋಲುಗಾರಿಕೆ || ೧೯ ||

ದೇವುರು ಮಾಡಿದ್ ಹಳ್ಳಿಲಿ ಉಟ್ಟು
ಮನುಷ್ಯರ್ ಮಾಡಿದ್ ಪೇಟೆಲಿ ಉಟ್ಟು
ದೇವರ ಸೃಷ್ಟಿಗೆ ಮೇಲಾದ್ ಉಟ್ಟೋ ?
ಹಳ್ಳಿಗೆ ಮೇಲಾದ ಜೀವನ ಉಟ್ಟೋ ? || ೨೦ ||

ಚಟ್ಟಿಲಿ ಉಂಡ್ ಬದ್‌ಕಿರೆ ಅಂದ್
'ಓಟು'ಗೆ ಅಧಿಕಾರರ್ ಇಂದ್
ಭಾರತದೇಶದ ಪ್ರಜೆಗೆಳಿಗಿಂದ್
ಇರುವ ದೊಡ್ಡ ಹಕ್ಕ್‌ದಾರಿಕೆ || ೨೧ ||

ಪೇಟೆಲಿ ಇರ್ದು ನಾಟಕರಂಗ
ಹೊಟ್ಟೆಪಾಡಿಗೆ ಅದೆಷ್ಟೋ ಬಂಗ
ಕ್ಟ್ಟ್‌ಹೊತ್ತ್ ತಂದರೆ ನಾವು
ಪಟ್ಟೆದಾರಿಕೆ ಮಾತಿಗೆ ನೀವು || ೨೨ ||

ಅನ್ನಕೊಟ್ಟ್ ಪುಣ್ಯ ಪಡ್‌ದರೆ
ಅಳಿಯ ಸಿಕ್ಕುದುತ ಡಂಭಗಾರಿಕೆ
ಹಣಗಾರಂತ ಲೊಟ್ಟಾಸ್ ಬಿಟ್ಟ್
ಸಲಾಂ ಬೇಡುದು ದುಂಡುಗಾರಿಕೆ || ೨೩ ||

"ಮಿಣುಪುಳಿ" ಬೆಳ್‌ಕ್ಂದ ಬೊಳ್‌ಪಾತ್ತೇಳುದು
ಮಿಣ್‌ಪುಳಿಗೊಂದು ಹುಚ್ಚುಗಾರಿಕೆ
ಊರೆಲ್ಲಾ ಸುತ್ತಿ ಬಡಾಯಿ ಕೊಚ್ಚುವ
ಮೂಢ ಮನುಷ್ಯನ ಬಂಡಗಾರಿಕೆ || ೨೪ ||

ಅರೆಭಾಷೆಲೊಂದು ಪದ್ಯ ಬರೆಕುತ
ತರತರ ಹೇಳ್ದೋ ವೊಂಣಪಣ
ಸರಸರ ಪೆನ್ ತೆಗ್‌ದ್ ಬರ್ದೋ
ಕೂಡಕಂಡಿ ಪೊಂನಪಣ || ೨೫ ||

ಹುಟ್ಟುಭಾಷೆನ ಗಟ್ಟಿಯಾಗಿ ಆಡಿಕೆ
ಬೇಡಪ್ಪ ಯಾರ ತಾಬೆದಾರಿಕೆ
ನಮ್ಮದ್ದೆಲ್ಲಾ ಭಾಷೆ ಅರೆಭಾಷೆ ಕೇಳಿ
ಕನ್ನಡ ನಾಡ್‌ನ ಹಳೆಭಾಷೆ || ೨೬ ||

ಹುಟ್ಟಿದ್ ಕನ್ನಡ ಬೆಳ್‌ದದ್ ಕನ್ನಡ
ಸಾಯದು ಕನ್ನಡ ನಾಡ್‌ಲೇ
ಹುಟ್ಟಿಕೆ ಸಾಯಕೆ ಅಪ್ಪಣೆ ಬೇಡ
ಮಕ್ಕಳ ಓದಿಸಿಕೆ ಮರಿಬ್ಯಾಡ || ೨೭ ||

ಅವ್ವನ ಅಪ್ಪನ ಗೇನ ಮಾಡ್ದಂಗೆ
ದೇಶನ ಭಾಷೆನ ಮರಿಬ್ಯಾಡ
ಕುಲುಗುರು ನಮ್ಮ ವೆಂಕಟರಮಣನ
ಎಂದಿಗೂ ನೀನ್ ಮರಿಬ್ಯಾಡ || ೨೮ ||



# ದ್ಯಾಪುನ ಗದ್ದೆಗೋರಿ

ಲೇಖಕರು : **ಹೊದ್ವೆಟ್ಟ ಭವಾನಿ ಶಂಕರ್**, ಬೆಂಗಳೂರು.

---

ದ್ಯಾಪುನ ಗದ್ದೆ ಗೋರಿ ಇಂದ್
ಹೇಳ್ತ್ ನಿನ್ನೆ ಮನೆಗೆ ಬಂದ್
ಎರ್‌ಡ್ ಜೋಡ್ ಎತ್ತ್‌ನ ನೀವು
ಹೂಡಿಕೆ ತೊಡೊಕುಂತ

ಒಪ್ಪಿದೆ ಅಕ್ಕ್ ಕೊಟ್ಟನೆ ಎತ್ತ್
ಗೋರಿಲ್ಯಾಕ್ ಬಿತ್ತ್‌ನ ಬಿತ್ತ್
ಹಂಗೆ ಹೇಳಿ ಕೊಟ್ಟೆನಾ ಎತ್ತ್
ಗದ್ದೆನೆ ದೊಡ್ಡ್‌ದ್‌ಂತ

ಎತ್ತ್ ಹೊಡ್ಕಂಡ್ ಹೋದೆ ನಾನೆ
ಹೇಳ್ದ್ ಹೆಣ್ಣ್‌ಗ್ ನೀನು ಬಾನೆ
ಗದ್ದೆ ಗೋರಿ ನೋಡ್‌ಸಿ ತದ್
ಬ್‌ರಿ ಲ್ಯಾಕ್‌ಂತ

ಹೊರ್‍ಟತ್ ಹೆಣ್ಣ್ ನನ್ನಂದ ಮುಂದೆ
ಮೇಪತಹೈದನು ಬಾತ್ ಹಿಂದೆ
ಇಬ್ಬೊರು ಬಂದೊ ದ್ಯಾಪ್ರನ ಗದ್ದೆ
ಗೋರಿ ನೋಡಿಕೆಂತ

ಎತ್ತ್‌ಗ ಬಂದೋಕೊ ಬಾರಿ ಇಂಪ್
ಬೇಗ ಬೇಗ ಎಲಾಡ್ಕೆ ತಿಂಗ್
ಹೂಟಿಸಿ ಬೇಗಂತ ಹೇಳ್ತ್ ದ್ಯಾಪು
ಹೊತ್ತ್‌ನು ಆತ್‌ಂತ

ಇಪ್ಪತ್ತ್ ಜೋಡಿ ಎತ್ತ್‌ಗ ಮುಂದೆ
ಹತ್ತ್ ಜೋಡಿ ಕೋಣಂಗ ಹಿಂದೆ
ಮುವತ್ತ್ ಜೋಡಿ ಹೂಡಿವೆ ನೋಡಿ
ಎಷ್ಟೊಂದು ಲ್ಯಾಕ್‌ಂತ

ಕಟ್ಟೆದ ಹೊಳಿ ಎರ್‌ಡ್ ಮುಕ್ತ್
ನನ್ನ ಎತ್ತ್‌ಗೆ ಬಾರಿ ಸುಸ್ತ್
ಪೊಲ್ಗಿತ್ ಅಲ್ಲೆ ಕಂಪಲಿ ನೇಗಿಲ್
ಎಳಿಕೆ ಬೊತ್ತ್‌ಂತ

ಅಂಡಲಿ ಎಳ್ಕ್ವೊ ಹಿಂದೊಂದು ಬರೆ
ಕಾಯರ ಕೋಲ್‌ಲಿ ತೊಡೆಗೆ ಬರೆ
ಬಂದದೆ ಬಾಯಲಿ ಬೆಳ್ಳಗೆ ನೊರೆ
ಎಂತ್‌ದ್ ಆಗುಟುಂತ

ತಿಂದುಟು ಕಂಡದೆ ಕಾಯರ ಕಾಯಿ
ಅದ್ಕೆ ಕಂಡದೆ ಬುಟ್ಟದೆ ಬಾಯಿ
ಡ್ಯಾಪು ಹೇಳ್ತ್ ಬೀಲದ ಬುಡಕೆ
ಮುಳ್ಳ್ ಮೊಡ್ಗಿಂತ

ಜೆನಿಯ ತಾತ್ ಮುಳ್ಳ್‌ನ ಹೊರೆ
ಮಾಡಿತೆ ಮುಂದೆ ಬೀಲಕಿಸಿರೆ
ಗುತ್ತ್ ತೆಗ್ದ್ ಓಡ್ತ್ ಎತ್ತ್
ಎಂತ ಜೋರ್‌ಂತ

ಒಟ್ಟಿಗೆ ಓಡ್ತ್ ಮೇಪತ ಹೈದ
ಹಿಡ್ದ್ ಶಂಬಂತ ಅವಂಗೆ ಬ್ಯೊದೊ
ಬಂದ್ ಹೇಳ್ತ್ ಹಿಡಿಕೆ ಹೋದರೆ
ಕುತ್ತಿಕೆ ಬಂದದೆಂತ

ಹೋಗಲಿ ಎತ್ತ್ ಬೇಡ ಬುಡಿ
ಇದ್ದವು ನೀವು ಪೊರ್ಬ್ಲಲಿ ಹೂಡಿ
ದ್ಯಾಪು ಹೇಳ್ತ್ ಬನ್ನಿ ಈಗ
ಕಾಪಿ ಕುಡಿಕೆಂತ

ಬೇಸಿದ ಗೆಳ್ಸ್ ಮೂಡೆ ಹಿಟ್ಟ್
ಹಾಲ್ ಹಾಕದ ಕಾಪಿನು ಇತ್ತ್
ಸೀರ್ತುಂಡು ಸೆಡ್ಲ್ ಮಾಡಿ ಹೊಡ್ಡೊ
ಒಬ್ಬೊಬ್ಬ ಎಷ್ಟ್ಂತ

ಬಾಳೆ ಬುಡಲಿ ಕುದ್ದವುಕೆಲ್ಲ
ಒರ್ಲೆ ಪಿಜಿನ್ ಕಚ್ಚಿಕನ ಮೆಲ್ಲ
ಕೆಬಿಗೆ ಸೆಕ್ಕಿದ ಬೀಡಿ ಹೊತ್ತಿಸಿ
ಹೂಡಿಕೆ ಹೊರ್ಟೊಂತ

ರಟ್ಟೆದ ಜೋಳ್ ಮೈ ತುಂಬುಟ್ಟ್
ಸರಿ–ನಡೆಕೆ ಆಡುಲೆ ಕಣ್ಣಿನು ಬುಟ್ಟ್
ಕೊಟ್ಟವೆ ದನಿ ಆದರು ಇಡಿ
ಬೊಯ್ಲ್ಗೆ ಕೇಳುಕುಂತ

ಹೂಡ್ಯಾತ್ ಹೇಂಗೊ ಗದ್ದೆಗಳೆಲ್ಲ
ಜೋಡೆತ್ ಎಂಟಕೆ ಹಲೆಗೆ ಮೆಲ್ಲ
ಕಟ್ಟಿದ್ ಕೊಟ್ಟರೆ ದೊಡ್ಡ ದನಿ
ಹೋದವೆ ಹೆಂಗೆಂತ

ಹೂಡಿ ಬುಟ್ಟಿ ಎತ್ತ್‌ಗಳೆಲ್ಲ
ಮಾಸಿ ಕುಡಿಕೆ ಕೊಟ್ಟ್‌ಮೆಲ್ಲ
ಹುಲ್ಲ್ ಪೊಪ್ಪುಗೆ ಹೊಪ್ದ್‌ಬುಟ್ಟೊ
ಹುಲ್ಲ್ ಮೇಯೆಕೆಂತ

ಹಲೆಗೆ ಅಲ್ಲಿ ಮೆಟ್ಟವೆ ನೋಡಿ
ಎತ್ತ್‌ಗ ಹೋದವೆ ಹೆಂಗೆ ಓಡಿ
ಒಂಟಿಕಾಲ್ ಹಲೆಗೆಲಿಸಿ
ಹೆಂಗೆ ಓಡ್ಸಿವೆಂತ

ಪ್ರೋರ್ಸ್‌ಲಿ ಎತ್ತ್‌ಗ ಓಡಿವೆ ಓ....ಹೋ....
ಬಿದ್ದೋತ್ ಒಬ್ಬ ಕೆಳಿಗೆ ಹೋ ಹೋ....
ಆದರು ನಿತ್ತವೊ ಎತ್ತ್‌ಗ ನೋಡಿ
ಓಡಿವೆ ಹೆಂಗೆಂತ

ಹಲೆಗೆ ಕಟ್ಟಿದ್ ಆತ್ ಓಡ್ಸಿ
ಇನ್ನ್ – ನೊಂಬ ಸೇಗಿಲ್ ಬಿಚ್ಚಿ ಓಡ್ಸಿ
ದ್ಯಾಪು ಹೇಳ್ತ್ ಈಗ ನೋಡೊ
ಯಾರ್‌ದ್ ಗೆಲ್ಲುದುಂತ

ಓಡ್ದ ನನ್ನ ಎತ್ತ್‌ನ ತರ್ಸಿ
ಹೇಳ್ದಿ ಮತ್ತೆ ಗದ್ದೆಲಿ ಬೆರ್ಸಿ
ಹಂಗೆ ಬೆರ್ಸಿರೆ ನನ್ನದೆ ಮುಂದೆ
ಗೊತ್ತುಟು ಬಾದುಂತ

ಎತ್ತ್‌ಗ ನಿತ್ತೊಳೊ ಸಾಲಾಗಿ ಬೇರೆ
ನನ್ನೆತ್ತು ನಿತ್ತ್‌ತ್ ಮಾಡಿಕಂಡ್ ಸೆರೆ
ಓಡ್ಸಿದೊ ನೋಡಿ ಕುತ್ತ ಬೀಲ
ನನ್ನದೆ ಮುಂದೆಂತ

ಇನ್ನ್ ಓಡಿವೆ ಬಂದ ಜನಂಗ
ಕಂಪದ ಗದ್ದೆಲಿ ಓಡಿಕೂ ಭಂಗ
ಆದರು ನಿತ್ತೊಳೊ ಓಡಿಕೆ ನೋಡಿ
ದೊಡ್ಡೊವು ಸಣ್ಣವುಂತ

ಮುಂದೆ ಬಂದವಂಗಡ್ಕೆನೂರು
ಎರಡ್ಣೆವಂಗಿರ್ದು ಜೆಂಡ ಮೂರು
ಓಡ್ದೊ ಕಂಪಲಿ ಮೊಗ್ದ್ ಮುಳ್ಂಗಿ
ಹೇಳ್ದು ಎಂತಕೆಂತ

ಬಿತ್ತಿದೊ ಜನಂಗ ಕೆಲವು ಸೇರಿ
ಕಾಯರ ಗೆಲ್ಲ್‌ನ ಗದ್ದೆಲಿ ಊರಿ
ಗದ್ದೆಗೆ ಕೈ ಮುಗ್ದೊ ಒಳ್ಳೆ
ಪಸಲ್ ಕೊಡೊಕುಂತ

ದ್ಯಾಪುನ ಗದ್ದೆ ಗೋರಿ ಮುಕ್ತ್
ಕೆಲವು ಕೆಲ್ಲ ಉಂಡ್ ಬೊತ್ತ್
ಕಡೆಗೆ ಎತ್ತ್ ಹೊಡ್ಕಂಡ್ ಹೊಟ್ರೋ
ಗೋರಿ ಕಳ್ತ್‌ಂತ

## ಅಜ್ಜಿ ಸಾಂಕಿದ ಮಂಜ......ಆಕಿಲೆ

ಲೇಖಕರು : **ಶ್ರೀ ಹೊದ್ದೆಟ್ಟಿ ಭವಾನಿ ಶಂಕರ್**

ಅಜ್ಜಿಕ ಸಾಂಕಿದ ಮಕ್ಕಳ ಸಂಗತಿ
ಬರೆಕುಂತ ನಂಗೊಂದು.ಮನಸ್ಸಾಗಿ
ನೆನ್ಸಿಕಂಡಿರಿಕನ ನೆನ್ಪಿಗೆ ಬಾತ್
ಬರ್ದೇ ಬುಟ್ಟಿನ ಹಾಂಗಾಗಿ

ಊರ್‌ನ ಶಾಲೆಲಿ ಇರಿಕನ ಮುಂದೆ
ಅಂದ್‌ನಾ ಶಾಲೆಗೆ ಮಾಸ್ಟ್ರಾಗಿ
ಬೆಳ್ಳಂದೂರ್‌ಗೆ ಹೋಕುಂತಾತ್
ಊರ್‌ನ ಶಾಲೆಂದ ವರ್ಗಾಗಿ

ಬೆಳ್ಳಂದೂರ್‌ಲಿ ನನ್ನೊಂದು ದೋಸ್ತಿ
ಉಟ್ಟುಂತ ನಂಗಲ್ಲಿ ಗೊತ್ತಾಗಿ
ಕೆಲವರ ಕೇಳಿದೆ ನರ್ಕಾಸುರನ
ಮನೆಗೆನ ಹೋಕು ಎಲ್ಯಾಗಿ

ರೋಟ್‌ಂದ ಕೆಳಗೆ ಗುಂಡಿಲಿ ಇದ್ರ್
ನರ್ಕಾ ಸುರದಾ ಮನೆ ಹೋಗಿ
ಹೇಳಿದೊ ಯಾರೊ ದಾರಿನ ನಂಗೆ
ಹೋದೆನ ಅಲ್ಲಿಗೆ ಕುಸಿಯಾಗಿ

ಸಂಗತಿ ಹೇಳ್ದೆ ನರ್ಕಾಸುರಂಗೆ
ಬಂದೆನ ಇಲ್ಲಿಗೆ ವರ್ಗಾಗಿ
ಸಾಲೆಗೆ ಹೋಕೆನ ಇರಿಕೆನು ಬುಟ್ಟುತ್
ನರ್ಕಾಸುರಮನೆ ನಂಗಾಗಿ

ನರ್ಕಾಸುರಂಗೆ ಮಕ್ಕೊಳು ಏಳ್
ಆರ್ ಜನನೂ ಅವು ಹೆಣ್ಣಾಗಿ
ಪುಣ್ಯಕೆ ಹುಟ್ಟಿತ್ ಒಡ್ಕದ ಕೂಸ್
ನರ್ಕಾಸುರಂಗದ್ ಗಂಡಾಗಿ

ಮಕ್ಕಳ ಅಪ್ಪನ ಅಪ್ಪಂಗೆ ಆಗ
ಎಪ್ಪತ್ ವರ್ಸನು ಪ್ರಾಯಾಗಿ
ಬೆನ್ನನು ಬಿಗ್ಗಿತ್ ಕೆಪ್ಪಟಿ ನೆಗ್ಗಿತ್
ಬಾಯಿಂದ ಹಲ್ಲೆಲ್ಲಾ ಉದುರ್‍ಯೋಗಿ

ಒಡ್ಕದ ಕೂಸ್‌ನ ಸಾಂಕುದು ಅಜ್ಜಿ
ಕೂಸ್‌ನ ಕಂಡ್‌ದ್ ಕುಸಿಯಾಗಿ
ಕೂಸುನು ಕೂಡಾ ಲ್ಯಾಕ್‌ಲಿ ಬೆಳ್ತ್
ಅಜ್ಜಿನ ಪೋಂಶಟ ಹೆಚ್ಚಾಗಿ

ತುಂಬಿತ್ ಕೂಸ್‌ಗೆ ಆರ್‌ನೆ ವರ್ಸ
ಆದರೂ ಅಜ್ಜಿಗೆ ಕೊಂಡಾಟ
ಸಾಲೆಗೆ ಸೇರ್ಸಿಕೆ ಹೊರ್ಟರೆ ಕೂಸ್
ಅಣ್‌ಂಗಿಕೆ ಹತ್ತುದು ಮನೆ ಅಟ್ಟ

ಅಜ್ಜಿನೆ ಬುತ್ತಿನ ಕಟ್ಟಿದ್ ಕೊಟ್ಟರೆ
ಹೊರ್ಟದೆ ಸಾಲೆಗೆ ಹೋನೆಂತ
ಹಲ್‌ಸ್‌ನ ಮಾಯನ ಮರಕೊಡಿಹತ್ತಿ
ಬುತ್ತಿನ ಬಿಚ್ಚಿ ಉಂಬೊದುಂತ

ಹಿಂಬತ್ ಬಾಕನ ಕಾಡ್‌ಂದ ಮನೆಗೆ
ಹಕ್ಕಿನು ಐದಾರ್ ಚೀಲಲಿಂತ
ಓದಿಕೆ ಕೊಟ್ಟೆಲ ಪುಸ್ತಕ ಎಲ್ಲಾ
ಎಲ್ಲೋ ಕಾಡ್‌ಲಿ ಹಾಕುದಂತ

ಅಪ್ಪನು ಅವ್ವನು ಬ್ಯೊದರೆ ಸಾಕ್
ಕಲ್ಲೇ ತೆಗ್ದಿಂವ ಕೊಡಿದುಂತ
ಆದರು ಅಜ್ಜಿಗೆ ಬೇಜರ ಇಲ್ಲೆ
ಹೊಗೊಳುದು ಪಿಳ್ಳೆನ ದೇವುರುಂತ

ಅಪ್ಪನೆ ಮಂಜನ ಓದಿಕೆ ಹೇಳಿರೆ
ಅಜ್ಜಿನ ಹಕ್ಕಲೆ ಓಡುದುಂತ
ಒರ್‌ಲ್ಗೆ ಗುಂಡ್‌ಕಲ್‌ಲ್ನ ಹುಡ್ಕಿ
ಅಡ್ಕೆನ ಅಜ್ಜಿಗೆ ಗುದ್ದಿಕೆಂತ

ಹಿಂದೆನ ಮನೆಗಿಂವ ಯಾಗೊಳು ಹೋದು
ಮಕ್ಕಳ ಒಟ್ಟೆಗೆ ಆಡಿಕೆಂತ
ಮಕ್ಕಳ ಕಯ್ಯಿಲಿ ತಿಂಬಕೆ ಇದ್ದರೆ
ಎಳ್ಕಂಡ್ ಬಾದಿಂವ ಅಜ್ಜಿಗೆಂತ

ಕಾಯಿನ ಬೆಲ್ಲನ ಬೆಸೆಗೆಂದ ಕದ್ದ್
ಪಿಳ್ಳೆಗೆ ಅಜ್ಜಿನೆ ತಿನ್ಸುದುಂತ
ಹಾಂಗಾಗಿ ಅಜ್ಜಿನ ಕಂಡರೆ ಸಾಕ್
ಪಿಳ್ಳೆಗೆ ಬಾರೀ ಒಳ್ಳೆದ್‌ಂತ

ಅಜ್ಜಿನ ಗಂಟ್‌ಂದ ಬಿಚ್ಚಿದ್ ಕೊಡ್ದು
ಚಿಲ್ಲರೆ ದುಡ್ಡೆನ ಪಿಳ್ಳೆಗೆಂತ
ಒಂದಿನ ಅಜ್ಜಿನ ಗಂಟ್‌ನೆ ಹೊತ್ತ್‌ತ್
ಗೊತ್ತ್‌ಲೆ ಈಗಂವ ಎಲ್ಲಿಟುಂತ

ಅಂದ್‌ನ ಕಾಲಲಿ ಮಕ್ಕಳ ಕೆಡ್ಸುದು
ಜನಂಗೆಲ್ಲ ಹೇಳಿವೆ ಅಜ್ಜಿಂಕಂತ
ಇಂದ್‌ನ ಅಯ್ಯೆಕೆ ಕೆಡ್ಸಿವೆ ಕೇಳೊವು
ಗೊತ್ತ್‌ಲೆ ನಂಗದ್ ಯಾಕೆಂತ

ಮಂಜಣೆ ಮಾಡಿ ಮಕ್ಕಳ ಸಾಂಕಿರೆ
ಮುಂದೆಗೆ ಆದವು ಹೀಂಗೆಂತ
ನಡ್ದೊಂದು ಕಥೆನ ಬರ್ದೊಳೆ ಇಲ್ಲಿ
ಎಲ್ಲೊವೂ ಇದರಾ ಓದೊಕುಂತ



## ಜೋ ಮ ಣ ನ ಕೋ ಳಿ ಕ ಟ್ಟೆ

ಲೇಖಕರು : **ಹೊದ್ದೆಟ್ಟ ಭವಾನಿ ಶಂಕರ್**

ಕೋಳಿ ಕಟ್ಟಲಿ ಬಾರಿ ಬಿರ್ಸ ಕಾಗಡೆ ಜೋಮಣ
ನಾ ಹೇಳ್ನಿ ಕೇಳಿ ಅವನ ಕೋಳಿ ಕಟ್ಟದ ಗಾಜಿನ

ಅವನ ಊರ್‌ಲಿ ಇರುವ ಮನೆಲಿ ಅವಂದೆ ಲ್ಯಾಕ್‌ದ್ ।
ಆದರು ಮಾಡ್ ಮೂಲೆಲಿ ಒಟ್ಟೆ ನೀರು ಸೋರುದು ॥
ಜೋಮಣನ ಕೆಲ್ಸ ವರ್ಷ ಇಡೀ ಕೋಳಿ ಸಾಂಕುದು
ಕೋಳಿನ ಕುದ್ಕ ಹೊರ್ದುಂತ ಕಟ್ಟಿಟು ಗೂಡುನು
ಪೊರ್ಲ್ಲದು ॥

ಮನೆಗೆ ಒತ್ತ ಇರ್ದು ಅವನ ಗೂಡ್ ಕೋಳಿದ್
ಅದರ್ಲಿ ತುಂಬ ಕೋಳಿಗಿರುವೊ ದೊಡ್ಡದ್ ಸಣ್ಣದ್
ನುಚ್ಚಿ ದಡ್ಡ್ ಭತ್ತ ಕೊಟ್ಟ್ ಕೋಳಿ ಸಾಂಕುದು ।
ರೆಂಕೆ ಅಡಿಂದ ತೋಪ್ರ್ಪ್‌ಳ್ ಕಿತ್ತ್ ಗರ್ವನು ಬರ್ಸುದು
॥ ಕೋಳಿ ॥

ಅವಂಗೆ ಕೋಳಿ ಕಟ್ಟದ ಹುಚ್ಚಿ ಯಾಕೆ ಬೇಕ್‌ಯಾ ।
ಅವನ ಕೋಳಿ ಸತ್ತರೆ ಮಾಸ ಒಂದ್ ಹಾನಿಯಾ ।

ಲಾಕಿ ಗಿಡಿಯ ಕಡ್ಪೈ ಬೆಳ್ಳಿನ ಗೂಡ್‌ಲ್ಲಿ ಕೂಡುದು |
ಮಂಜಳ ವೈಪ ಉರಿಯ ಕಕ್ಕೆನ ಗೂಟಕೆ ಕಟ್ಟುದು
|| ಕೋಳಿ ||

ಅವನ ಕೋಳಿನ ಕಟ್ಟಕೆ ತಂದರೆ ಹಾರಿ ಮೆಟ್ಟಿಕಿಲೆ
ಎದ್‌ರ್ ಕೋಳಿ ಮೆಟ್ಟರೆ ಇವಂಡ್ ಓಡದೆ ಬುಡಿಕೆಲೆ
ಚೋಮಣನ ಕೋಳಿ ಕಟ್ಟದ ಸಂಗತಿ ಹೇಳಿ
ಮುಗೆಕಿಲೆ
ಚೋಮಣ ಕೋಳಿ ಸಾಂಕುದು ಮತ್ತೆ ಎಂತಕೆ
ಗೊತ್ತ್‌ಲೆ || ಕೋಳಿ ||

ಆ ಜುಟ್ಟೆ ಇಲ್ಲದ ಕಕ್ಕೆ ಕೋಳಿ ಇವಂಗೆ ಮೆಟ್ಟದೆ
ಮತ್ತೆ ಯಾಕೆ ಇಂವ ಕೋಳಿಗಳ ಜುಟ್ಟ್‌ನ
ಕೊಯ್ದದೆ |
ಉರಿಯ ಕಕ್ಕೆ ಕಡ್ಪೈನಿವಂಗೆ ಕಂಡರೆ ಆದುಲೆ |
ಮಂಜಳ ವೈಪ ಬೆಳ್ಳೆಗೆ ಸರಿ ತಿಂಬಕೆ ಲ್ಲೊಕೊಡಟಲ್ಲೆ ||

ಮನೆಂದ ಕೆಳೆಗೆ ಕೆರೆಂದ ಆಚೆ ಮಜಲ್ ಗದ್ದೆಲಿ |
ನಡಿದು ವರ್ಸ ಕೋಳಿಕಟ್ಟ ಬಾರಿಗಾಜಿಲಿ |
ಹಂಗೆ ನಡಿವ ದೊಡ್ಡ ಆ ಕೋಳಿ ಕಟ್ಟಕೆ
ಕಮ್ಮಿ ಇಲ್ಲೆ ತಾವ ಕೋಳಿಗ ಒಂದು ನೂರಕೆ ||
ಕೋಳಿ ||

ಮೊನ್ನೆ ಬಿಸುಗೆ ಮುಂದೆ ನಡ್ದ ಕೋಳಿ ಕಟ್ಟಕೆ
ಹೇಂಟೆನ ಚೋಮಣ ಅಂದಾಜಿ ಮಾಡ್ತ್ ಅಲ್ಲಿ
ಮೆಟ್ಟಸಿಕೆ |
ಹರ್ತ ಇದ್ದ ಮೊಸ್ತ ಬಾಳಾನ ಹೇಂಟೆಗೆ ಕಟ್ಟಿತ್ |

ಕೆಂಪು ಮುಂಡಾಸ್ ಕಟ್ಟಿ ಕೋಳಿ ಕಟ್ಟಕೆ
ಹೊರ್‌ಟತ್ || ಕೋಳಿ ||

ಮೆಟ್ಟಕೆ ತಂದ ಕಟ್ಟದ ಕೋಳಿಗ ಕೂಂಗುದು
ಕೇಳೊಕು |
ನೋಡಿಕೆ ಬಂದ ಸಣ್ಣ ಮಕ್ಕೆಲ್ಲ ಹೆದ್‌ರಿ ಓಡೊಕು ||
ಎಲ್ಲರ ಕೋಳಿಗ ಕೂಂಗುದು ಕೇಳ್ದೆ ಇವಂದ್
ಸುದ್ದಿಲ್ಲೆ |
ಎಲ್ಲರ ಕೋಳಿಗೆ ಜುಟ್ಟನು ಉಟ್ಟು ಇದ್ಕೆ ಏನಿಲ್ಲೆ ||
|| ಕೋಳಿ ||

ಯಾದೊ ಒಂದರ ಹಿಡ್ದ್ ನೋಡಿ ಒಪ್ಪಿತ್
ಮೆಟ್ಟಸಿಕೆ |
ಕೈಂದ ಹೇಂಟೆನ ಬುಟ್ಟು ಹೇಳ್ತ್ ಹಾರಿ ಮೆಟ್ಟದಕೆ ||
ಎಲ್ಲಿಗೆ ಮೆಟ್ಟುದು ಹೇಂಟೆ ಪಾಪ ಓಡ್‌ತ್
ಬೊತ್ತದ್‌ಕೆ |
ಅಲ್ಲಾ ! ಇವನ ಕೋಳಿ ಕಟ್ಟಕೆ ಹೇಂಟೆನ
ತಾದೇಕೆ || ಕೋಳಿ ||

ಕಟ್ಟದ ಸಂಗತಿ ಚೋಮ್ಣಂಗೆ ಗೊತ್ತ್‌ಲೆ ಅಲ್ಲನೆ
ಮುತ್ತಣ್ಣ ?
ಅಲ್ಲಿ–ದೊಡ್ಡ ಮನೆವು ಮೆಟ್ಟ್‌ಸುತಿದ್ದೊ ಇವಂದ
ಲ್ಯಾಕಣ ||
ಅಂದ್‌ನ ಕೋಳಿ ಕಟ್ಟಕೆ ಹೋಗಿ ಸೋತತ್
ಚೋಮಣ |
ಓಡುವ ಹೇಂಟೆನ ನೋಡ್ತ್ ಕಣ್ಣ್ ಬುಟ್ಟು
ಮಣ ಮಣ || ಕೋಳಿ ||

# ಮೋಟಿ ಗೂಡೆನ ಮದುವೆ

ಲೇಖಕರು : **ಹೊದ್ದೆಟ್ಟ ಭವಾನಿ ಶಂಕರ್**

---

ಮೇಗಡೆ ಮನೆ ಮೋಟಿ ಗೂಡೆಗೆ
ಮದುವೆ ಉಟ್ಟುಗಡ
ಮದುವೆ ಕಾಗದ ಕೊಟ್ಟ್ಯೊಳೊ ನಂಗೆ
ನಾನು ಹೋಕಡ

ಮದುವೆ ಕಾಗದ ಕೊಟ್ಟುಕ್ಯೊಂಡೋಗೊಳೊ
ಕಂಡೊವು–ಕೆಲ್ಲಗಡ
ಮದುವೆಗೆ ಕಂಡಿತ ಬಂದವೆಂತೇಳಿವೆ
ಬಾರಿ ಜನಗಡ॥ ಮೇಗಡೆ ॥

ಚಪ್ಪರ ಹಾಕೊಳೊ ಇಜ್ಜಿಲ್ ಉದ್ದಕೆ
ಮಡ್ಕ್ಯನ ಮಡ್ದ್‌ಗಡ
ಮನೆಗೆ ಸಾರ್ಣೆ ಮಾಡಿಕಂಡೊಳೊ
ಬಾರಿ ಲ್ಯಾಕಡ

ಮೋಟಿ ಗೂಡೆಗೆ ಮಣಿಸರದೆ
ಮೂಕುತಿ ತೆಗ್ದೊ ಗಡ
ಮದುವೆಗೆ ತೆಗ್ದೊ ಸೀರೆ
ಬಾರಿ–ಭಾರಿ ಕ್ರಯಗಡ ॥ ಮೇಗಡೆ ॥

ಕೊಟಿಗೆ ಹಿಂದೆ ಹಂದಿ ಬೊಡ್ದ್
ಹಜಿರ್ ಮಾಡಿವೆ
ಗಡಗಡಾಂತ ಒಳಿಗೆ ಹೆಣ್ಣ್‌ಗ
ಮೆಣ್ಸ ಕಡ್ಡವೆ

ಕೊಟಿಗೆ ಸೋಡ್ರೆ ಹಿಟ್ಟ್ ಪಾಯಿಸ
ಕೆಲವು ಮಾಡಿವೆ
ಹುಂಞ ಜನಂಗ ಅಂಡೆಂಡ ಕುಡ್ಸುಗೆ
ಗಂಜಿ ತೋಂಡಿವೆ ॥ ಮೇಗಡೆ ॥

ಸುಮ್ಮನೆ ಇದ್ದವೊ ಮಕ್ಕಸೋಡಿ
ಅಟ್ಟಕೆ ಹತ್ತಿವೆ
ಸಣ್ಣ ಮಕ್ಕೆಲ್ಲ ಅವರ ನೋಡಿ
ಕಿರ್ಚಿ ಮರ್ಟ್ಯವೆ

ಅದ! ಗನ್ರ್ನಾಲ್ ಜೇಂಡ್ ಕೇಳ್ದಿ
ಬಂದದೆ ದಿಬ್ಬಣ
ಗೂಡೆಗ ಒಳಿಗೆ ಪಾನಕ ಮಾಡಿವೆ
ಅಂಡೆ ಗಣ ಗಣ ॥ ಮೇಗಡೆ ॥

ಇಜ್ಜಿಲ್ ಕೊಡಿಲಿ ನೀರ್ ಕೊಟ್ಟವೆ
ದಿಬ್ಬಣ ಬಂದೊವುಕೆ
ಚಪ್ಪರವಡಿಲಿ ಹಾಸ್ಯೊಳೊ ಮಂದ್ರಿ
ಅವುಕೆ ಕುದ್ರಿಕೆ

ಕುದ್ದವುಕೆ ತಂದ್ ಹೈದಂಗ ಕೊಟ್ಟವೆ
ಪಾನಕ ಕುಡಿಯೆಕೆ
ಕುದ್ದವೆ ತುಂಬ ಬೊಚ್ಚಿಟು ಪಾಪ
ಜೇಂಡ್ ಹೊಡಿಯುವುಕೆ ॥ ಮೇಗಡೆ ॥

ಮೊದು ಮಂಜ ಕುದ್ದುಟು ಮಂಡಾಸ್‌ಕಟ್ಟಿ
ಅಡೋಳಿ ಪಕ್ಕಕೆ
ಹತ್ತ್ ಗಂಟೆನು ಅತ್‌ಂತೇಳ್ದೊ
ಎಧ್ರಿಸಿ ಮೂರ್ತಕೆ

ಗೂಡೆನ ಕರೆಕೆ ಹೋದರೆ ಈಗ
ಗೂಡೆ ಎಲ್ಯುಟು
ಸಣ್ಣ ಗಂಡಂವ ಬೇಡಂತೇಳಿ
ಗೂಡೆ ಅಣೆಗಿಟು ॥ ಮೇಗಡೆ ॥

ಇನ್ನ್ ಎಂತ್‌ದ್ ಒಪ್ಪುಸಿಂತೇಳ್ದೊ
ಬೇರೆ ಗೂಡೆನ
ಗೂಡೆನ ಅಪ್ಪ ಬೇಜಾರ್ಲಿ ಹೇಳಿವೆ
ಎಂತ್‌ದ್ ಮಾಡ್ದುನಾ

ಯೂರೊ ಕೇಳ್ದೊ ಕುದ್‌ಕಂಡಿದ್ದ
ಆ–ಪೊನ್ನಿ ಗೂಡೆಗೆ
ಗಂಡನ ಬುಟ್ಟ ಗೂಡೆ ಅದ್
ಒಪ್ಪಿತ್ ಮೊದುವೆಗೆ ॥ ಮೇಗಡೆ ॥

ಅದ್ಕೆ ಏನ್ ಇಂತ ಮೊದುವೆ
ಅಂದೆ ಕಳ್ದ್‌ಟು
ಹೆಂಗು ಇರ್‍ಲಿ ಇವರ ಪುಣ್ಯ
ಇಂದ್ ಒಪ್ಸಿಟು

ಪೊನ್ನಿ ಗೂಡೆ ಹೋಗಿ ನಿತ್ತ್‌ತ್
ತಾಳಿ ಕಟ್ಟಿಸಿಕೆ
ಗಂಡ್ ತಾಳಿ ಕಟ್ಟಿಯಿ ಬುಟ್ಟತ್
ಜೊತ್ತದ ಕಷ್ಟಕೆ ॥ ಮೇಗಡೆ ॥

ಮೊದುವೆ ಅಂತು ಕಳ್ದ್ ಉಂಡ್
ಜನಂಗ ಹೋದೊಯಾ
ಮೋಟ ಗೂಡೆ ಹಿಂಗೆ ಮಾಡ್ದೆಂತ
ಯಾರಿಗೆ ಗೊತ್ತುಟುಯ

ಮೊದ್ವೆಗೆ ಬಂದ ಜನಕೆ ಎಲ್ಲ
ಬೇಜರ ಆಗುಟು
ಅಲ್ಲಾ–ಮೋಟ ಮೊದುವೆನಾಂಗೆ
ನಡ್ದ ಕಥೆನು ಎಲ್ಯುಟು ॥ ಮೇಗಡೆ ॥



## ಅಂಗರನ ಪಂಜಿ ಬೋಂಟೆ

ಲೇಖಕರು : : ಹೊದ್ದೆಟ್ಟ ಭವಾನಿ ಶಂಕರ್

ಪುಲ್ಯೆಕಾಂಡೆ ಲಕ್ಕ್‌ತ್ ಯಾನ್
ಕಂಡತ್ ಬರಿಟೆ ಪೋನಗ ಕೇನ್
ಕಾಡ್ ಪಂಜಿಳು ಕಂಡೊಡ್ತು ಬಲ್ತೊ
ಯೆನ್ನನ್ ತೂನಗ

ಕಂಡೊನು ಮಾಂತ ತಿಂದ್‌ದ್ ತೂಲ
ಈಯೊಡು ಬಾರ್ ತಿಕ್ಕುಜ್ಜಿದಾಲ
ಅಯ್ಯೊ ಎಂಕ್ ತೂಯಿನ ಆ ಪುಜ್ಜ
ಮಲ್ಲುನ ದಾನೆಗ

ಅಂಗರ ಸಿಕ್ಕ್ ಪನ್ಪೆ ಒಂಜಿ
ತೂನಗ ಎಂಕ್‌ಲ ವೊತ್ತುಂಡು ಬಂಜಿ
ಬಲ್ಲದೆನಿಟ ಪಂಡ್‌ತ್ ಬೆಡಿನ್
ದೆಪ್ಪಾತ್ ಕೊರ್ಪೆಗ

ಕೇಪುತ ಬೆಡಿ ತೂಲಯ ಇಂದು
ಗುಂಡುನ್ ಪಾಡ್ತೆ ದಿಂಜಿದ್ ಉಂಪು
ಕಟ್ಟ್‌ಲ ಬೆಡಿ ಪಂಜಿಳು ಬರ್ಪುನ
ಸಾದಿನ್ ತೂತ್‌ಗ

ಪಂಜಿಳು ಬರ್ಪುನಸಾದಿನ್‌ತೂತ್
ಅಂಗರ ಬೆಡಿನ್ ಕಟ್ಟ್‌ದ್ ಪೋತ್
ಕುಳ್ಳಿಯೆ ಅಳ್ಪ ಗುಡ್ಡೆತ ಮಿತ್ತ್
ಸುತ್ತ ಬಲ್ಲೆಗ

ಕತ್ತಲೆ ಆಂಡ್‌ಂದ್ ಪಂಜಿಳು ಬತ್ತ್
ಏಪೊಲ ಪೋಪಿನ ಸಾದಿಟ್ ಜತ್ತ್
ಅಂಗರ ಕಟ್ಟ್‌ನ ಬಳ್ಳಿಗ್ ಪಂಜಿಳು
ದಾಂಟೊಂದ್ ಪೋನಗ

ಅಡ್ಕ್‌ಂಡ್ ಗುಂಡ್ ಕಟ್ಟ್‌ನ ಬೆಡಿ
ಪಂಜಿಲ ತಿಕ್ಕುಂಡು ಎಂಕೊಂಜಿ ಬುಡಿ
ಎಂದ್‌ದ್‌ಗ್ರೈತ್ ಆಡೆಗ್ ಪೋದ್
ಅಂಗರ ತೂನಗ

ದಿಂಜಿನ ಗುಂಡ್ ದಿಂಚಿದೆ ಉಂಡು
ಬೆಡಿಟ್ ಕೇಪು ಪುಡಾತ್ ಪೋಂಡ್
ಇಂದೆನ್ ತೂದ್ ಅಂಗರಗಿತ್ತೆ
ಬೇಜರಾಂಡ್‌ಗ

ದಿಂಜಿನ ಮುರ್ವ್ ಗುಂಡ್‌ನ್ ತೂಯೆ
ಬುಕ್ಕೊಂಜಿ ಕೇಪುನ್ ಆಡೆಗ್‌ದೀಯೆ
ತರೆಟ್ ಲೈಟ್ ಕಟ್ಟ್‌ತ್ ಪೆರ್ಪ
ಕಾಡ್‌ಗ್ ಪೋನಗ

ಮಲ್ಲ ಕಾಡವು ಅಯಿಟ್‌ಪಂಜಿ
ಲೈಟ್ ಬೊಳ್ಪುನೆ ತೂನಗ ಒಂಜಿ
ಮಲ್ಲ ಕುಳ್ಳ್‌ತ್ ಕೊತ್ತ್‌ದೇರ್ತ್
ಗುಂಡ್ ಪಾಡ್ಯೆಗ

ಕೇಪುತ ಬೆಡಿ ವೊಟ್ಟ್‌ಂಡ್ ತೂಲಿ
ಅಂಗರೆ ರಟ್‌ತ್ ಒಲ್ಪ ಉಲ್ಲೆ
ಇಂಬೈ ಬೂರ್ತೆ ಪಾಪ ತಿರ್ತ್
ಮಲ್ಲ ಗುಂಡಿಗ

ಕೈಟ್ ವ್ಯೈಟ್ ಗಾಯಲಾಂಡ್
ಕೆಬಿಲ ಒಂಜಿ ರಟ್ಟ್‌ತ್ ಪೋಂಡ್
ಸೊಂಟಗ್ ಕೈ ಕೊರ್‌ತ್ ಮಲ್ಲ
ಲಕ್ಕ್‌ತ್ ಪೋಯೆಗ

ಬೋಡ್ಜಿ ಎಂಕ್ ಬೆಡಿತ ಸುದ್ದಿ
ಇಂದೆಟ್ ಬತ್ತ್‌ಂಡ್ ಎಂಕೊಂಜಿ ಬುದ್ದಿ
ಎಂದ್‌ದ್ ಮಲ್ಲ ಪೋತ್ ಬಡಿನ್
ದನಿಗ್ ಕೊರ್ಯೆಗ



# ಆಣ್ ಅವು ಪೊಣ್ಣು

ಲೇಖಕರು : ಶ್ರೀ ಹೊದ್ದೆಟ್ಟಿ ಭವಾನಿ ಸಂಕರ್

ಕುಡ್ಲತೂರ್‌ಟ್ ತೂಯಿ ಒಂಜಿನ
ಆಣ್ ಸಾದಿಟ್ ಪೋಪಿನ
ಟೈಟ್ ಪೇಂಟ್‌ಗೆ ಸೂಟ್ ಆವುನ
ಶರ್ಟ್ ವೈಕವು ಅಂಟ್‌ನ

ನಡಕೆ ಇತ್ತ್ಂಡ್ ಪೋಪಿನಾಯಿನ
ತೂನಗವು ಬಜಿ ಪೊಣ್ಣುನ
ಹೇಟ್‌ಲಿಕ್ಕೊನೆ ತರೆಟ್ ಇತ್ತ್ಂಡ್
ಕೂಜಲ್ ಬರ್ಚಿದ್ ಸುತ್ತಿನ

ದೋಸ್ತಿ ಕೇಂಡೆ ಕಾರ್‌ಟೆತ್ತಿನ
ಮೊಟ್ಟು ಆಯಿನ ತೂಯನಾ ?
ಯಾನ್ ದಾನೆಂದ್ ತೂನಗಾಯಿ
ಪಾಡಿ ಜೋಡ್‌ಲ ಪೊಣ್ಣುನ

ಅವೆನ್ ತೂದ್ ಆಶ್ಚರ್ಯೊದ್
ಕೇಂಡೆ ಅಪಗನೆ ದೋಸ್ತಿನ

ಇಂಚಿ ಕೋಲೊನು ಕಟ್ಟುದುಪ್ಪುನ
ಆಣೊ ಪೊಣ್ಣವು ಒಂಜಿನ ?

ಬೀಸ ಬೀಸ ನಡೊಶೊ ಎಂಕುಳು
ತೂವಂತೆ ದಂಟುನ ಬೂರುನ
ತೂನ ಗಾಯೆನ ಕೈಟ್ ಇತ್ತ್ಂಡ್
ವಾಚ್ ಅವುಲಾ ಪೊಣ್ಣುನ

ಕಡತ್‌ದಾಯೆನ ತೂಯಿ ಎದುರ್‌ಡ್
ಬೊಟ್ಟು ಮುಂಡೊಡು ಇತ್ತಿನ
ತೆರಿಂಡ್ ನಂಕ್ ತ್ತೈ ಮಾಂತತೂದ್
ಪೊಣ್ಣು ಅವು ಬುಕ್ಕೆಂಚಿನ ?

ಕಷ್ಟ ಆಪುಂಡು ಗುರ್ತಪತ್ಯೆರ
ಕುಡ್ಳತಾ ಈ ಪೊಣ್‌ಳೆನ
ತೆರಿಯಂಡೆಕವು ಪೊಣ್ಣುಳತ್ತೆತ
ದಾಯೆಗಿಂಚವು ಮಳ್ಪುನಾ ?

# ದಾಯೆ ಪೋಡಿಪಯಾ

ಬರೆದವರು : ಹೊದ್ದೆಟ್ಟು ಭವಾನಿ ಶಂಕರ್

ಬದುಕ್‌ಟ್ ಬಾರಿ ಕಷ್ಟಲ ಬರ್ಪುಂಡುದು
ಬೂಳ್ಪನೆ ದಾಯೆ ಈ ಮಾರಾಯ
ಬತ್ತಿನ ಕಷ್ಟನು ತುಂಬ್ಯರ ತೀರಂದೆ
ಬುಳ್ತುಂಡ ಬಾರಿ ಹೇಸಿಗೆಯಾ

ಪುಟ್ಟಿನ ಸೈಪುನ ಮಾಂತಲ ಮಾಳ್ಪನ
ಕಾಪುನ ಮಲ್ಲ ದೇವೆರ್‌ಯಾ
ದೇವೆರ ಮಹಿಮೆನ್ ದಾಸೆಂದ್ ಕುಳ್ಳುದು
ಈ ಒಂಜಿ ಪನಿತ್ ಗ್ರೈಪುಲಯಾ

ನರಮಾನಿ ಜಲ್ಮೊಡು ಬತ್ತಿನ ಬುಕ್ಕೊ
ಕಷ್ಟ ಸುಖ ಮಾತಲ ತಿಂಬೊಡಿಯಾ
ದಾಯ್ತೊಂಜಿ ತೆರಿಯಾಂಡೆ ಕುಳ್ಳೊಂದು ಇತ್ತ್‌ಂಡ
ಜೀವನೊಡು ಸಾರ ಬರ್ಪುಜಿಯಾ

ದೇವೆರ್ ಕೊರಾಂತ್ನವು ನರಮಾನಿ ಮಾಳ್ಪನ
ಸತ್ಯದ ಪಾತೆರ ಅಂದ್‌ಗೆಯಾ

ವಾ ಒಂಜಿ ಕೆಲ್ಸೊನು ಬುಡಾಂದೆ ಈ ಮಾಳ್‌ತ್ಂಡ
ಖಂಡಿತವಾದವು ಆಪುಂಡಿಯಾ

ನರಮಾನಿ ತೆರಿಯಾಂತ್ನ ಬೇಲೆಳು ಮಾತ
ದೇಸೊಟು ಒಂಜಿಲ ಇಜ್ಜಿಗೆಯಾ
ದಾಸೊಂಜಿ ಬೇಲೆನ್ ಮಾಳ್ಪೊಡುಂದಾಂಟಲ
ದೇವೆರ ಕೃಪೆಲಾ ಬೋಡುಗೆಯಾ

ಎಂಚಿನ ವಿದ್ಯೆಲ ಕಲ್ತ್ಂಡ ಆವು
ದುಷ್ಟೆರ ಸಂಗ ಈ ಸೇರಡಯಾ
ದುಷ್ಟೆರ ಸಂಗೊಗು ಸೇರ್‌ದ್ ಬರ್ಪುನ
ಕಷ್ಟೊನು ಬುಕ್ಕೊ ಈ ತುಂಬಡಯಾ

ಧರ್ಮನು ಬುಡಂದೆ ಕಾತೊಂದು ಪೋಂಡ
ದೇವೆರ್ ಪ್ರತಿ ಫಲ ಕೊರ್ಪೆರ್‌ಯಾ
ಕಂಡೊಡು ಬೆಂದ್‌ದ್ ಉಣ್ಪುನೊ ಮಾತ್ರ
ಏಪಲ ದುಂಬುಗು ಮರೆಪಡೆಯಾ

# ಗಾದೆಗಳು

ಸಂಗ್ರಹಕಾರರು : ಶ್ರೀಮತಿ ಸೂದನ ಚಿಣ್ಣಮ್ಮನವರು, ಆಲೂರು, ಸಿದ್ದಾಪುರ

---

1) ಅಂಗ ಇಲ್ಲದವಂಗೆ ಮಂಗನ ಚೇಷ್ಟೆ
2) ಅಹಂಕಾರಕ್ಕೆ ಉದಾಸೀನ ಮದ್ದ್
3) ಕೊಣೆಕಾಗದ ಸೂಳೆಗೆ ಅಂಗಳ ಡೊಂಕ್
4) ಅಣ ಸತ್ತರೆ ಅಮವಾಸ್ಯೆ ನಿಂತಡೆಯಾ ?
5) ಏರ್‌ದವ ಇಳಿಯುದು
6) ಅಲ್ಪ ವಿದ್ಯೆ ಕಲ್ತವಂಗೆ ಮಹಾಗರ್ವ
7) ಬರಿ ಕೈಲಿ ಮೊಳ ಹಾಕಿದಂಗೆ
8) ಪ್ರಾಯಬಾಕನ ನಾಯಿ ಸಹ ಲಾಯಿಕ್
9) ಭಕ್ತಿ ಇಲ್ಲದೆ ಮುಕ್ತಿ ಇಲ್ಲೆ
10) ಕೊಡುದು ಒಂದು ಕಾಸ್ ತೊಂಬರ ತುಂಬ ಹಾಸ್
11) ಇಬ್ಬರ ಜಗಳ ಮೂರನೆಯವಂಗೆ ಲಾಭ
12) ಕಷ್ಟಕ್ಕೆ ಆದವ ನೆಂಟ
13) ಕೇಡ್ ಬಗೆದರೆ ಕೇಡ್ ತಪ್ಪಿಕಿಲ್ಲೆ
14) ದುಡ್ಡು ಇದ್ದವ ದೊಡ್ಡಪ್ಪ
15) ಕಳ್ಳನ ಹೆಜ್ಜೆ ಕಳ್ಳಂಗೆ ಗೊತ್ತು
16) ನಯ ಇದ್ದರೆ ಭಯ ಇಲ್ಲೆ
17) ಸತ್ಯಕ್ಕೆ ಸಾವಿಲ್ಲೆ
18) ಹಾಸಿಗೆ ಇದಷ್ಟ್ ಕಾಲ್ ನೀಂಡ್
19) ಮುಟ್ಟೆ ತಿಳ್‌ಕಣದೆ ಮಾತಾಡ್‌ಬೇಡ
20) ಗಾಳಿ ಬಂದಂಗೆ ತೂರಿಕ
21) ಉರಿ ಇಲ್ಲದೆ ಹೊಗೆ ಹೋತ
22) ಕಂಕುಳಲ್ಲಿ ದೊಣ್ಣೆ ಕೈಲಿ ಶರಣು
23) ಅವರ ಮನೆ ದೋಸೆ ತೂತು ನಮ್ಮ ಮನೆ ಕಾವಲಿ ತೂತು
24) ಓದಿ ಓದಿ ಕೆಟ್ಟ ಕೋಚ ಭಟ್ಟ
25) ಉಪಕಾರ ಮಾಡ್ದವಂಗೆ ಉಪದ್ರ
26) ಬೆಳ್ಳಂಗಿರುದೆಲ್ಲಾ ಹಾಲಲ್ಲ
27) ಸಂಪಾದಿಸುದು ಒಬ್ಬ ತಿಂಬದು ಇನ್ನೊಬ್ಬ
28) ಅಲ್ಪರ ಸಂಗ ಅಭಿಮಾನ ಭಂಗ
29) ಬಗ್ಗಿದವಂಗೆ ಇನ್ನೊಂದು ಗುದ್ದು
30) ಉತ್ತರನ ಶೌರ್ಯ ಒಲೆ ಮುಂದೆ

---

# ನೀತಿ ನುಡುಗಟ್ಟುಗಳು

ಸಂಗ್ರಹಕಾರರು : **ಕುಮಾರಿ ಸೂದನ ಜಯ**, ಅಲೂರು ಸಿದ್ದಾಪುರ

1) ಕೆಟ್ಟವನ ಸಹವಾಸಕ್ಕಿಂತ ಒಬ್ಬನೆ ಇರುವುದು ಲೇಸ್
2) ದೀರ್ಘ ಆಯುಸ್ಸಿಗೆ ಸಂತೋಷವೇ ಕಾರಣ
3) ಇದ್ದದ್ದರಲ್ಲಿ ತೃಪ್ತಿಪಡುವವನೇ ಧನಿ
4) ಸ್ಥಿರ ಬುದ್ದಿಂದ ಕಷ್ಟನ ಜೈಸಕ್
5) ಶಕ್ತಿಗಿಂತ ಯುಕ್ತಿ ಮೇಲ್
6) ಪ್ರಾಯ ಇರ್‌ತಾನಕ ತಿರ್‌ಗಿ ಕಳೆದರೆ ಮುಪ್ಪಾಕನ ಭಿಕ್ಷೆ ಬೇಡಿಕಾದು
7) ಬಂದದೆಲ್ಲ ಬರಲಿ ನೀನ್ ಮಾಡುವ ಕೆಲಸ ಮಾಡ್
8) ಬೇರೆವ ಹಾಳಾಗಲಿಂತ ಕುಸಿ ಪಡಬೇಡ
9) ಕಷ್ಟಪಟ್ಟರೆ ಸುಖ ಉಟ್ಟು
10) ಹಸ್ ಆದರೆ ರುಚಿ ಬೇಡ
11) ದಯೆ ಇರುವವ ದೊರೆಗಿಂತ ಮೇಲ್
12) ಸತ್ಯದ ಕೆಲಸ ಶಾಶ್ವತ
13) ವ್ಯಸನ ಇಲ್ಲದವನೇ ಇಲ್ಲಿ
14) ಅಪಮಾನಕ್ಕಿಂತ ಸಾಯುವುದೇ ಲೇಸ್
15) ಇರುದರನ ಕಳ್‌ಕಣಬೇಡ ಇಲ್ಲದಕ್ಕೆ ಆಶೆ ಪಡ್ ಬೇಡ
16) ಜ್ಞಾನ ಇಲ್ಲದವಂಗೆ ಸಿಟ್ಟು ಜಾಸ್ತಿ
17) ಸ್ನೇಹಿತನ ಯೋಗ್ಯತೆ ಕಷ್ಟ ಕಾಲಲಿ ತಿಳಿಯದು
18) ಇಳಿಯ ಕಾಕನ ತುಂಬಾ ಗ್ಯಾನ ಮಾಡ್
19) ಮನಸ್ ಅನುಭವ ತನಸ್ಟಕ್ಕೆ ನಾನೆ ತಂತ್ ಕಂಡದೆ
20) ಸಾಲ ಮಾಡ್ಲೂಬೇಡ ಸಾಲತಕ್ಕಂಬದೂ ಬೇಡ

———

# ಗಾ ದೆ ಗ ಳು

ಸಂಗ್ರಹಕಾರರು : ನೀರುಂಪಾಡಿ ದೇವಪ್ಪ, ರಾಮಚಂದ್ರ ಹೆಚ್. ಎಂ. ಟಿ. ಬೆಂಗಳೂರು

1) ಎಮ್ಮೆ ಮೇಲೆ ಮಳೆ ಹೊಯ್ದಂಗೆ
2) ಮನೆಗೆ ಮಾರಿ ಊರಿಗೆ ಉಪಕಾರಿ
3) ಉಪ್ಪು ತಿಂದ ಮನೆಗೆ ಎರಡ್ ಬಗೆಕ್ಕಾಗದ್
4) ಹಾಲ್‌ಲಿ ಬಂದ ಹಣ ನೀರ್‌ಲಿ ಹೋದಂಗೆ
5) ಆನೆ ಕದ್ದರೂ ಕಳ್ಳ ಅಡಿಕೆ ಕದ್ದರೂ ಕಳ್ಳ
6) ಹುಟ್ಟು ಗುಣ ಬೆಟ್ಟ ಹತ್ತಿರೂ ಹೋಕಿಲ್ಲೆ
7) ಕುಂಬಳಕಾಯಿ ಕದ್ದವ ಹೆಗ್‌ಲ್ ಮುಟ್ಟಿ ನೋಡ್ದಂಗೆ
8) ಹೊಸ ವೈದ್ಯರಿಗಿಂತ ಹಳೇ ರೋಗಿ ವಾಸಿ
9) ಹೇಳ್ದು ಪುರಾಣ ಹಾಕುದು ಗಾಣ
10) ಹಿರಿ ಅಕ್ಕನ ಚಾಳಿ ಮನೆ ಮಕ್ಕಳಿಗೆಲ್ಲ
11) ಮರಂಧ ಆದ ಮೊಚ್ಚಿ ಮರಕ್ಕೆ ವಿಪತ್ತು
12) ಬೇಲಿ ಹೊಲ ಮೇಯ್ದಂಗೆ
1 ) ಎತ್ತ್ ಏರಿಗೆಳೆಕಾಕನ ಕೋಣ ನೀರಿ ಗೆಳೆದದೆ
14) ಮಜ್ಜಿಗೆಗೆ ಬಂದವಂಗೆ ಎಮ್ಮೆ ಕ್ರಯ ಯಾಕೆ
15) ನೀರ್‌ನ ಮೇಲ್ಲೆ ಗುಳ್ಳೆ ಹಂಗೆ
1 ) ನಾಯಿ ಬೊಗುಳಿರೆ ಮನೆ ಹಾಳಾದೋ ?
17) ಮನೆಗೆ ಮಕ್ಕಳೇ ಮಾಣಿಕ್ಯ
18) ನಾಯಿ ಬಾಲಕ್ಕೆ ಕೊಳವೆ ಹಾಕಿದಂಗೆ
19) ಊಟ ಬಲ್ಲವಂಗೆ ರೋಗ ಇಲ್ಲೆ
20) ಕೆಲಸ ಆಕಾದರೆ ಕಾಲು ಹಿಡಿಯಕು
21) ಸಾಹುಕಾರನ ಊಟ ಕಾಯಿಲೆಗೆ ಬಡ ವನ ಊಟ ಆರೋಗ್ಯಕ್ಕೆ
22) ಕಪ್ಪು ಕಸ್ತೂರಿ ಇಂಡ ಹಾಗೆ
23) ವಿಪರೀತ ಬುದ್ದಿ ಅಭಿಮಾನ ಭಂಗ
24) ಐಶ್ವರ್ಯ ಬಾಕನ ಅರ್ಧ ರಾತ್ರಿಲಿ ಕೊಡೆ ಹಿಡಿದಂಗೆ
25) ಹನಿ ಕೂಡಿರೆ ಹಳ್ಳ ತೆನೆ ಕೂಡಿರೆ ಭತ್ತ
26) ಅಂಬು ಅಟ್ಟಲಿ ಬಿಲ್ಲ್ ಬೆಟ್ಟಲಿ
27) ಊಟಕ್ಕೆ ಮುಂದೆ ಕೆಲಸಕ್ಕೆ ಹಿಂದೆ
28) ಕೆಟ್ಟ ಮೇಲೆ ಬುದ್ಧಿ ಬಾತ್
29) ಹುಟ್ಟು ಗುಣ ಸುಟ್ಟರೂ ಹೋಕಿಲ್ಲೆ
30) ಬಸವ ಎದ್ದ ಬಾಲ ಬೀಸಿದ
31) ತಾನ್ ಕಳ್ಳ ಪರರ ನಂಬ
32) ಕಲ್ಲ್ ಹುಡಿ ಮಾಡಿರೆ ನೀರ್ ಬಾದೋ ?
33) ಅತ್ತೆಗೊಂದು ಕಾಲ ಸೊಸೆಗೊಂದು ಕಾಲ
34) ಕನಸ್ಸಿನ ಸೆಂಟು ಕನ್ನಡಿಯೊಳಗಿನ ಗಂಟು
35) ಗಂಡ ಪಟ್ಟೆ ಸೀರೆ ತಂದದೆತ ಇರುವ ಸೀರೆ ಸುಟ್ಟತ್
36) ಅಡಿಗೆ ಬಿದ್ದರೂ ಮೂಗು ಮೇಲೆ
37) ನಾಯಿಗೆ ಹೇಳ್‌ಕನ ನಾಯಿ ಬಾಲಕ್ಕೆ ಹೇಳ್‌ತ್
38) ಕುಂಬಾರಂಗೆ ವರುಷ ದೊಣ್ಣೆಗೆ ನಿಮಿಷ
39) ಮೂರ್ತಿ ಸ ಣ್ಣ ದಾ ದ ರೂ ಕೀರ್ತಿ ದೊಡ್ಡದ್
40) ತುಂಬಿದ ಕೊಡ ತುಳುಕಿಕ್ಕಿಲ್ಲೆ
41) ಗಿಡವಾಗಿ ಬಗ್ಗದ್ದ್ ಮರ ಆಗಿ ಬಗ್ಗಿಕ್ಕಲ್ಲೆ
42) ಕೈಕೆಸರಾದರೆ ಬಾಯಿ ಮೊಸರು
43) ಹೊಟ್ಟೆಗೆ ಹಿಟ್ಟಿಲ್ಲೆ ಜುಟ್ಟಿಗೆ ಮಲ್ಲಿಗೆ ಹೂ
44) ಕಂಡದ್ ಹೇಳಿರೆ ಕೆಂಡದಂತ ಕೋಪ
45) ಬೊಗಳುವ ನಾಯಿ ಕಚ್ಚಿಕ್ಕಿಲ್ಲೆ
46) ನೆಂಟರ ಮೇಲೆ ಪ್ರೀತಿ ಅಕ್ಕಿ ಮೇಲೆ ಆಸೆ

# ಅರೆಭಾಷೆಯ ಚುಟುಕಗಳು

ಲೇಖಕರು : ಶ್ರೀ ಕುಲ್ಲಚನ ಕಾರ್ಯಪ್ಪ, ಎಂ.ಎ.,ಬಿ.ಇಡಿ., ಶ್ರೀಮಂಗಲ

---

ಜನಪದ ಸಾಹಿತ್ಯವು ಭಾರತೀಯ ಸಂಸ್ಕೃತಿಯ ಒಂದು ವೈಶಿಷ್ಟ್ಯ. ಜನಪದ ಮಾತುಗಳು ಜನರ ಸಾಮಾನ್ಯರ ವಿಶಾಲವಾದ ಅನುಭವದ ಕುರುಹು. ಯಾವ ಭಾಷೆಯಲ್ಲಿಯೂ ಇಂತಹ ಚುಟುಕುಗಳು ಆ ಭಾಷೆಯ ಸ್ವಾರಸ್ಯವಾದ ಸಂದರ್ಭಗಳನ್ನು ಎತ್ತಿ ತೋರಿಸುತ್ತವೆ. ಇದರಿಂದ ಜನಸಾಮಾನ್ಯರ ದೈನಂದಿನ ವ್ಯವಹಾರಿಕ – ಭಾಷೆಯ ಪರಿಚಯ ನಮಗಾಗುವುದು. ಅದೇ ರೀತಿ ಅರೆ ಭಾಷೆಯಲ್ಲಿ ಉಪಯೋಗಿಸುವ ಚುಟುಕುಗಳ ಪರಿಚಯವನ್ನು ಶ್ರೀಮಾನ್ ಕುಲ್ಲಚನ ಕಾರ್ಯಪ್ಪನವರು ನಮಗೆ ಮಾಡಿಕೊಟ್ಟಿದ್ದಾರೆ. —ಸಂ.]

---

ಕನ್ನಡ ಜಿಲ್ಲೆ ಮತ್ತು ಕೊಡಗಿನ ಗೌಡರು "ಅರೆ ಭಾಷೆ"ಯನ್ನು ಮಾತಾಡುವರು. ಇದೊಂದು ಕನ್ನಡದ ಗ್ರಾಮ್ಯ ಶೈಲಿ. ಶುದ್ಧ ಕನ್ನಡಕ್ಕೂ ಅರೆಭಾಷೆಗೂ ಬಹಳ ವ್ಯತ್ಯಾಸವಿಲ್ಲ. ಇದರಿಂದಾಗಿ ಅರೆಭಾಷೆಯಲ್ಲಿ ಪ್ರತ್ಯೇಕ ಸಾಹಿತ್ಯಕ್ಷಣಿಯಾಗಲಿಲ್ಲ. ಆದರೂ ಅರೆಭಾಷೆಯಲ್ಲಿ ಚುಟುಕ, ಗಾದೆ ಮತ್ತು ಒಗಟುಗಳಿಗೆ ಕೊರತೆ ಇಲ್ಲ.

ಚುಟುಕಗಳು ಗೌಡರ ಜನಪದ ಸಾಹಿತ್ಯದಲ್ಲಿ ಹೇರಳವಾಗಿವೆ. ಇವುಗಳೆಲ್ಲಾ ಜನಸಾಮಾನ್ಯರ ಅನುಭವ ಕವಿತೆಗಳು. ಪ್ರಚಾರದಲ್ಲಿರುವುಗಳಲ್ಲಿ ಕೆಲವನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಅವುಗಳಲ್ಲಿ ಕೆಲವನ್ನು ಪ್ರಚಾರದಲ್ಲಿರುವಂತೆ ಕೊಡಲಾಗಿದೆ. ಕೆಲವನ್ನು ರೂಪಾಂತರಿಸಲಾಗಿದೆ.

## ತಾತ್ಸಾರ ಸಲ್ಲದು

ಅಪ್ಪಂಗೆ ಜರ  
ಅಮ್ಮಂಗೆ ಕುರ  
ಸಂಗೆಮ್ಮೆ ಪಾರ  
ಚಾಂಪುಗೆ ದನಪಾರ  
ಚಾಮವ್ವಂಗೆ ಮುಕ್ಕಳ ಪಾರ  
ನಿಮಿಗೆ ಬಾಳ ಸಸಾರ

ಯಾವ ಜಗೆಯ ಕೆಲಸವೂ ಕೀಳಲ್ಲ; ಯಾವುದೊಂದೂ ಮೇಲಲ್ಲ. ಆದುದರಿಂದ ಯಾವುದರ ಬಗ್ಗೆಯೂ ತಾತ್ಸಾರ ಬೇಡವೆಂಬ ತತ್ವ ಇಲ್ಲಿದೆ.

## ಅಸಹಾಯಕತೆ

ಈ ವರ್ಷ ಮಳೆಗಾಲ ಬಾಳ
ನಮ್ಮಪ್ಪ ಒಲೆ ಬುಡದಿಂದೇಳ
ಸಾಲ ಕೊಟ್ಟವೆಲ್ಲಾ ಬನ್ನಿ
ನಮ್ಮಂಗಳ ಮಣ್ಣೆ ತಿನ್ನಿ

ಸಂಸಾರ ರಥದ ಸಾರಥಿ ಮನೆಯ ಯಜಮಾನ. ಅವನೇ ಮೂಲೆ ಹಿಡಿದಾಗ ಯಾರೇನು ಮಾಡಿಯಾರು? ರೈತ ಸಂಸಾರವೊಂದರ ದೀನ ಚಿತ್ರವನ್ನಿಲ್ಲಿ ಕಾಣಬಹುದು.

## ಕೂಡಿ ಬೇಸಾಯ

ನಾನ್ ನೀನ್ ಸೇರಲಾಗಿ
ಗೋಣಿಕೊಪ್ಪಕ್ಕೆ ಹೋಗಲಾಗಿ
ಮುದಿಯತ್ತ್ ತರಲಾಗಿ
ಹಡ್ಲ್ ಭೂಮಿ ಹೂಡಲಾಗಿ
ಗೋಳೋ ಗೋಳು ಗೋಳಣ್ಣಾ

ದಷ್ಟಪುಷ್ಟ ಜೋಡೆತ್ತಿದ್ದರೆ ಮಾತ್ರ ಬೇಸಾಯ, ಇಲ್ಲದಿದ್ದರೆ ಅದೊಂದು ಗೋಳು.

## ಗಂಡೊಬ್ಬನ ವ್ಯಕ್ತಿಚಿತ್ರ

ಹೊಟ್ಟೆಡೂಮಣ್ಣ
ಕೈಕಾಲ್ ಸಣ್ಣಣ್ಣ
ಬೊಕ್ಕಬಾಯಿ ದೊಡ್ಡಣ್ಣ
ಹರ್‌ಕ್‌ಲ್‌ಬಾಯಿ ಕಿಟ್ಟಣ್ಣ

## ಹೆಣ್ಣೊಬ್ಬಳ ವ್ಯಕ್ತಿಚಿತ್ರ

ಹಪ್ಪರಿ ಮೂಗು
ಚಪ್ಪರ ತಲೆ

ದೊಗ್ಗಲೆ ದೊಳ್ಳಕ್ಕ
ಬಾವನ ದೊಡ್ಡಕ್ಕ

ಜನಪದ ಸಾಹಿತ್ಯದಲ್ಲಿ ವ್ಯಕ್ತಿ ಚಿತ್ರಗಳಿಗೆ ಕೊರತೆಯುಂಟೆ? ಗಂಡು ಹೆಣ್ಣಿನ ಹಲವಾರು ವ್ಯಂಗ್ಯ ವ್ಯಕ್ತಿ ಚಿತ್ರಗಳು ಜನಪದ ಸಾಹಿತ್ಯದಲ್ಲಿ ಸಿಗುತ್ತವೆ.

## ಕೂಸೂಗೆ ಪೂಸಿ

ಸಗ್‌ಣಿಕಟ್ಟೆ ಕ್‌ಟ್ಟಿ
ಪೊವ್ವ ಕುಪ್ಪ ಹಾಕಿ
ಹಾಲ್ ಬೋನ ಉಂಡ್
ಮಾಮನೆಗೆ ನಡಿಮುಂಞ
ಮುಂದೆ, ಮುಂದೆ
ನಾಬನ್ನೆ ನಿನ್ನ ಬೆನ್ನಿ
ಹಿಂದೆ, ಹಿಂದೆ

ಕುಲೋದ್ಧಾರಕ ಹಟ ಹಿಡಿದಾಗ, ಅವನನ್ನು ಅಲಂಕರಿಸುತ್ತಾ ತಾಯಿ ಸಮಾಧಾನಪಡಿಸುವುದು ಇದ್ದದ್ದೇ.

## ಅಳ್‌ಬ್ಯಾಡ

ಕೊಟ್ಟ್‌ಕ್‌ತ್ತಿ ಬಾಣೆಲಿ
ಕೊಂಬೋಲಗ ಕೇಳಿದೆ
ಅಳ್‌ಬ್ಯಾಡ ನೀನ್ ಕುಂಜಕ್ಕ
ಡಬ್ಬ್‌ಡಕ ಬಾಣೆಲಿ
ದಿಬ್ಬಣ ಬಂದುಟ್ಟು
ಅಳ್‌ಬ್ಯಾಡ ನೀನ್ ಸಂಣಕ್ಕ

ದಿಬ್ಬಣ ನಿರೀಕ್ಷೆಯಲ್ಲಿರುವ ಬಂಧು ಸಮೂಹ ವಧುವನ್ನು ಗೇಲಿ ಮಾಡುವುದು ಸಾಮಾನ್ಯವಾದುದು.

## ನೆಂಟಸ್ಥಿಕೆ

ಅತ್ತಿ ಮರ ನೋಡಿಕೆ ಲಾಯಿಕ
ಅತ್ತಿಗೆ ಕಂಗೆ ನೋಡಿಕೆ ಪೊರುಲು
ಅತ್ತೆಮಗ ಅಮ್ಮಣಿ ಗೂಡೆ
ಬಾಳ ಪೊರ್ಲು ನೋಡೀಕೆ
ಮಾಯಿನ ಮರಲಾಯಿಕ
ಮಾಯಿನ ಹಣ್ಣ್ ಪಸ್ಂದ್
ಮಾವನ ಮಂಞ
ಬಾಳ ಪೊರ್ಲು ನೋಡೀಕೆ

ಸೋದರ ಸಂಬಂಧ — ಹಿತಕರ; ಅದಕ್ಕಾಗಿ ಹಿಗ್ಗು

## ಸಂತೆಯಲ್ಲಿ ಕೇಳಿದ್ದು

ನೇರಳೆ ಹಣ್ಣಾತ್
ಅಣ್ಣಂಗೆ ಹೆಣ್ಣಾತ್
ಮಲ್ಲಿಗೆ ಹೂವಾತ್
"ಮಳ್ಳಿ" ಗಂಡಾತ್
ದಿಬ್ಬಣ ಹೋಗ್ಯಾತ್
ಹೆಣ್ಣ್ ತಂದಾತ್

ಮದುವೆ ಮಾಸಗಳಲ್ಲಿ ಸಂತೆಯಲ್ಲೂ ಮದುವೆಗೆ ಸಂಬಂಧಿಸಿದ ಮಾತುಕತೆಗಳೇ ನಡೆಯುತ್ತವೆ.

## ದಾಸಯ್ಯನ ಗೇಲಿ

ದಾಸಬಾತ್
ದೋಸೆ ತಿಂತ್
ನೀರ್ ಕುಡ್‌ತ್
ನಿಗುರಿಕೊಂಡತ್

ದಾಸಯ್ಯ ಮನೆಗೆ ಬಂದಾಗ ಅವನ ಸುತ್ತು ಮಕ್ಕಳ ಸಂತೆ. ಅವನನ್ನು ಗೇಲಿ ಮಾಡುವುದು ಅವರಿಗೆ ಹಬ್ಬ.

## ಅಳಿಯನ ಆಸ್ತಿ

ಹೊಳೆಕರೆ ಭೂಮಿ
ಬರೆಕರೆ ಮನೆ
ಕೂರಟು ನೇಗ್‌ಲ್
ಬಡಕಲ್ ಎತ್ತ್
ಯಾರಿಗೆ ಕಮ್ಮಿ ನಮ್ಮಳಿಯ?
ಇಂವ ನಮ್ಮ "ಮನೆ ತೊಳಿಯ!"

ಮದುವೆ ಕಾಲದಲ್ಲಿ ಬೀಗರನ್ನು, ಅಳಿಯದೇವರನ್ನು ಜರೆಯದಿದ್ದರೆ ಅದೊಂದು ಕೊರತೆಯಂತಾಗಿ ಕಾಣದಿರದು.

## ಹಂಬಾಕ್ ಹಾಡು

ನಾನ್ಯಾರಿಗೆ ಕಡೆನೆ?
ನನ್ನ ತಲೆ ನೋಡ್‌ನೆ....
ಕುಟ್ಟಿಕ್ಕಾಗಿ ಇಟ್ಟ ಕ್‌ರಿಕಾಯಿನೆ!
ನಾನ್ಯಾರಿಗೆ ಕಡೆನೆ?
ನನ್ನ ಕ್‌ಣ್ಣ್ ನೋಡುನೆ....
ಮಿಣಿಮಿಣಿ ಮಿಂಚ ಮಿಣಪುಳಿನೆ!
ನಾನ್ಯಾರಿಗೆ ಕಡೆನೆ?
ನನ್ನ ಮೀಸೆ ನೋಡುನೆ....
ಹುಲಿ ಮೀಸೆ ಇಟ್ಟ ಹುಲಿರಾಯನೆ!
ನಾನ್ಯಾರಿಗೆ ಕಡೆನೆ?
ನನ್ನ ಹೊಟ್ಟೆ ನೋಡುವೆ....
ಮಟ್ಟ ತುಂಬಿದ ಕನ್ನಂಬಾಡಿ ಕಟ್ಟೆನೆ!

ಹೀಗೆ ಕೂಡಿಸುತ್ತಾ ಹೋಗಬಹುದು. ಹೆಂಡತಿಯ ಮುಂದೆ ಗಂಡ ಕೊಚ್ಚುವ "ಉತ್ತರನ ಪೌರುಷ"ವೇ ಹಮ್ಮಿನ ಹಾಡು—ಅರೆ ಭಾಷೆಯಲ್ಲಿ ಹೇಳುವುದಾದರೆ "ಹಂಬಾಕ್‌ನ ಪದ."

ಭಾಗ ೩

## ಈಗಿನ ಗೌಡಸಮಾಜದ ರೂಪರೇಖೆಗಳು

# ಕೆಟ್ಟ ಮೇಲೆ ಬುದ್ಧಿ (ಬಂತೆ?)

ನೆನಪು ಮಾಡಿದವರು : ಶ್ರೀ ಮಾರಾಜ

ಅಂದು ನಂದನಗೋಕುಲ ಸದೃಶ್ಯವಾಗಿದ್ದು ಇಂದು ಸುಧಾರಣೆಗೆ ಬಲಿಯಾಗಿ ಛಿದ್ರ ಛಿದ್ರವಾಗಿರುವ ನಮ್ಮ ಅವಿಭಾಜ್ಯ ಕುಟುಂಬ ಪದ್ಧತಿಯ ದುರಂತ ಚಿತ್ರವನ್ನು ನಮ್ಮೆದುರು ಹಿಡಿದಿದ್ದಾರೆ ಸಂಡ ನೆನಪಿನ ಸುರುಳಿಯ ಬಿಚ್ಚಿ ಶ್ರೀ ಎಂ.ಆರ್. ಜನಾರ್ಧನ ಬಿ.ಎ.ಎಂ.ಎಲ್.ರವರು. ಶ್ರೀಯುತರು ಬೆಂಗಳೂರಿನಲ್ಲಿರುವ ಹೈಕೋರ್ಟಿನ ಪ್ರಸಿದ್ಧ ವಕೀಲರೂ, ಶ್ರೀ ರೇಣುಕಾಚಾರ್ಯ ಲಾ ಕಾಲೇಜಿನ ಪ್ರಾಧ್ಯಾಪಕರೂ ಆಗಿದ್ದಾರೆ. ಪ್ರತಿಭಾವಂತರಾಗಿರುವ ಇವರು ಆಂಗ್ಲ ಮತ್ತು ಕನ್ನಡ ಭಾಷೆಗಳೆರಡರಲ್ಲೂ ಉತ್ತಮ ಲೇಖಕ ಮತ್ತು ಶ್ರೇಷ್ಠ ವಾಗ್ಮಿಗಳಾಗಿದ್ದಾರೆ. ತೀಕ್ಷ್ಣಮತಿಗಳಾಗಿದ್ದು ರಾಜಕಾರಣದಲ್ಲಿಯೂ ಹದವರಿತು ಕೈಯಾಡಿಸಿ ಅಲ್ಲಿಯೂ ಸಾಕಷ್ಟು ಪರಿಶ್ರಮ ಗಳಿಸಿಕೊಂಡಿದ್ದಾರೆ.

—ಸಂ ]

ಪುರಾತನವೆಂದು ಪರಿಗಣಿಸಲ್ಪಡುವ ನಮ್ಮ ಈ ಪರಂಪರೆ ಧಾರ್ಮಿಕವಾಗಿತ್ತೆಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ಪುರಾತನ ನೂತನಗಳ ಮಧ್ಯೆ ಎರಡಿಲ್ಲದ ಸಾಮರ್ಥ್ಯದಿಂದ ಬಂದು ನಮ್ಮ ಸಮಾಜ ಅಳವಡಿಸಿಕೊಂಡ ವ್ಯವಹಾರ ಸೂತ್ರಗಳಲ್ಲಿ ಒಕ್ಕುಟುಂಬ ಒಂದು ನಿದರ್ಶನಾರ್ಹ ಸಂಸ್ಥೆ.

ಹುಟ್ಟು, ಬೆಳವಣಿಗೆ, ಸಾವು, ಮೋಕ್ಷ ಸಕಲವೂ ಸಂಸ್ಕಾರಬದ್ಧವಾಗಿ ಯಾವ ಜನ ಬಾಳಿ ಬದುಕಿದರೋ, ಆ ಹಿಂದೂಗಳು ತಮ್ಮ ಕೌಟುಂಬಿಕ ಜೀವನದಲ್ಲಿಯೂ ಸರ್ವೋದಯವನ್ನು ಬಾಳಿ ತೋರಿದರು ; ಹಿಂದಿಲ್ಲ, ಮುಂದಿಲ್ಲ ಎಂಬಂತೆ.

ಗಂಡ-ಹೆಂಡತಿ ; ಇದ್ದರೆ (ಮೂರಕ್ಕೆ ಮಿಾರದಂತೆ) ಮಕ್ಕಳು ; ಬಾಡಿಗೆ-ಮನೆ ; ನಲ್ಲಿಯ ಹನಿ ನೀರು ; ಒಪ್ಪೊತ್ತು ಉಪವಾಸ – ಒಪ್ಪೊತ್ತು ಹೋಟೇಲು ಸಹವಾಸದಲ್ಲಿ ಜರ್ಝರಿತವಾದ ಒಂದು ತರಗೆಲೆಯ ಹಿಡಿ ಇಂದಿನ ಬಡಕಲು ಹಿಂದೂ ಕುಟುಂಬ – ಒಕ್ಕುಟುಂಬ

ಪರಿವಾರವೆತ್ತ-ಈ *ನಾಣಿಲಿ ದರಿದ್ರದಾರುಣವೆತ್ತ ? ನಮ್ಮ ಹಿರಿಯರು ಕನಸಿನಲ್ಲೂ ಇಳಿಯದಿರುವ ಅಧಃಪತನ ಬಂದಿದೆ ಇಂದಿನ ಕುಟುಂಬ ಜೀವನಕ್ಕೆ.

ಇದು ನಮ್ಮ ಮುನ್ನಡೆ. ಇದೂ ಒಂದು ಮುನ್ನಡೆ. ಅದೂ ಸ್ವಾತಂತ್ರ್ಯೋತ್ತರ ಪ್ರಗತಿಪಥದಲ್ಲಿ !

ಅಂದು-ಕೃಷಿ, ಬೇಸಾಯವೇ ಹಿರಿ ಉದ್ದಿಮೆ. ನೆಯಿಗೆ ಕಸುಬು. ಇನ್ನುಳಿದವುಗಳೆಲ್ಲಾ ಉಪಕಸುಬುಗಳು. ಸಿಂಥೆಟಿಕ್ ನೂಲು ಹುಟ್ಟಿಲ್ಲವಾದುದರಿಂದ ನೆಯಿಗೆ ಕಸುಬಿಗೂ ಕೃಷಿಯೇ ಮೊದಲು.

ಕೃಷಿ, ಬೇಸಾಯವೊಂದು ಪೂಜೆ ಆಕಾಶ, ಮಳೆ, ಬಿಸಿಲು, ಗಾಳಿ, ಭೂಮಿ ಇವುಗಳೆಲ್ಲಾ ವರದ ದಿವ್ಯ ತೇಜಗಳು. ಯಾವ ಯಾವ ಶಕ್ತಿ ಅನ್ನವನ್ನು ನೀಡುತ್ತದೋ ಅದೇ ಶಕ್ತಿ ಪ್ರಾಣವನ್ನುಸಂರಕ್ಷಿಸುತ್ತದೆ.ಅನ್ನವೇ ಪ್ರಾಣ. ಪ್ರಾಣವನ್ನು ಧರಿಸುವ, ಉದ್ಧರಿಸುವ ಯಾವ ಯಾವ ಸೊತ್ತೂ ಪೂಜ್ಯ ; ಪರಮ ಪೂಜ್ಯ. ಸತತ ಪೂಜಾರ್ಹ. ಎಂದೇ ಹಿಂದೂಗಳಿಗೆ ಭೂಮ್ಯಾಕಾಶಗಳೂ ಪೂಜಾರ್ಹ ದೇವತೆಗಳು. ಭೂಮಿ ಭೋಗ ವಸ್ತುವಲ್ಲ ; ಭೂಮಿಯಿಂಧ ಹುಟ್ಟುವ ಸಕಲ ಸಾರ ಸಂಪದ ಭೂಮಾತೆಯ ವರ ಪ್ರಸಾದ. ಅದು ಅಂದಿನ ಮಾತಾಯಿತು.

ಇಂದು ಭೂಮಿಯೆಂದರೆ ಕೇವಲ ಮಾರುಕಟ್ಟೆಯಲ್ಲಿ ಸಿಗಬೇಕಾದ 'ಆಸ್ತಿ'. ಇಂದು ಅದು ನಿನ್ನದು ; ನೀನು ಅದರ 'ಒಡೆಯ.'

ಅಂದು 'ಸ್ವಾಮಿತ್ವ' ಕೇಳದ ಸುದ್ದಿ. ಒಕ್ಕುಟುಂಬದ ಆಸ್ತಿಗೆ ಯಜಮಾನ ಒಡೆಯನಲ್ಲ. ಅವನು ಕರ್ತ (ಮೇನೇಜರ್) ಅಷ್ಟೆ. ಹಿಂದೆ ಇದ್ದವರಿಗೆ ಪ್ರಸಾದದ ಪುಣ್ಯ ಫಲ ಸಿಕ್ಕಿತ್ತು ; ಜೀವಂತ ಇರುವವನಿಗೆ ಇದೆ ; ಮುಂದೆ ಹುಟ್ಟುವವನಿಗೂ ಅದೇ ಸೌಲಭ್ಯ ಇರುತ್ತದೆ. ಆ ಭಾಗ್ಯಸುಧೆ ಸದಾ ಹರಿಯುತ್ತಿರುತ್ತದೆ ; ಅದು ಅಂದಿನ ಸೂತ್ರ.

ಈ ಸೂತ್ರದ ಹೊರ ಆವರಣವನ್ನು ಕಂಡುಕೊಂಡರು ಕಮ್ಯೂನಿಸ್ಟ್ ತಜ್ಞರು. ಕಮ್ಯೂನಿಟಿ ಫಾರ್ಮ್ ಅಂತೆ ; ಸಹಕಾರ ರೀತ್ಯ ವ್ಯವಸಾಯ ಪದ್ಧತಿಯೆಂತೆ ; ಒಕ್ಕುಟುಂಬ ನಾಶವಾಗಿ ಹೊಸ ಸಂಸ್ಥೆ ಬೆಳೆಸಬೇಕಂತೆ. ಹಿಡಿದಂತಿದೆ ಅನುಕರೆಯ ಹುಚ್ಚು ; ಹೊಸದಾಗಿಸುವ ಹೊಸ ಹೊಸ ಹುಚ್ಚು. ಅದಾವುದೋ ದೇಶದ ಅನಾರ್ಯ ಅನಿವಾರ್ಯ ದುಸ್ಥಿತಿಯಲ್ಲಿ ಹುಟ್ಟಿಕೊಂಡಿತು ಪರಕೀಯ ಪ್ಲಾನಿಂಗ್ ಪದ್ಧತಿ. ಜುಟ್ಟು ಕತ್ತರಿಸಿಕೊಂಡಷ್ಟು, ಕುಂಟುಲಂಗ ಸಿಕ್ಕಿಸಿಕೊಂಡಷ್ಟು ಸಲೀಸಾಗಿ ಪ್ಲಾನಿಂಗ್ ವ್ಯಾಧಿ ಹುಟ್ಟಿಕೊಂಡಿತು.

ಹಿಂದೂ ಒಕ್ಕುಟುಂಬ ಪದ್ಧತಿಯಲ್ಲಿ ಒಂದೇ ಪೂಜೆ ; ಒಂದೇ ಅನ್ನ ; ಒಂದೇ ಉಸಿರು. ಇದರನ್ನರಿತ ತಂದೆ ಯಜಮಾನ, ಆತನು ಎಂದೂ ಭೂಮಿಯ ಒಡೆಯನಲ್ಲ. ಒಕ್ಕಟುಂಬದ ಕರ್ತ. ಆತ ಟ್ರಸ್ಟಿ. ತಾಯಿ ಆ ಮನೆ ವಾರ್ತೆಗೆ ಗೃಹಿಣಿ. ಸಮಾನ ಸದ್ಧರ್ಮ ಪರಿಶುದ್ಧ ಜೀವನ ಒಬ್ಬ ಮಗ ದೊಡ್ಡ ಸಂಪಾದನೆಯಿಂದ ಸೇರು ಚಿನ್ನ ತಂದಿರಬಹುದು ; ಇನ್ನೊಬ್ಬ ಕಾಲವಾಗಿ ಬಿಟ್ಟಿರಬಹುದು ಹಿಂದೆ ತಬ್ಬಲಿ ಕೂಸನ್ನು ; ಮುಗುದೆ ವಿಧವೆಯೊಬ್ಬಳನ್ನುಬಿಟ್ಟುಮಗುದೊಬ್ಬಮಣ್ಣಲ್ಲಿದುಡಿಯುತಿರಬಹುದು ಲಾಭ ನಷ್ಟದ ಅರಿವಿಲ್ಲದೆ. ತಾಯಿಯ ರೀತಿ-ಸಮದರ್ಶನ. ಎಲ್ಲಾ ಸೊಸೆಯರಿಗೂ ಸಮಾನ ರಕ್ಷಣೆ, ಸನ್ಮಾನ. ಹಬ್ಬ ಹುಣ್ಣಿಮೆಗೆ ಒಂದೇ ತೆರನ, ಒಂದೇ ಬೆಲೆಯ ಸೀರೆ ಎಲ್ಲಾ ಸೊಸೆಯರಿಗೆ ; ಹೆಂಗಳೆಯರಿಗೆ. ಮನೆ ಮಕ್ಕಳು, ಆಳು ಕಾಳು ಎಲ್ಲರೂ ತಿಂದುಂಡು ಬಳಿಕ, ಮನೆಯ ನಾಯಿ ಬೆಕ್ಕು ತಿಂದು ತಣಿದ ಬಳಿಕ ತಿಂಪರೆ ಆಕೆ ತಾಯಿ. ಅಬ್ಬಾ, ಏನು ತ್ಯಾಗ ಅದು ! ಏನು ನ್ಯಾಯ ಅದು ! ಸೇರು ಚಿನ್ನ ತರುವ ಮಗನ ಹೆಂಡತಿಗೇನು ನೆತ್ತಿಯಲ್ಲಿ ಕೊಂಬಿದೆಯೆ ? ಎಲ್ಲರೂ ಸಮಾನ ರಕ್ಷಣೆಗೆ ಅರ್ಹರು ; ಪಾತ್ರರು.

---

* ನಾಣಿಲಿ-ಲಜ್ಜೆ ಇಲ್ಲದ

ಆ ಒಕ್ಕುಟುಂಬದಲ್ಲಿ ವಿಧವೆಯರು, ಮುದುಕರು ಭಾರವಲ್ಲ; ನೂರು ಮಕ್ಕಳೂ ಭಾರವಲ್ಲ; ಅಂಗ ಹೀನರು; ಮುದಿ ಎತ್ತು ಬಡನಾಯಿ – ಯಾರೂ ಯಾವುದೂ ತಬ್ಬಲಿಯಲ್ಲ. ಅಂದು 'ಇನ್‌ಶೂರೆನ್ಸ್' ಎಂದರೇನೆಂದು ತಿಳಿಧಿರದಿದ್ದರೆ ತಪ್ಪೆ? ಅದರ ಅಗತ್ಯ ವೇನಿತ್ತು ಅಂತಹ ಪ್ರಬುದ್ಧ ಸಮಾಜದಲ್ಲಿ?

ಇಂದು ನಾವು ಪ್ರಗತಿಪರರಂತೆ. ನಮ್ಮ ಸುಧಾರಣೆ ಗಳು ಪ್ಲಾನಿಂಗ್ ನಿಯಮಬದ್ಧವಿರಬೇಕಂತೆ. ಯಾರೋ ಹೇಳಿದರು ಕುರುಡನಿಗೆ ಕೋಲಿರುವುದು ಲಾಭಕರವೆಂದು. ನಡೆಯಿತು ಸುಧಾರಣೆ; ಕಣ್ಣಿದ್ದವನದು ಅದೇ ಅಪರಾಧ! ಆಗಲಿ ಒಮ್ಮೆ ಎಲ್ಲರೂ ಕುರುಡು: ಆ ಬಳಿಕ ಎಲ್ಲರೂ ಸಾಧಿಸಿದರಾಯಿತು ಒಂದೊಂದು ಕೋಲು.

ಸುಧಾರಣೆಯ ಹೆಸರಿನಲ್ಲಿ ಬಂತು ಕಾನೂನಿನ ಹಾವಳಿ. ಭೂಸುಧಾರಣೆಯಂತೆ; ಆಗಲಿ ಒಕ್ಕು ಟುಂಬದ ಛಿದ್ರ.

ಆದೆವು ನಾವು ಬೇರೆ; ಸಂಸ್ಥೆ ಒಡೆಯಿತು. ಈಗ ಮಾಡಬೇಕು ಹೊಸದೊಂದು ವ್ಯವಸ್ಥೆ. ಹಿರಿಯರೋ ಹೇಳಿದರು, 'ಹಳೆಯ ಮನೆಯ ಬಿಡುವ ಮೊದಲು ಕಟ್ಟು ಹೊಸತೊಂದನು', ನಾವು ಹಳೆ ಗೊಡ್ಡು ಪುರಾಣ ಕೇಳಿ ಬೇಸತ್ತವರು, ಇಂದು ಕೇಳುವುದೇನು ಗೊಡ್ಡು ಪುರಾಣ! ಹಳಬರ ಮಾತು ಅಲ್ಲೇ ಹೋಯಿತು. ಸುಧಾರಣೆ ಹುಟ್ಟಿತು ಪ್ರಗತಿಯ ಹುಚ್ಚಿನಲ್ಲಿ ಅನುಕರಣೆಯ ಅಮಲಿ ನಲ್ಲಿ. ಸುಧಾರಣೆಯ ಹೆರಿಗೆಯಲ್ಲಿ ಪರಂಪರೆ ಸತ್ತಿತು. ಅನೇಕ ವಿಚಾರಗಳೊಡನೆ ಒಕ್ಕುಟುಂಬದ ಕೊಲೆಯಾ ಯಿತು, ಮೊನ್ನೆ ಮೊನ್ನೆ ನಮ್ಮ ಕಣ್ಣೆದಿರಿನಲ್ಲಿ.

ಯಾವ ಭೂಮಿ ಪೂಜಾರ್ಹವಾಗಿತ್ತೋ ಇಂದು ಭೋಗಾರ್ಹ ತೊತ್ತು. ಆದರೆ ಧನಿಯಾರು? ಧರ್ಮ ನಿಯಮದ ನಿಘಂಟಲ್ಲ; ತಾಯಿಯಿಲ್ಲ. ಖಾಕಿಯೋ, (ಬಣ್ಣದಲ್ಲೇನಿದೆ) ಇನ್ನೇನೋ ಸಮವಸ್ತ್ರಧಾರಿ ಬಂದು 'ಸಮೂಹಿಕ ವ್ಯವಸಾಯ' ಪ್ರಾರಂಭಿಸುತ್ತಾನಂತೆ. ಅಲ್ಲಿ ಕುಟುಂಬವಿಲ್ಲ! ನೀನೂ ನಾನೂ ಅವನು ಹಾಕಿದ ಹಿಟ್ಟಿಗೆ, ಕೊಟ್ಟರೂ ಕೊಡಬಹುದಾದ ಹಿಡಿ ಕಾಳಿಗೆ, ಬಿಡಿಕೂಳಿಗೆ ಸ್ವಾಭಿಮಾನ ಬಿಟ್ಟು, ದುಡಿಯಬೇಕು. ಅದು ಪ್ರಗತಿಯ ಬೆಲೆ.

'ಕೋ ಓಪರೇಟಿವ್ ಫಾರ್ಮು' ತೋರಿಸುತ್ತಾ ರಂತೆ! ಬೆಪ್ಪೇ ನೋಡು; ಕಿತ್ತ ಕಣ್ಣನ್ನು ಮುಚ್ಚಲು ದಾನ ನೀಡಲಾಗಿದೆ ಪಾಲಿಷ್ ಮಾಡಿದ ಕರಿಕನ್ನಡಕ. ದುಃಖಿಸಬೇಡ; ಈ ಜಾತ್ರೆಯಲ್ಲಿ ಎಲ್ಲರಿಗೂ ದೊರಕಿದೆ 'ಈಕ್ವಾಲಿಟಿ' (Equality).

ತಿರುಳಿಲ್ಲದಿರೆ ಚಿಂತಿಲ್ಲ; ಎಲ್ಲರ ಕೈಯಲ್ಲೂ ಕಾಗೊಳಿ ಸುತ್ತಿದೆ ಒಂದೊಂದು ಕೆರಟ. ಅವನಿಗೆ ಹೆಚ್ಚಿಲ್ಲ; ನಿನಗೆ ಕಡಿಮೆಯಿಲ್ಲ. ಇನ್ನೇನು? ಸರಿ ಬಂತಲ್ಲ ನಮಗೆ ಎಂದಿಲ್ಲದ ಸಮಾನತೆ!

ಸರಿ: ರಾತ್ರಿ ಕಂಡ ಭಾವಿಗೆ ಹಗಲು ಬಿದ್ದವಲ್ಲ ನಾವು! ಹೌದು, ಗೊತ್ತಾಯಿತು; ನೀನೂ ನಾನೂ ಮರುಳರು. ಆದರೆ ಸುಧಾರಣೆ ತಂದವರಿಗೆ ಈ ಗುಟ್ಟು ಬಹಳ ಮೊದಲೇ ಗೊತ್ತು!



# ಒಗ್ಗಟ್ ಜನರ್ಲ್ಲಿ ಎಲ್ಯುಟ್ಟು?

ಲೇಖಕರು : ಹೊದ್ದೆಟ್ಟ ಭವಾನಿಶಂಕರ್,

---

ಸಂಗಕೆ ಎಲ್ಲೊವು ಒಟ್ಟಾಗಿ ಬಂದರು
ಒಗ್ಗಟ್ಟೆ ಅವರ್ಲ್ಲಿ ಎಲ್ಯುಟ್ಟು ॥
ಹೇಳಿರೆ ಕೆಲೊವ್ಕೆ ಬೇಜರ ಆದು
ಆದರು ಹೇಳ್ನೊಬ್ಬ ಹೂಂಕುಟ್ಟ್ ॥

ಮಾತಾಡ್ವೊ ಕೆಲೊವು ಜಾಣರ ಹಾಂಗೆ
ಒಳಗೆನ ಗುಟ್ಟ್ ಎಷ್ಟುಟ್ಟು ।
ನಾ ಹೇಳ್ದ ಮಾತಿದ್ ಎಲ್ಲನೀವ್ರೋದಿದ್
ಸುಳ್ಳ್ಂತೇಂಳಂವಯಾರುಟ್ಟು ॥

ಬಾಯಿಲಿ ಎಲ್ಲ ಹೇಳುವೊ ಮೆಲ್ಲ
ಸಂಗಲಿ ದುಡ್ಡ್ ಬಾರಿಟ್ಟು ।
ಸಂಗಕೆ ದುಡ್ಡ್ಗೆ ಮನೆ ಮನೆಹೋದರೆ
ಕೊಡುದುಲೆಂತೇಳಿವೆ ಬಾಯ್ಬುಡ್ಟು ।

ಅಪ್ಪ ಮಾಡ್ ದುಡ್ಡ್ ಬೇಕಷ್ಟ್ ಇದ್ದರೆ
ಕೊಡೆತಿದ್ದೆ ನಾ ನೀವು ಕೇಳ್ದಷ್ಟ್ ।
ಅಂತ ದುಡ್ಡ್ನನ್ನಲಿ ಹಂಞನು ಇಲ್ಲೇಗ
ಹೇಳಿವೆ ಕೊಡ್ದೇಂಗೆ ನಿಗಂಟ್ ॥

ಕಟ್ಟೆತೆ ಸಂಗನ ಲ್ಯಾಕ್‌ಲಿ ನಡ್ಸಿಕೆ
ಮಾಡೊಕು ಕೆಲ್ಸ ಮನ್ಸಿಟ್ಟ್ ।
ಎಲ್ಲೊವು ಒಂದಾಗಿ ಮಾಡಿರೆ ಕೆಲ್ಸಲಿ
ಹೆಚ್ಚಿನ ಕಷ್ಟ ಏನುಟ್ಟು ॥

ಮತಿಗೆ ಮೊರ್ಯಾದಿಕೊಡುವಂತಶಕ್ತಿ
ಹೆಚ್ಚಿನ ಜನಗಳ್ಲಿ ಇರಿಕುಟ್ಟು ।
ಮಾತಿಗೆ ಸರಿಯಾಗಿ ನಡ್ದವೆಂತಾದರೆ
ದೂರುವ ಚಾಡಿ ಏನುಟ್ಟು ॥

ಉದ್ಧಾರ ಆಕೆ ಹೆದ್ದಾರಿ ನಾವ್ಗೆ
ಮಾಡಿರೆ ಸಿಕ್ಕದು ಬೇಕಷ್ಟ್ ।
ಮಾಡ್ದರ ಕಂಡರೆ ಕೇಡುನು ಆದರೆ
ಉದ್ಧಾರ ಆಕಿಲ್ಲಿ ಕಷ್ಟಟ್ಟು ॥

ಕಂಡ್‌ದ್ ಹೇಳಿಕನ ಕೆಂಡಡಂತಕೋಪ
ನಮ್ಮೊಲಿ ಜನರ್ಲ್ಲಿ ಬಾರಿಟ್ಟು ।
ನಮ್ಮೊಲಿ ಮಾತ್ರಲ್ಲ ದೇಶಲಿ ಜಗಳ
ಹೆಚ್ಚಿನ ರೀತಿಲಿ ಇಸ್ನುಟ್ಟು ॥

ಹೆಚ್ಚಿನ ಜನಂಗ ಗುಟ್ಟ್‌ನ ಬುಡ್ದುಲೆ
ಇದ್ದದರೆಲ್ಲ ಒಳಗಿಟ್ಟ್ ।
ಯಾಗಾರ್ ಒಮ್ಮೆನ ಸೋಡುವೆಂತೇಳಿ
ಜಗಳನು ಮಾಡುವ ಹುಚ್ಚಿಟ್ಟು ॥

ಮಿಣಿಪುಳಿ ಹಂಞದ್ ಮಿಣ್ಕೆದೆಂತೇಳಿ
ಹೊಗಳಿಕಂಬ ಹುಚ್ಚ್ಂಞ ಅದ್ಕುಟ್ಟು ।
ಲೋಕದ ಕತ್ತಲೆ ಓಡ್ಸುವ ಸೂರ್ಯನ
ಮದ್ಯಲಿ ಇದ್ ಒಂದ್ ಕಿಡಿ ಬೊಟ್ಟ್ ॥

ನಾವಿದ್ದ ಮುಷ್ಟಿ ನಮ್ಮಷ್ಟ್ ಗಟ್ಟ
ಯಾರಿಲ್ಲೆಂತೇಳುವ ಹೆಮ್ಮಟ್ಟು ||
ಹಾಂಗೆಂದು ತಿಳಿಬಡಿಯಾರಿಗೂ ಹೇಳ್ಬಡಿ
ಗುಡ್ಡೆಗೆ ಗುಡ್ಡೆ ಅಡ್ಡಟ್ಟು ||

ತಿಂಬಕೆ ಕೊಡದೆ ಕೊಡ್ದುಲಿ ಡಾಲ್ಂತ
ಎಮ್ಮೆಗೆ ಜ್ಯೊಡೇನ್ ಫಲಉಟ್ಟು |
ಎಲ್ಲೊವು ಕೆಲ್ಸನ ಸೇರಿಕಂಡ್‌ಮಾಡದೆ
ಹೇಳಿಕಂಡ್ ತಿರಿಗ್ಯೇನ್ ಫಲಉಟ್ಟು ||

ದೀಪದ ಬೊಳುಪು ಸುತ್ತೊಳು ಹೊಳುಪು
ದೀಪದ ಅಡಿಲ ಕತ್ತಲುಟ್ಟು ||
ನೀರ್‌ಲಿ ಮುಳ್‌ಂಗಿ ಅಡಿಗಡಿಗೋಬಡಿ
ನುಂಗುವ ಮೊಸಳೆ ಮಿನಾನುಟ್ಟು ||

ಜೆಳ್ಳಂಗೆ ಕಂಡದ್ ಎಲ್ಲದ್ ಹಾಲ್ಂತ
ನಂಬಿರೆ ಕಂಡಿತ ಸೋಲುಟ್ಟು ||

ಮುಚ್ಚಿಟು ಬೂದಿಂತ ಮುಟ್ಟಿರೆ ಕೆಂಡನ
ಪೊರ್ಕ್ಕಳ ಬಾದಲ್ಲಿ ಕೈ ಸುಟ್ಟ್ ||

ಓದಿದ ಬುದ್ಧಿ ತಲೆತುಂಬ ಇದ್ದರೆ
ಹೆಚ್ಚಿನ ತೊಪ್ಪೇಂಗೆ ಬಾದುಟ್ಟು
ಸ್ವಚ್ಛಲಿ ಮಾಡಿದ ಕೆಲ್ಸನಎಲ್ಲ
ಮೆಚ್ಚುವ ಜನ ಅಂವಮೇಲಿಟ್ಟು ||

ಆಡಿದ ಮಾತ್ನಾಂಗೆ ಮಾಡಿದ ಜನ ಈ
ಲೋಕಲಿ ಗಾಂಧೀಗ ಎಲ್ಯುಟ್ಟು ||
ಕದ್ದೆಲ್ಲ ತಂದ್ ಇದೆಲ್ಲ ನನ್ದ್ಂತ
ಹೇಳುವ ಜನ ಇಂದ್ ಹೆಚ್ಚಾಗ್ಟು ||

ತೊಪ್ಪನ ಮಾಡದ ಜನಂಗಳೆ ಇಲ್ಲೆ
ನಮ್ಮೊಲಿ ಇರ್‍ಲಿ ಒಗ್ಗಟ್ಟ್ ||
ಕಾಲಿಗೆ ಬಿದ್ದ್‌ನ ಜೇಡುಂವೆ ಜೀವ್ರೆ
ಹೋಬಡ ನಮ್ಮನಿ ಕೈ ಬುಟ್ಟ್ ||



# ಗೌಡ ಸಮಾಜದ ಕುಂದುಕೊರತೆಗಳು

ಲೇಖಕರು: ಶ್ರೀ ವಿದ್ವಾನ್ ಕೊಳಂಬೆ ಪುಟ್ಟಣ್ಣಗೌಡರು,

(ನಿವೃತ್ತ ಕನ್ನಡ ಪಂಡಿತರು ಸುಳ್ಯದ ಶ್ರೀಯುತ ವಿದ್ವಾನ್ ಪುಟ್ಟಣ್ಣಗೌಡರು ಶ್ರೇಷ್ಠ ದರ್ಜೆಯ ಕವಿಗಳ ಜೊತೆಗೆ ಸಮಾಜದ ಹಿರಿಯ ವ್ಯಕ್ತಿಗಳಲ್ಲೊಬ್ಬರು. ಇವರು ಬರೆದುತೋರಿಸಿದ ಲೋಪದೋಷಗಳನ್ನು ಸಮಾಜದ ಎಲ್ಲಾ ಮಹಿಳೆ ಮಹನೀಯರು ಅರಿತು ಅದರಂತೆ ತಮ್ಮ ತಪ್ಪನ್ನು ತಿದ್ದಿಕೊಳ್ಳುವುದು ಲೇಸು. ಅದರಲ್ಲೂ ಮುಂದಿನ ಪ್ರಜೆಗಳಾಗುವ ಈಗಿನ ಯುವಕ ಯುವತಿಯರು ಈ ಜ್ಞಾನ ಮತ್ತು ವಯೋವೃದ್ಧರ ಕೆಲವು ಹಿತನುಡಿಗಳನ್ನು ಗಮನದಲ್ಲಿಟ್ಟುಕೊಂಡರೆ ಗೌಡ ಸಮಾಜದ ಎಡರು ತೊಡರುಗಳು ಸರಿಯಾಗಬಹುದೆಂದು ನಂಬುತ್ತೇವೆ—ಸಂ.)

ಬೆಡಗಿನಃಡುಗೆಗಳಂ ಹೊಗಳಿ ನೀಡುತವಿರ್ಪ
ಚಿಪ್ಪಿಗನೆದೆಯ ಗುಟ್ಟಂ ಕಾಣನಂತೆ.
ಬಟ್ಟೆ ಬರೆಯನೆಲ್ಲ ಕಳಚಿ ಕುಂದಂ ನೋಳ್ಪ
ಬೆಜ್ಜಂ ಹದುಳದಿರಮಂ ಪೇಳ್ವನಂತೆ.

ಕೆರೆಗೆ ನೀರು ಬರುತ್ತಲೇ ಇದ್ದರೂ ಆದರಿಂದ ಸೋರುವ ನೀರಿನ ಕಂಡಿಗಳನ್ನು ಮುಚ್ಚದಿದ್ದರೆ ಕೆರೆಯು ತುಂಬಲಾರದು. ಸಮಾಜದ ಏಳಿಗೆಗೆ ಅಭಿವೃದ್ಧಿ ಮಾತ್ರ ಸಾಲದು; ಅದರ ಕುಂದುಕೊರತೆಯ ನಿವಾರಣೆಯೂ ಅಗತ್ಯ. ಗೌಡ ಸಮಾಜದ ಏಳಿಗೆಗಾಗಿ ನಾನಾಕಾರ್ಯಗಳು ಸಾಗುತ್ತಿದ್ದರೂ ಅದರ ಕುಂದುಕೊರತೆಯ ನಿವಾರಣಾ ಕಾರ್ಯಗಳೂ ಆಗಬೇಕಾಗಿವೆ. ಸಮಾಜದ ದೋಷಗಳು ನೂರಾರು; ಅವನ್ನೆಲ್ಲ ಇಲ್ಲಿ ತೋರಿಸಲು ಸಾಧ್ಯವಿಲ್ಲ; ಕೆಲವನ್ನು ಮಾತ್ರ ನನಗೆ ಕಂಡಂತೆ ಬರೆಯುವೆನು.

### ಬಳಗದ ಒಳಜಗಳ

ರಾಮಾಯಣ ಕಾಲದ ವಾಲಿಸುಗ್ರೀವರೂ, ಭಾರತದ ಭೀಮ ದುರ್ಯೋಧನರೂ ಕಣ್ಮರೆಯಾಗಿ ಹೋದರೇನು? ಅವರ ಒಳಸೇಡಿನ ಭೂತದ ನೆಳಲು ಸಮಾಜದಲ್ಲಿ ತೋರಿ ಬರುತ್ತಿದೆ. ಗೌಡ ಸಮಾಜದ ಮೇಲೆಯೂ ಆ ನೆಳಲು ಬೀಳುತ್ತಲೇ ಇದೆ. ಅಣ್ಣ ತಮ್ಮಂದಿರ ಒಳಜಗಳದಿಂದ ಗೌಡ ಕುಟುಂಬಗಳು ಹಾಳಾದಂತೆ ರೋಗರುಜಿನಗಳಿಂದಲೂ ಕೆಟ್ಟು ಹೋಗಲಿಲ್ಲ. ತಾನೇನನ್ನೂ ಮಾಡದಿದ್ದರೂ ಮುಂದೆ ಹೋಗುವವನನ್ನು ಹಿಂದಕ್ಕೆ ದೂಡುವ ಕೆಲಸ ಕಾರ್ಯಗಳನ್ನು ಕೆಡಿಸುವ ಹಂಚಿಕೆಗಳನ್ನು ಹುಡುಕಲು ಬಹು ಮಂದಿ ಪ್ರವೀಣರಿದ್ದಾರೆ. ಮೊದಲು ಶ್ರೀಮಂತರಾಗಿ ಬಾಳಿದ ಕೆಲವು ಬಳಗದವರ ಪರಂಪರೆಯ ಕೆಲವರಿಂದು ಬಡವರಾಗಿ ಕೂಲಿಗಳಾಗಿ ದುಡಿಯುವುದನ್ನು ಕಾಣಬಹುದು. ಅವರ ಮೂಲವನ್ನು ವಿಚಾರಿಸಿದರೆ ಅವರ ಕೀಳ್ಮೆಗೆ ಅವರ ಹಿರಿಯರ ತಿಳಿಗೇಡಿತನ ಹಾಗೂ ಒಳಹೋರಾಟಗಳೇ ಕಾರಣಗಳಾದುವು ಎಂದು ತಿಳಿಯಬಹುದು. ಅಣ್ಣನೋ ತಮ್ಮನೋ ತುಸು ತಪ್ಪು ಮಾಡಿದರೆ ಮತ್ತೊಬ್ಬ ತಾಳ್ಮೆಗೆಟ್ಟು ಜಗಳ ಮಾಡುವ ಕೆಲಸವೆಂದರೆ, ಹಿರಿಯರ ಹೊಲ ಗದ್ದೆಗಳಲ್ಲಿ ತನಗೇನಾದರೂ ಹಕ್ಕಿದ್ದರೆ ಅದನ್ನು ಮಾರಿಬಿಡುವುದು. ಇದರಿಂದ ತನ್ನ ಸಹೋದರನನ್ನು ಸೋಲಿಸಿದಂತಾಗುವುದೆಂದು ಅವನ ಎಣಿಕೆ. ಒಂದು ಹಲಸಿನ ಹಣ್ಣಿಗೆ ಹೋರಾಡಿ ಹಾಳಾದ ಅಣ್ಣ ತಮ್ಮಂದಿರಿದ್ದಾರೆ. ಒಂದು ಗೇರು ಮರಕ್ಕಾಗಿ ಕಡಿದುಕೊಂಡು ಮನೆ ಕಳಕೊಂಡವರಿದ್ದಾರೆ. ಉಣ್ಣುತ್ತಿರುವಾಗ ಅಣ್ಣ ಬಯ್ದನೆಂದು ಬಟ್ಟಲನ್ನು ಅಲ್ಲೇ ಬಿಟ್ಟೆದ್ದು ಹಗೆಗಳಿಗೆ ತಲೆಬಾಗಿ ತನ್ನ ಹಕ್ಕಿನ ಪಾಲನ್ನು ಸೆಳೆದುಕೊಂಡು ಕೊನೆಗೆಲ್ಲವನ್ನೂ ಕಳೆದುಕೊಂಡ ಸಾಹಸಿಗಳಿದ್ದಾರೆ. ತಮ್ಮನ ತೋಟಕ್ಕೆ ಮಣ್ಣು ಕುಸಿದು ಬಿದ್ದಿತ್ತು; ಅದು ತೆಗೆಯಲೇಬೇಕಾದುದು. ತಮ್ಮನಿದ್ದಿಲ್ಲ, ಅಣ್ಣನು ಕೆಲವು ಹೆರಿಗೆ ಮಣ್ಣನ್ನು ಅದರಿಂದ ಕೊಂಡೊಯ್ದನು; ತಮ್ಮನು ತಿಳಿದು ಕೆರಳಿ ಕೇಸರಿಯಾದನು ಏನೂ ವಿಚಾರಮಾಡದೆ ತನ್ನ ಗದ್ದೆ ತೋಟಗಳನ್ನು ಸಿಕ್ಕಿದ ಬೆಲೆಗೆ ಮಾರಾಟಮಾಡಿ ತನ್ನೊಬ್ಬ ಮಗನನ್ನೂ ಬಡತನದ ಕುಲಿಮೆಗೆ ದೂಡಿಬಿಟ್ಟನು ಒಂದು ಕುಟುಂಬದವರು ಕಬ್ಬು ಬೆಳಸಿದರು, ಕಬ್ಬು ಬೆಳೆದಿತ್ತು. ನಡುವೆ ಹಿಸೆಯ ಹೋರಾಟ ತೊಡಗಿ ವಿವಾದ ಮುಗಿಯದೆ ಕಬ್ಬನ್ನೆಲ್ಲ ಒಣಗಿಸಿ ತಪ್ಪನ್ನು ಆಚೀಚೆ ಚೆಲ್ಲಾಡಿ ನಷ್ಟಕ್ಕೆ ಒಳಗಾದರು. ಅಣ್ಣನ ಮೇಲಣ ಕೋಪದಿಂದ ತಮ್ಮನೊಬ್ಬ ತನ್ನ ವೆಚ್ಚದಲ್ಲಿ ತನ್ನ ಆಸ್ತಿಯನ್ನು ಇನ್ನೊಬ್ಬನಿಗೆ ಕೊಟ್ಟು ಉದಾರಿಯಾದನು. ಇವೆಲ್ಲ ನಾನು ಸರಿಯಾಗಿ ತಿಳಿದ ವಿಚಾರಗಳು. ಗೌಡರ ಕೆಲವು ಕುಟುಂಬಗಳಲ್ಲಿ ಸದಾ ಹೋರಾಡುತ್ತಿದ್ದ ಅಣ್ಣ ತಮ್ಮಂದಿರು ಹೊಲಮನೆಗಳನ್ನು ಕಳೆದುಕೊಂಡ ಮೇಲೆ ಎಲ್ಲಿಯೋ ಕೊನೆಗೆ ಪ್ರೀತಿಯಿಂದ ಬಾಳುತ್ತಿದ್ದರು. ಎಲ್ಲವನ್ನೂ ಕಳೆದುಕೊಂಡ ಮೇಲೆ ತುಸು ತಾಳ್ಮೆಯನ್ನು ತಂದುಕೊಳ್ಳುತ್ತಾರೆ. ನಮ್ಮ ದಕ್ಷಿಣ ಕನ್ನಡದ ಪುತ್ತೂರು, ಮಂಗಳೂರು, ಕಾಸರಗೋಡು ತಾಲೂಕಿನ ಭಾಗಗಳಲ್ಲಿ ಹೋರಾಟ ಕೊಲೆಗಳು ಎಲ್ಲಿ ನಡೆಯಲಿ! ಅದರಲ್ಲಿ ಒಬ್ಬನಾದರೂ ಗೌಡ ಮಹನೀಯನಿರುತ್ತಾನೆ. ಬಿಸಿ ಹಾಲನ್ನು ಚೆಲ್ಲುವುದಲ್ಲಿ! ತುಸು ತಣಿಸಿ ಕುಡಿಯಬೇಕು; ತಾಳ್ಮೆ ಬೇಕೆಂಬುದನ್ನು ಮರೆತು ಬಿಡುತ್ತಾರೆ.

### ತಿಳಿಗೇಡಿತನ

ಗೌಡ ಸಮಾಜದ ಅವನತಿಗೆ ಕೆಲವರ ತಿಳಿಗೇಡಿತನವೂ ಕಾರಣವಾಗಿದೆ. ವಿದ್ಯಾವಂತರಲ್ಲಿ ಕೆಲವು

ಹೆರರನ್ನೇ ಹಿಂಬಾಲಿಸಿ ಕೊನೆಗೆ ಕಷ್ಟ ನಷ್ಟಗಳಿಗೆ ಒಳಗಾಗುತ್ತಾರೆ. ತಮ್ಮ ಹಣವನ್ನು ರಕ್ಷಿಸುವ ಧೈರ್ಯವಿಲ್ಲದೆ ಬೇಕಾದಾಗ ಪಡೆಯಬಹುದೆಂದು ಬೇರೆಯವರ ಕೈಗೆ ನೀಡಿ ಕೊನೆಗೆ ತನಗೆ ಸಿಗದೆ ಕಣ್ಣೀರಿಟ್ಟವರಿದ್ದಾರೆ. ಇದು ಹಳ್ಳಿಯಲ್ಲಿ ನಡೆದ ನಡೆವ ಸಂಗತಿ. ಕೊರವಂಜಿಯ ಕೋತಿಯಂತೆ ಇವರ ಬಾಳುವೆ.

## ಕುಡಿಕತನ

ಕುಡಿಕತನವೆಂಬುದು ಸಾಮಾಜಿಕ ಕ್ಷಯರೋಗ. ಅಂದು ಇತ್ತು, ಇಂದೂ ಇದೆ. ಯಾದವ ರತ್ನ ಭಗವಾನ್ ಕೃಷ್ಣನ ಮೇಲೆ ಹೆಚ್ಚಿನ ಭಕ್ತಿಯಿಲ್ಲದಿದ್ದರೂ ಹೆಂಡ ಕುಡಿದು ತಾವು ತಾನೇ ಬಡಿದಾಡಿಕೊಂಡು ಮಣ್ಣುಗೂಡಿದ ಯಾದವರ ಕುಡಿಕತನವನ್ನೂ ಹುಚ್ಚಾಟವನ್ನೂ ಬಿಡಲಾರದ ಗೌಡರಿದ್ದಾರೆ. ಬಡಗೌಡರಲ್ಲಿ ಹೆಂಡ ಸಾರಾಯಿ ಕುಡಿಯದ ಗೌಡರನ್ನು ಹುಡುಕಿದರೆ ಬೆರಳೆಣಿಕೆಗೆ ಬೇಕಾದನಿತು ಮಂದಿಯೂ ದೊರೆಯಲಾರರು, ತಿಳಿಗೇಡಿಗಳೆಂದು ಅವರ ಕುರಿತು ಅನುಕಂಪ ತೋರಬಹುದು. ಆದರೆ, ವಿದ್ಯಾವಂತರೂ ವಿಚಾರ ಶೀಲರೂ ಸಮಾಜ ಸುಧಾರಕರೂ ಗಣ್ಯವ್ಯಕ್ತಿಗಳೂ ಆದವರೇ ಕುಡಿಯ ತೊಡಗಿದರೆ ತಿದ್ದುವರಾರು? ಹೇಗೆ? ಪಡಪೋಷರಲ್ಲಿ ಕೆಲವರು ಒಳಗಣ ಕುಡಿಕರಾಗುತ್ತಾರೆ. ಘನವಂತರು ಮೇಲ್ಮೆಯೆಂದು ಬ್ರಾಂಡಿವಿಸ್ಕಿಗಳನ್ನು ಕುಡಿಯುತ್ತಾರೆ. ಹಳ್ಳಿಯಲ್ಲಿ ಹೆಂಡ ಸಾರಾಯಿ ಕುಡಿಯದವನನ್ನು ಕುಡಿಕರು ಮುಟ್ಟದೆ ಹಳಿಯುವುದೂ ಒಮ್ಮೊಮ್ಮೆ ಕೈಮಾಡುವ ಸಾಹಸ ಮಾಡುವುದೂ ಉಂಟು. ಕುಡಿಕನಿಗೆ ಊರೆಲ್ಲ ಗೆಳೆಯರು ಕುಡಿಯದವನ ಗೆಳೆಯರು ಕೆಲವರೇ ; ಅವರೂ ನಡುದಾರಿಯವರು. ಕುಡಿಕತನವನ್ನು ಯಾವ ಸಮಾಜ ಬಿಟ್ಟರೂ ಗೌಡರಲ್ಲಿ ಕೆಲವರು ಬಿಡಲಾರರೆಂದು ನನಗನ್ನಿಸುತ್ತದೆ.

## ಸ್ತ್ರೀವಿದ್ಯಾಭ್ಯಾಸ

ಹೆಣ್ಣುಮಕ್ಕಳಿಗೇಕೆ ವಿದ್ಯೆ? ಕಸವ ಗುಡಿಸಬೇಕು! ಮುಸರೆ ತೊಳೆಯಬೇಕು! ಅಡಿಗೆ ಮಾಡಲು ಸಾಕು!, ಎಂಬ ಮನೋಭಾವ ಇನ್ನೂ ಮಾಯವಾಗಿಲ್ಲ. ಆದರೆ, ಈಗೀಗ ಹುಡುಗಿಯರಲ್ಲಿ ವಿದ್ಯಾವತಿಯರು ಕಾಣುತ್ತಿರುವುದೊಂದು ಶುಭಲಕ್ಷಣ; ತಾಯಂದಿರ ಹುಟ್ಟುಗುಣ ಗಂಡು ಮಕ್ಕಳಲ್ಲಿಯೂ ತಂದೆಯಂದಿರ ಗುಣ ಹೆಣ್ಣು ಮಕ್ಕಳಲ್ಲಿಯೂ ಕಾಣಿಸುವುದೆಂದು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ಆದುದರಿಂದ ಸಮಾಜದ ಏಳಿಗೆಯಾಗಬೇಕೆಂದು ಬಯಸುವವರೆಲ್ಲ ತಮ್ಮ ಹೆಣ್ಣು ಮಕ್ಕಳನ್ನು ವಿದ್ಯಾವತಿಯರಾಗುವಂತೆ ಶಿಕ್ಷಣ ಕೊಡಿಸಬೇಕು.

## ವೃತ್ತಿ

ಗೌಡರು ಕೃಷಿಯ ವೃತ್ತಿಯನ್ನೇ ಮೆಚ್ಚುವವರು, ಆದರೆ, ಸಾಮಾಜಿಕ ಏಳಿಗೆಯ ದೃಷ್ಟಿಯಿಂದ ವ್ಯಾಪಾರ, ಕೈಗಾರಿಕೆ, ಸರಕಾರಿ ಕೆಲಸ, ಮೊದಲಾದುವೂ ಅಗತ್ಯವೆಂದು ತಿಳಿದು ಕೆಲವರು ಬೇರೆ ಬೇರೆ ವೃತ್ತಿಗಳಿಗಿಳಿಯುವುದು ಒಳ್ಳೆಯದು. ಗೌಡರಲ್ಲಿ ಬರೆಹಗಾರರ ಲೇಖಕರ ಕವಿಗಳ ಸಂಖ್ಯೆ ಹೆಚ್ಚುತ್ತಾ ಹೋದರೆ ಸಮಾಜದ ಮೇಲೆ ಅಮೃತದ ಮಳೆ ಸುರಿದಂತಾಗುವುದು. ಮುಂದಿನ ಏಳಿಗೆಗೆ ಮಹೋನ್ನತ ದೃಷ್ಟಿಯಿರಲಿ! ವಿದ್ಯಾವಂತರಿಗೆ ಸಹಸ್ರ ಹಸ್ತಗಳೂ ಸಹಸ್ರ ಶೀರ್ಷಗಳೂ ಉಳ್ಳ ಭಗವಂತನ ನೆನಪಿರಲಿ!



# ಗೌಡ ಸಂಸ್ಕೃತಿ ಮತ್ತು ಒಗ್ಗಟ್ಟು

ಲೇಖಕರು :- ಶ್ರೀ ತೊತ್ತಿಯನ ಮಂದಣ್ಣ Bsc. ಮೈಸೂರು.

(ಶ್ರೀ ತೊತ್ತಿಯನ ಮಂದಣ್ಣನವರು ಮೈಸೂರಿನಲ್ಲಿ B.Sc., ತರಗತಿಯಲ್ಲಿ ವಿದ್ಯಾಭ್ಯಾಸ ಮಾಡಿದ್ದಾರೆ ಶ್ರೀ ತೊತ್ತಿಯನ ಮಂದಣ್ಣನವರು ಗೌಡ ಸಮಾಜದ ಹಲವಾರು ಲೋಪದೋಷಗಳನ್ನು ಎತ್ತಿ ತೋರಿಸಿದ್ದಾರೆ. ಮಾತೃ ಭಾಷೆಯ ಮಹತ್ವ ಮತ್ತು ಸಂಸ್ಕೃತಿಯ ಸೋಪಾನದಮೇಲೆ ಸಮಾಜವನ್ನು ರೂಪಿಸಬೇಕೆಂಬ ಹಬ್ಬಯಕೆ ಶ್ರೀ ಮಂದಣ್ಣನವರದ್ದಾಗಿದೆ. ಸಮಾಜದ ಕಟ್ಟು ಕಟ್ಟಳೆಗಳು ಕೆಲವುರೀತಿಯಲ್ಲಿ ದೇಶದ ಆರ್ಥಿಕ ಹಾಗೂ ಸಾಮಾಜಿಕ ಮಾರ್ಪಾಡುಗಳಿಗೆ ಹೊಂದಿಕೊಂಡು ಹೋಗುವ ಹಾಗಿರಬೇಕು. ಆ ರೀತಿ ಹೊಂದಿಕೊಂಡು ಹೋಗುವಾಗ ತನ್ನ ಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸಿಕೊಂಡು ಮುಂದುವರಿಯಬೇಕೆಂಬ ಬಯಕೆ ಶ್ರೀ ಮಂದಣ್ಣನವರದ್ದಾಗಿದೆ-ಸಂ.)

"ನಮ್ಮವು ಬಹಳ ಹಿಂದೆ ಬಿಳಿ ಹೊಟ್ಟೆಕಿಚ್ಚು, ಕೇಡು, ಮತ್ಸರಕ್ಕೆ ಮಾತ್ರ ಅವ್ರು-ನಮ್ಮವು ಅವ್ರಕ್ಕಿಂತ ಕಡೆ, ಇವ್ರಕ್ಕಿಂತ ಕಡೆ.. .. ಇತ್ಯಾದಿ ನೂರೆಂಟು ಅವಹೇಳನಗಳು ಹೆಚ್ಚಿನ ಜನರಿಂದ ತಮ್ಮ ಜನಾಂಗದ ಬಗ್ಗೆ ಪ್ರಸ್ತಾಪಿಸಿದಾಗ ಬರುವ ಮೊದಲಮಾತುಗಳಾಗಿವೆ. ಈ ಮಾತುಗಳನ್ನು ಕೇಳಿದಾಗ ಮಾತನ್ನಾಡಿದ ವ್ಯಕ್ತಿ ಉತ್ತಮನಿರಬೇಕೆಂದು ಹೊಳೆಯುತ್ತದೆ. ಹೆಚ್ಚಿನ ಮಂದಿ ಈ ರೀತಿ ಆಡಿಕೊಳ್ಳುತ್ತಿರುವುದರಿಂದ ಉಳಿದ ಕೇವಲ ಕೆಲವು ಮಂದಿ ಮಾತ್ರ ಮೇಲಿನ ನುಡಿಗಳಿಗೆ ಒಳಪಡುವರೋ ಎಂಬ ಸಂಶಯ ಉದ್ಭವಿಸುತ್ತದೆ. ನಿಜಾಂಶವನ್ನು ಪರಾಂಬರಿಸಿದಲ್ಲಿ ಧರ್ಮಾಚಾರ್ಯರು ಆಡಿದ ಮಾತು ನಮ್ಮ ಸಂಶಯವನ್ನು ಇತ್ಯರ್ಥಪಡಿಸುತ್ತದೆ. ಒಬ್ಬ ವ್ಯಕ್ತಿ ಬೆರಳು ತೋರಿಸಿ ಇನ್ನೊಬ್ಬನನ್ನು ಹಿಯ್ಯಾಳಿಸಿದಾಗ ಉಳಿದ ನಾಲ್ಕು ಬೆರಳುಗಳು ಆತನನ್ನೇ ತೋರಿಸುತ್ತಿರುತ್ತವೆ. ತನ್ನ ಜನಾಂಗದ ಹಿರಿಮೆ, ಘನತೆಗಳನ್ನು ಅರಿಯದೆ ಜನಾಂಗದ ಮೇಲಿನ ಅಭಿಮಾನವನ್ನು ತೊರೆದಿರುವುದೇ ಈ ರೀತಿಯ ಅವಹೇಳನಗಳಿಗೆ ಕಾರಣಗಳೆನ್ನಬಹುದು.

ಒಂದು ಕುಟುಂಬದ ಸದಸ್ಯರೆಲ್ಲರೂ ತಮ್ಮ ತಮ್ಮ ಸ್ಥಾನದಲ್ಲಿದ್ದು, ಪ್ರೀತಿ, ಗೌರವ, ಆದರಗಳಿಂದ ವರ್ತಿಸಿದರೆ ಆ ಕುಟುಂಬದಲ್ಲಿ ಶಾಂತಿ ನೆಲಸುತ್ತದೆ. ಅಂತಹ ಕುಟುಂಬ ಸಕಲ ಪ್ರಗತಿಯನ್ನು ಹೊಂದುತ್ತದೆ. ಸದಸ್ಯರು ಒಬ್ಬರನೊಬ್ಬರು ಹಿಯ್ಯಾಳಿಸಿಕೊಂಡಲ್ಲಿ ಕುಟುಂಬದೊಳಗೆ ಒಗ್ಗಟ್ಟು ಇಲ್ಲದೆ, ಪ್ರೇಮವು ನಶಿಸಿ, ಅಶಾಂತಿಯು ತಲೆದೋರುತ್ತದೆ. ಇದೇ ರೀತಿ ನಮ್ಮ ಗೌಡ ಜನರು ಕೂಡ ಒಂದು ಸುಸಂಸ್ಕೃತಿ ಹೊಂದಿರುವ ಕುಟುಂಬ-ನಾವು ಸರ್ವ ವಿಧದಲ್ಲೂ ಪರಿಪೂರ್ಣರು. ನಮ್ಮದೇ ಆದ ಭಾಷೆ, ಸಂಪ್ರದಾಯ, ಪದ್ಧತಿ, ಆಚಾರ ವಿಚಾರಗಳು ಇವೆ. ಊರು

ಪಾರು ಹಿಡುವಳಿಯಿದ್ದರೂ ಸುಖಜೀವನ ನಡೆಸಲು ಬಲ್ಲವರು ನಾವು. ಸ್ವಾವಲಂಬನೆಯ ಹೆಚ್ಚಿನ ಮಟ್ಟವನ್ನು ಹೊಂದಲು ನಮ್ಮ ಗೌಡ ಜನಾಂಗಕ್ಕೆ ಅರ್ಹತೆ ಇದೆ. ಇಂತಹ ಸುಸಂಸ್ಕೃತಿಯ ಜನಾಂಗವನ್ನು ರಚಿಸುವಲ್ಲಿ ನಮ್ಮ ಪೂರ್ವಜರು ಕಾರಣರಾದರು. ಕೆಲವು ಲೇಖಕರ ಹೇಳಿಕೆಯಂತೆ ನಮ್ಮ ಜನಾಂಗ ವಿಜಯನಗರದ ಇಕ್ಕೇರಿ ಸಂಸ್ಥಾನದಿಂದ ಮಹಮದೀಯರ ದಾಳಿಯ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೆ ಬಂದು ನೆಲಸಿದರು. ವೀರರಾಜರ ಆದೇಶದಂತೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಕೆಲವು ಮಂದಿ ಕೊಡಗಿಗೆ ಬಂದು ನೆಲಸಿದರೆಂಬುದು ನಮಗೆ ತಿಳಿದಿದೆ. ನಮ್ಮ ಪೂರ್ವಜರು ಹೇಡಿಗಳಾಗಿದ್ದು, ಬರೀ ಸಂಪತ್ತಿನ ವ್ಯಾಮೋಹದಿಂದ ಕೂಡಿದ್ದಿದ್ದರೆ ಜಾತಿ ಭ್ರಷ್ಟರಾಗಿ ಸಂಸ್ಕೃತಿಯನ್ನು ಕಳೆದುಕೊಂಡು ಮಹಮದೀಯರ ಗುಲಾಮರಾಗಿ ಅವರಿಂದ ಉಳಿಯುತ್ತಿದ್ದರು. ಇದಕ್ಕೆಬದಲಾಗಿ ಶತಮಾನಗಳಿಂದ ಗಳಿಸಿದ್ದ ಆಸ್ತಿಪಾಸ್ತಿಯನ್ನು ತೊರೆದು ಸಂಸ್ಕೃತಿ ಎಂಬ ಗಂಟನ್ನು ಹೊತ್ತು ತುಂಬು ಹೃದಯದಿಂದ ನೆಮ್ಮದಿಯ ನೆಲೆಯನ್ನು ಅರಸುತ್ತಾ ಮುನ್ನಡೆದು ನಮ್ಮೆಲ್ಲರ ಏಳಿಗೆಗೆ ಕಾರಣರಾದರು. ಇಂತಹ ಸುಸಂಸ್ಕೃತಿ ವೃಕ್ಷದ ಚಿಗುರುಗಳಾದ ನಾವು ಈಗಲಾದರೂ ಹಿರಿಯರ ಪಥದ ಸಿಂಹಾವಲೋಕನ ಮಾಡಬೇಕು. ತೊದಲು ನುಡಿಯಿಂದ ಬೆಳೆದ ನಾಲಗೆ ಮೊತ್ತಮೊದಲಿಗೇ ತನ್ನ ಹಿನ್ನೆಲೆಯನ್ನು ಹಳಿಯುವಂತಾಗಬಾರದು. ತನ್ನ ಜನರ ಬಗ್ಗೆ ಪ್ರೀತಿ ಮತ್ತು ಗೌರವ ತೋರಬೇಕು. ಆಗ ಮಾತ್ರ ತನ್ನ ವ್ಯಕ್ತಿತ್ವಕ್ಕೆ ಗೌರವ ಬರುತ್ತದೆ. ಇಂತಹ ವ್ಯಕ್ತಿತ್ವದ ಪ್ರೀತಿಯು ಜನರ ಅಭಿವೃದ್ಧಿಯನ್ನು ಸಾಧಿಸುವುದು.

ಜನರು ಅಭಿವೃದ್ಧಿಯಾಗಬೇಕಾದರೆ ಪ್ರತಿಯೊಬ್ಬನೂ 'ನಮ್ಮ ಜನ' ಎಂಬ ಮಹಾವೃಕ್ಷದ ಯಾವುದೋ ಒಂದು ಅಂಗದ ಒಂದು ಅಂಶ ನಾನು ಎಂಬ ಅರಿವನ್ನು ಹೊಂದಬೇಕು. ವೃಕ್ಷದ ಮುಖ್ಯ ಅಂಗಾಂಗಗಳಾದ ಬೇರು, ಕಾಂಡ ಮತ್ತು ಎಲೆಗಳು ಭಿನ್ನ ಆಕೃತಿಯನ್ನು ಹೊಂದಿದ್ದು ವಿವಿಧ ಹಂತಗಳಲ್ಲಿ ಇದ್ದರೂ ತಮ್ಮ ಪಾಲಿನ ಕಾರ್ಯವನ್ನು ಕ್ರಮದಂತೆ ಜರುಗಿಸುತ್ತಿರುವುದರಿಂದ ವೃಕ್ಷವು ದಿನದಿಂದ ದಿನಕ್ಕೆ ವೃದ್ಧಿಯಾಗುತ್ತದೆ. ಇದೇ ರೀತಿಯಲ್ಲಿ 'ನಮ್ಮ ಜನರು' ಎಂಬ ವೃಕ್ಷದ ಅಂಗಾಂಗಗಳ ಅಂಶಗಳಾದ ನಾವು ನಮ್ಮಲ್ಲಿನ ಜೀವನ ಮಟ್ಟದ ಏರುಪೇರುಗಳನ್ನು ಗಮನಿಸದೆ, ನಾವೆಲ್ಲರೂ ಸಮಾನರು ಎಂಬ ಭಾವನೆಯಿಂದ ಜನರ ಏಳಿಗೆಯ ದಿಸೆಯಲ್ಲಿ ನಮ್ಮ ಪಾಲಿನ ಕಾರ್ಯ ಕ್ಷೇತ್ರದಲ್ಲಿ ಕಾರ್ಯ ತತ್ಪರರಾದರೆ ಮಾತ್ರ ನಮ್ಮ ಜನಾಂಗ ಅಭಿವೃದ್ಧಿ ಹೊಂದುವುದು ಒಂದು ವೃಕ್ಷವು ತನ್ನ ಸುತ್ತಲಿನ ವೃಕ್ಷಗಳಿಗಿಂತ ಉನ್ನತವಾಗಿ ಬೆಳೆದಲ್ಲಿ ಅದು ಪ್ರಕೃತಿಯ ಹೆಚ್ಚಿನ ಸೌಲಭ್ಯಗಳನ್ನು ಹೊಂದುವಂತೆ ಪ್ರಜಾರಾಜ್ಯದಲ್ಲಿ ಅಭಿವೃದ್ಧಿಮಟ್ಟದಲ್ಲಿರುವ ಜನಾಂಗಕ್ಕೆ ಹೇರಳ ಮಾನ್ಯತೆ ದೊರೆಯುವುದು. ಆಗ ಜನಾಂಗದ ಪ್ರತಿಯೊಬ್ಬನೂ ಸುಖಿಯಾಗಬಲ್ಲನು.

ಬಾಳಿನುದ್ದಕ್ಕೂ ಪದ್ಧತಿ ಮತ್ತು ಆಚಾರವಿಚಾರಗಳೆಂಬ ಹಗ್ಗದಿಂದ ಬಿಗಿಯಲ್ಪಟ್ಟ ನಮ್ಮ ಜನರಲ್ಲಿ ಈ ಹಿಂದೆ ಒಗ್ಗಟ್ಟು ನೆಲಸಿತ್ತು. ಮತ್ಸರ ದ್ವೇಷಭಾವನೆ ಜನಾಂಗದೊಳಗೆ ಜನ್ಮ ತಾಳಿರಲಿಲ್ಲ. "ನಾನು ಮತ್ತು ನನ್ನ ಜನರು" ಎಂಬ ಹೆಮ್ಮೆ ಪ್ರತಿಯೊಬ್ಬನಲ್ಲಿಯೂ ತುಂಬಿ ತುಳುಕಾಡುತಿತ್ತು. ಆದರೆ ಇತ್ತೀಚೆಗೆ ಒಗ್ಗಟ್ಟು ಎಂಬ ಅಮೂಲ್ಯವಸ್ತು ದಿನದಿಂದ ದಿನಕ್ಕೆ ಕ್ಷೀಣಿಸುತ್ತಿರುವುದು ನಮಗೆ ಗೋಚರಿಸುತ್ತಿದೆ. ಜನಾಂಗದ ಮೇಲಿನ ಅಭಿಮಾನ, ನಮ್ಮ ಭಾಷೆಯ ಘನತೆ, ಮತ್ತು ಪದ್ಧತಿಗಳ ಹಿರಿಮೆ ಇವುಗಳನ್ನು ಕೆಲವರು ಕಡೆಗಣಿಸುತ್ತಿರುವುದೇ ಒಗ್ಗಟ್ಟಿನ ಕ್ಷೀಣಗತಿಗೆ ಮುಖ್ಯಕಾರಣವಾಗಿದೆ.

ನಮ್ಮ ಗೌಡ ಜನರು ಕೊಡಗು ಮತ್ತು ದಕ್ಷಿಣ ಕನ್ನಡದಲ್ಲಿ ಹೆಚ್ಚಾಗಿ ಇದ್ದಾರೆ. ಕೊಡಗಿನ ಗೌಡರ ತವರೂರು ದಕ್ಷಿಣ ಕನ್ನಡ ಜಿಲ್ಲೆಯೆಂದರೆ ತಪ್ಪಾಗದು. ಈ ಎರಡು ಜಿಲ್ಲಾ ಗೌಡರ ಭಾಷೆ, ಪದ್ಧತಿ, ಆಚಾರವಿಚಾರಗಳು ಸಾಮಾನ್ಯ ಒಂದೇರೀತಿಯಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಹಲವು ಗೌಡಕುಟುಂಬಗಳಲ್ಲಿ ಮನೆ ಭಾಷೆ ತುಳು ಆಗಿದ್ದರೂ ಆದಿಯಲ್ಲಿ ಅವರೆಲ್ಲ ಕನ್ನಡವನ್ನಾಡುತ್ತಿದ್ದರು ಎಂಬ ಹೇಳಿಕೆಗಳಿವೆ. ಇವರ ಭಾಷೆ ತುಳುವಾದರೂ ಪದ್ಧತಿ ಪೂರ್ತಿ ಬೇರೆ ಗೌಡರದ್ದಾಗಿದ್ದು ನಾವೆಲ್ಲಾ ಒಂದೇ ಜನರೆಂದು ಆಧಾರ ಪೂರ್ಣವಾಗಿ ಹೇಳಬಹುದು. 'ಗೌಡ ಜನ'

ಎಂಬ ಒಂದೇ ವೃಕ್ಷದ ಕೊಂಬೆಗಳಾದ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಗೌಡ ಜನರು ಪ್ರತ್ಯೇಕ ಜನ ರೆಂದು ಹೇಳಿಕೊಳ್ಳುವುದು ಅರ್ಥಹೀನವಾಗಿದೆ. ಅಲ್ಲದೆ ಪ್ರತಿಯೊಬ್ಬನಲ್ಲಿ ತನ್ನ ಜನಾಂಗದ ಹಿರಿಮೆಯ ಮೇಲೆ ಅಡಗಿರುವ ಅಭಿಮಾನ ಇಬ್ಭಾಗವಾಗುತ್ತದೆ. ಇದೇ ರೀತಿಯ ಮನೋಗತಿ ಮುಂದುವರಿದರೆ ಈ ವಿಶಾಲ ಗೌಡ ಜನರು ಹರಿದು ಚೂರಾಗಿ ನಾಡಿಗೆ ಒಂದರಂತೆ ನೆಲಸ ಬಹುದು ಆಗ ಭಾಷೆ ಮತ್ತು ಪದ್ಧತಿಗಳು ವಿಕಾರ ರೂಪ ತಾಳಿ ನಮ್ಮ ಅಮೂಲ್ಯ ಸಂಪತ್ತಿನ ಕಣಜವಾಗಿರುವ ಸಂಸ್ಕೃತಿ ನಶಿಸಿ ಇಗ್ಗಟ್ಟಿನ ಸುಳಿಯಲ್ಲಿ ಮುಳುಗಬಹುದು. ಈ ವಿನಾಶಕಾರಿ ಅಭಿಪ್ರಾಯಗಳನ್ನು ಪರಾಂಬರಿಸಿ ಜನರ ಮೇಲಿನ ಅಭಿಮಾನವನ್ನು ಹೊತ್ತು ಮುನ್ನಡೆದರೆ ಒಗ್ಗಟ್ಟಿನ ಮೊದಲ ಹಂತವು ಭದ್ರಗೊಳ್ಳುತ್ತದೆ.

ಮಾನವನು ನಾಗರಿಕತೆಯ ಮೆಟ್ಟಲನ್ನು ಏರಲು ಭಾಷೆಯ ಬೆಳವಣಿಗೆಯೂ ಒಂದು ಕಾರಣವಾಗಿದೆ. ಒಂದೊಂದು ಭಾಷೆಯು ಬೆಳೆದು ಬಂತು. ಆದಿಕಾಲ ದಿಂದಲೂ ನಮ್ಮದೇ ಆದ ನಮ್ಮ ಭಾಷೆಯು ನಮ್ಮೊಂದಿಗೆ ಬೆಳೆದು ಬಂದಿದೆ. ಸಮಾಜದಲ್ಲಿ ಸುಸಂಸ್ಕೃತಿಯ ಜನಾಂಗ ಎಂದು ಹೆಸರುವಾಸಿಯಾಗಲು ನಮ್ಮ ಭಾಷೆಯ ಘನ ತೆಯೇ ಮುಖ್ಯ. ಯಾವುದೇ ಭಾಷೆಯ ಬೆರಕೆಯಿಲ್ಲದ ಪರಿಶುದ್ಧವಾದ ಭಾಷೆ ನಮ್ಮದು. ಆದ್ದರಿಂದ ನಮ್ಮ ಭಾಷೆಯನ್ನು 'ಮೂಲಕನ್ನಡ' ವೆಂದು ಕರೆಯಬೇಕಾಗಿದೆ. ಜನಾಂಗದ ಸಂಸ್ಕೃತಿಯನ್ನು ಮತ್ತು ಒಗ್ಗಟ್ಟನ್ನು ಭಾಷೆಯು ಕಾಪಾಡುತ್ತದೆ. ಆದರೆ ಇಂದಿನ ದಿನಗಳಲ್ಲಿ ಈ ಪವಿತ್ರವಾದ ಮನೆಭಾಷೆಯ ಮೇಲಿನ ಮಮತೆ ಕೆಲವರಲ್ಲಿ ಮರೆಯಾಗುತ್ತಿದೆ. ವಿದ್ಯಾವಂತರಾದ ಕೂಡಲೇ ಕೆಲವರು ಅನ್ಯಭಾಷಾ ಪದಗಳನ್ನು ನಮ್ಮ ಭಾಷೆಯೊಂದಿಗೆ ಬಳ ಸುತ್ತಾ ಅದರ ಪರಿಶುದ್ಧತೆಯನ್ನು ಮುರಿದು ತಮ್ಮ ಘನತೆ ಯನ್ನು ಹೆಚ್ಚಿಸಲು ಹವಣಿಸುತ್ತಾರೆ. ಉದ್ಯೋಗ ಪಡೆದು ಪಟ್ಟಣಗಳಲ್ಲಿ ಜೀವಿಸಲು ತೊಡಗಿದ ಒಂದೆರಡು ವರ್ಷಗಳಲ್ಲಿಯೇ ತಾಯಿ ಭಾಷೆಯನ್ನು ತೊರೆದು, ಹೊಸ ಕನ್ನಡವನ್ನು ಅಪ್ಪಿ, ತಾಯಿಭಾಷೆಯ ಅರಿವೇ ಇಲ್ಲದಂತೆ ವರ್ತಿಸುವವರೂ ಗೋಚರಿಸುತ್ತಿದ್ದಾರೆ. ಕೆಲವು ದಶಕ ಗಳಿಂದ ಹೊಸಕನ್ನಡಿಗರಾದ ಕೆಲವು ಕುಟುಂಬಗಳೂ ಇವೆ.

"ಹೋತ್‌ಗಡ ಬಾತ್‌ಗಡ ಅಂಬಲಿ ಮಡಕೆ ತೂತ್‌ಗಡ" ಎಂಬ ಅಪಸ್ವರದಿಂದ ನಮ್ಮ ಮಾತೃಭಾಷೆಯನ್ನು ಕಡೆ ಗಣಿಸುವ ಕೆಲವುಮಂದಿ ನಮ್ಮವರೇ ಅವತಾರವೆತ್ತಿದ್ದಾರೆ. ಸಾರ್ವಜನಿಕ ಕ್ಷೇತ್ರಗಳಲ್ಲಿ ತಮ್ಮ ಬಂಧುಬಳಗದೊಂದಿಗೆ ತಮ್ಮ ತಾಯ್ನುಡಿಯಲ್ಲಿ ಮಾತಾಡಲು ಅಂಜುವ ಹೇಡಿ ಗಳೂ ನಮ್ಮಲ್ಲಿ ಇದ್ದಾರೆ. ಈ ರೀತಿಯಿಂದ ಮೊದಲು ಭಾಷೆಯ ಮೇಲಿನ ಅಭಿಮಾನ ಕಳೆದುಕೊಂಡು, ನಂತರ ಜನರ ಮೇಲಿನ ಅಭಿಮಾನ ತೊರೆದು, ಕೊನೆಯ ಹಂತದಲ್ಲಿ ಸ್ವದೇಶಾಭಿಮಾನವನ್ನು ಕಳಕೊಂಡರೂ ಕಳ ಕೊಳ್ಳಬಹುದು. ಪರಭಾಷೆ ಮೋಹದಿಂದ ಜನರು ನಾಲ್ಕಾರು ಗುಂಪುಗಳಾಗಿ ಒಡೆದು ಕಾರ್ಯಕ್ಷೇತ್ರದಲ್ಲಿ ಪರಸ್ಪರ ಹೊಂದಾಣಿಕೆಯಿಲ್ಲದೆ ಪ್ರಗತಿ ಪಥವು ಮುರಿದು ಪುಣ್ಣುಗೂಡುವುದು. ಆದ್ದರಿಂದ ಅನ್ಯಭಾಷೆಯ ಪಾತ್ರೆಗೆ ಕೈಯಿಕ್ಕುತ್ತಿರುವ ಈ ಪ್ರಥಮ ಹಂತದಲ್ಲಿಯೇ ಜನರ ಮೇಲೆ ಅಭಿಮಾನ ತಾಳಿ ನಮ್ಮ ತಾಯ್ನುಡಿಯನ್ನು ಗೌರ ವಿಸಿ ಪರಭಾಷೆಗಳ ವ್ಯಾಮೋಹ ತೊರೆಯಬೇಕು.

'ಆದಿಯಿಂದಲೂ ಸುಸಂಸ್ಕೃತಿಯ ಜನರು ನಮ್ಮ ವರು' ಎಂಬುದನ್ನು ನಮ್ಮ ಪದ್ಧತಿಗಳು ಎತ್ತಿ ತೋರಿಸು ತ್ತಿವೆ. ಬಾಳಿನುದ್ದಕ್ಕೂ ಎಲ್ಲಾವಿಧಿಗಳ ಕ್ರಮಬದ್ಧತೆ ಯನ್ನು ಪದ್ಧತಿಯು ಕಾಯುತ್ತಿರುತ್ತದೆ. ಒಂದೇಮಾತಿನಲ್ಲಿ ಹೇಳುವುದಾದರೆ ಪ್ರಜಾರಾಜ್ಯದ ಸಂವಿಧಾನದಂತೆ, ಪದ್ಧತಿ ನಮ್ಮ ಜನಾಂಗದ ಸಂವಿಧಾನ. ಇತ್ತೀಚೆಗೆ ಕೆಲವು ರಂಗಗಳಲ್ಲಿ ಪದ್ಧತಿಯನ್ನು ಬದಿಗೊತ್ತಿ ನಡೆಯುತ್ತಿದ್ದೇವೆ. ಸ್ವಗೋತ್ರ ಲಗ್ನ, ವರದಕ್ಷಿಣೆ, ಇತ್ಯಾದಿಗಳನ್ನು ಉದಾ ಹರಿಸಬಹುದು. ಇದರಿಂದ ನಿಜಕಾರ್ಯಕ್ಷೇತ್ರದಲ್ಲಿ ತಾವು ಅಸಮರ್ಥರೆಂದು ಕಾಣಿಸಿಕೊಂಡಂತಾಗುತ್ತದೆ. ಪದ್ಧತಿ ಯನ್ನು ತೊರೆದು ಎಸಗಿದ ಕಾರ್ಯಗಳಲ್ಲಿ ತಾತ್ಕಾಲಿಕ ಸುಖ ಒದಗಿದರೂ ಬಾಳಿನುದ್ದಕ್ಕೂ ಎಡರು ತೊಡರುಗಳೇ ಹೆಚ್ಚು ಎಂಬುದು ಎಲ್ಲರ ಅನುಭವಕ್ಕೆ ಬರುವ ಸತ್ಯಾಂಶ. ಪದ್ಧತಿಯೆಂಬ ಆಯಕಟ್ಟನಲ್ಲಿ ಬಿಗಿಯಲ್ಪಟ್ಟ ನಮ್ಮ ಸಂಸ್ಕೃತಿಯನ್ನು ನಾವು ಕಾಪಾಡಬೇಕೇ ವಿನಹ ಅದನ್ನು ಮುರಿಯುವಂತವರಾಗಬಾರದು.

ಅಧಿಕಾರ ಸ್ಥಾನದ ಹೆಬ್ಬಯಕೆಯ ಅಮಲು ಕೆಲ ವೆಡೆ ಜನಾಂಗದ ಒಗ್ಗಟ್ಟನ್ನು ಮುರಿಯಲು ಪ್ರಯತ್ನಿಸು

ತ್ತಿದೆ. ಜನಾಂಗದ ದೃಷ್ಟಿಯಲ್ಲಿ ತನ್ನ ಪಾಲಿನ ಕರ್ತವ್ಯವೇನು ಎಂಬುದನ್ನು ವಿಚಾರಿಸದೆ ಸ್ವಾರ್ಥತೆಯ ದೃಷ್ಟಿಕೋನವನ್ನು ಹೊಂದಿ, ತನ್ನ ಪ್ರತಿಭೆಯನ್ನು ಅಧಿಕಾರ ಸ್ಥಾನದಿಂದಲೇ ಜನಾಂಗಕ್ಕೆ ಕಾಣಿಸಬೇಕು ಎಂದು ಹೋರಾಡುವವರು ಅಲ್ಲಿ ಇಲ್ಲಿ ಇದ್ದಾರೆ. ನಿಸ್ವಾರ್ಥತೆಯಿಂದ ಜನಾಂಗದ ಕಲ್ಯಾಣ ಕಾರ್ಯವನ್ನು ಮಾಡುವವರೂ ಇದ್ದಾರೆ. ಈ ಎರಡೂ ವರ್ಗಕ್ಕೆ ಬೆಂಗಾವಲಾಗಿರುವುದು ನಮ್ಮ ಜನಾಂಗವೇ. ಇಂದಿನ ಯುಗವೆಂಬ ಸಾಗರದಲ್ಲಿ ಗೌಡ ಜನಾಂಗದ ದೋಣಿಯಲ್ಲಿ ನಾವೆಲ್ಲ ಕುಳಿತು ಅದನ್ನು ನಡೆಸಲು ಇಕ್ಕಡೆಗಳಲ್ಲಿ ಭಿನ್ನಗುರಿ ನೋಟದ ಇಬ್ಬರು ಅಂಬಿಗರನ್ನು ಚುಕ್ಕಾಣಿಧಾರಿಗಳನ್ನಾಗಿ ಮಾಡಿದರೆ ಹೇಗೋ ಹಾಗಾಗುತ್ತದೆ ನಮ್ಮ ಜನಾಂಗದ ಪ್ರಗತಿಪಥದ ಯಾನ. ಜನತೆಯ ಎದುರು ಕುರುಡು ಸೂತ್ರಗಳನ್ನು ಹಿಡಿದು ಅವರ ಮನೋಗತಿಯನ್ನು ಬದಲಿಸಿ ತಮ್ಮ ಸ್ವಾರ್ಥಬಯಕೆಯ ಅಧಿಕಾರ ಪೀಠವನ್ನು ಭದ್ರಪಡಿಸಲು ಹವಣಿಸುತ್ತಿರುವ ಕಾರ್ಯಕರ್ತೃಗಳು ವಿಶಾಲ ಮನೋಭಾವನೆಯಿಂದ ಬರೇ ಅಧಿಕಾರ ಪೀಠದ ಆಶೆ, ಮತ್ತು ಸ್ವಾರ್ಥತೆಯ ಅಮಲು ಇವೆರಡನ್ನು ತೊಲೆದು ಜನಾಂಗದ ಒಗ್ಗಟ್ಟಿಗೆ ನೆರವಾಗುವಂತಹುದು ಗೌಡ ಜನರ ಹಿರಿಮೆಯ ಹಿನ್ನಲೆಯನ್ನು ವ್ಯಕ್ತಪಡಿಸುತ್ತದೆ.

ಜನರ ಮೇಲಿನ ಅಭಿಮಾನ, ತಾಯ್ನುಡಿಯ ಘನತೆ, ಪದ್ಧತಿಯ ಹಿರಿಮೆ, ನಿಸ್ವಾರ್ಥತೆಯ ಪ್ರತಿಬೆ, ಈ ಹೂದಳಗಳನ್ನು ಒಗ್ಗಟ್ಟಿನ ದಾರದಲ್ಲಿ ಪೋಣಿಸಿ 'ಗೌಡ ಜನತೆಗೆ' ಅರ್ಪಿಸಲು ಸರ್ವರೂ ಶಕ್ತರಾಗಬೇಕು.



# ಗೌಡ ಸಮಾಜ

ಲೇಖಕಿ :- **ಶ್ರೀಮತಿ ಚೆಟ್ಟಿಮಾಡ ಉಲ್ಲಾಸ ಸಜನಿ** ಸಂಜರಾಜಪಟ್ಣ

(ಶ್ರೀಮತಿ ಚೆಟ್ಟಿಮಾಡ ಸಜನಿಯವರು ಸಂಜರಾಜಪಟ್ಣದವರಾಗಿದ್ದು ಶ್ರೀಮತಿಯವರು ತನ್ನ ಗ್ರಾಮದ ಮಹಿಳೆಯರ ಅಭಿವೃದ್ಧಿಯ ಕಾರ್ಯದಲ್ಲಿ ತುಂಬಾ ಆಸಕ್ತಿ ವಹಿಸಿ ಕೆಲಸಮಾಡಿದ್ದಾರೆ. ಶ್ರೀಮತಿ ಸಜನಿಯವರು ಸಮಾಜದಲ್ಲಿರುವ ಕುಂದುಕೊರತೆಯನ್ನು ಎತ್ತಿ ತೋರಿಸಿ ಅದಕ್ಕೆ ಸೂಕ್ತಪರಿಹಾರವನ್ನು ಸೂಚಿಸಿದ್ದಾರೆ. ಇವರ ಈ ಲೇಖನವು ಈಗಿನ ಯುವಕ ಯುವಕಿಯರಿಗೆ ಬಂದು ಮಾರ್ಗದರ್ಶನವಾಗಲೆಂದು ಹಾರೈಸುತ್ತೇವೆ. —ಸಂ.)

ಸಮಾಜವೆಂದರೆ ಹಲವಾರು ಜನರು ಒಂದು ಕಡೆ ಸೇರಿ ಮಾತನಾಡಿದರೆ ಕೂಡಿಮಿಳಿತರಾದರೆ ಅಥವಾ ಕಟ್ಟಡಗಳನ್ನು ಕಟ್ಟಿ ಅದರಲ್ಲಿ ಕೆಲವು ಸಮಾರಂಭಗಳನ್ನು ನಡಿಸಿದರೆ ಸಮಾಜವೆಂದು ಕರೆಯಬಹುದೇ ಎಂದು ಕೇಳಿದರೆ ಅದು ಸಮಾಜವಲ್ಲ. ಇಡೀಜನರ ಜೀವನವೇ ಒಂದು ಸಮಾಜ. ಸಮಾಜ ಸಮಾಜ ಶಾಸ್ತ್ರದವರು ಕರೆಯುವ (Society) ಜನರ ಜೀವನ. ಆಜೀವನದಲ್ಲಿ ಆಡಕವಾಗಿರುವ ಆಗು ಹೋಗುಗಳು ಸಮಾಜದ ಆಚಾರ ವಿಚಾರಗಳು ನಡತೆಗಳು ಸಮಾಜಕ್ಕೆ ಸಂಬಂಧಪಟ್ಟದ್ದು. ಬರೀ ಉಡುಪಿನ ಬದಲಾವಣೆಯಿಂದ ಸಮಾಜದ ಉದ್ಧಾರವಾಗದು, ಜನಸಾಮಾನ್ಯರಲ್ಲಿ ಮಾನಸಿಕ ಬದಲಾವಣೆಯಾದರೆ ಸಮಾಜದ ಸುಧಾರಣೆಯಾದಂತೆ ಹೊರತು ಬರೀ ಕಟ್ಟಡಗಳನ್ನು ಕಟ್ಟಿಸಿ ಜನರನ್ನು ಸೇರಿಸಿ ಹುಟ್ಟು ಹುಣ್ಣಿಮೆಯನ್ನು ಆಚರಿಸುವುದರಿಂದಸಮಾಜದ ಉದ್ಧಾರ

ಆಗಲಾರದು. ಯಾರು ಸಮಾಜದ ಉದ್ಧಾರಕರೆಂದು ಹೇಳಿಕೊಳ್ಳುವರೋ ಅವರು ತಾವು ಮೊದಲು ತನ್ನನ್ನು ಸರಿಯಾದ ರೀತಿಯಲ್ಲಿ ಮಾರ್ಪಡಿಸಿಕೊಂಡು ತನ್ನ ಕುಂದು ಕೊರತೆಯನ್ನು ಸರಿಮಾಡಿಕೊಂಡು ಸಮಾಜದಲ್ಲಿರುವ ಕುಂದುಕೊರತೆಯನ್ನು ತಿದ್ದಲು ಪ್ರಯತ್ನಪಡಬೇಕು. ಸಮಾಜದಲ್ಲಿರುವ ಕುಂದುಕೊರತೆಯನ್ನು ಅರಿತು ಅದಕ್ಕೆ ತಕ್ಕ ಪರಿಹಾರವನ್ನು ಹುಡುಕಿ ಅದನ್ನು ಹೋಗಲಾಡಿಸುವ ಪ್ರಯತ್ನ ನಡೆದರೆ ಸಮಾಜ ಸುಧಾರಣೆ ಎನ್ನಬಹುದು.

ಗೌಡ ಸಮಾಜದಲ್ಲಿಯೂ ಸಹ ನಿಷ್ಠಾವಂತ ಸಮಾಜ ಸುಧಾರಕರು ಬಹಳ ವಿರಳವೆಂದರೆ ತಪ್ಪಾಗದು. ಗೌಡ ಸಮಾಜದಲ್ಲಿ ಅನೇಕರೀತಿಯನ್ನು ನ್ಯೂನತೆಗಳಿವೆ. ಅವುಗಳನ್ನು ಹೋಗಲಾಡಿಸುವುದಕ್ಕೆ ಸ್ವಾರ್ಥತ್ಯಾಗಿಗಳಾದ ನಿಷ್ಪಕ್ಷಪಾತರೀತಿಯಲ್ಲಿ ಕೆಲಸಮಾಡುವ ಯುವಕ ಯುವಕಿಯರು ಮುಂದುಬರಬೇಕು.ತಮ್ಮ ಹಿರಿಯರು ತಪ್ಪಿನಡೆದುದನ್ನು ಕಂಡುಹಿಡಿದು ಯಾವ ದಾಕ್ಷಿಣ್ಯಕ್ಕೂ ಬಲಿಬೀಳದೆ ಯಾರ ಶಿಫಾರಸ್ಸಿಗೂ ತಲೆದೂಗದೆ ವಿಶಾಲ ಹೃದಯದ ಸಮಾಜ ಸೇವಕರು ಬೇಕು. ಆರೀತಿಯಲ್ಲಿ ಸಮಾಜ ಸೇವೆಗೆ ನಮ್ಮ ಯುವಕ ಯುವಕಿಯರು ವಿದ್ಯಾವಂತರಾಗಿ ಮುಂದೆಬರಬಹುದೆಂದು ಹಾರೈಸುತ್ತೇನೆ. ನಮ್ಮ ಸಮಾಜದಲ್ಲಿ ಅನೇಕ ನ್ಯೂನತೆಗಳಿವೆ. ಕೆಲವು ಪದ್ಧತಿಗಳು ಒಂದೊಂದು ಊರಿಗೆ ನಾಡಿಗೆ ಒಂದೊಂದು ಪದ್ಧತಿಗಳು ಇರುವುದರಿಂದ ಒಂದು ಊರಿನವರ ಪದ್ಧತಿ ಇನ್ನೊಂದು ಊರಿನವರಿಗೆ ತಿಳಿಯದೆ ಅದಕ್ಕಾಗಿ ಹಬ್ಬ ಮದುವೆಗಳಲ್ಲಿ ಕೆಲವುಕಡೆ ಜಗಳಗಳೇ ಆದ ಸಂದರ್ಭವಿದೆ. ಇದನ್ನೆಲ್ಲಾ ಹೋಗಲಾಡಿಸಿ ಗೌಡರಿಗೆಲ್ಲರಿಗೂ ಒಂದೇರೀತಿಯ ಪದ್ಧತಿಯನ್ನನುಸರಿಸುವಂತೆ ಮುಖಂಡರುಗಳು ಸಭೆಸೇರಿ ಹಿಂದಿನ ಕಾಲದಲ್ಲಿಯೂ ಒಂದು ಒಪ್ಪಂದಕ್ಕೆ ಬಂದಂತೆ ಆ ರೀತಿ ನಡೆಯುವಂತಾಗ ಬೇಕು.

ಅಲ್ಲದೆ ದೇಶವೇ ಆರ್ಥಿಕ ಮುಗ್ಗಟ್ಟಿನಲ್ಲಿ ಮುಗ್ಗರಿಸುತ್ತಿರುವಾಗ ಆಡಂಭರದ ಮದುವೆ ಹಬ್ಬಗಳನ್ನು ಆಚರಿಸುವುದರಿಂದ ಯಾವ ಅರ್ಥವೂ ಕಾಣುವುದಿಲ್ಲ. ಇದಕ್ಕೆ ವಿದ್ಯಾವಂತ ಯುವಕ ಯುವಕಿಯರು ಮುಂದೆ ಬಂದು ಅನಾವಶ್ಯಕ ಆಡಂಭರ ವೈಭವದ ರೀತಿ ವಿವಾಹ ಪದ್ಧತಿಗಳನ್ನು ಕಡಿಮೆಯಾಗುವಂತೆ ತಮ್ಮ ಹಿರಿಯರ ಮನಸ್ಸನ್ನು ಒಲಿಸುವಂತೆ ಮಾಡಬೇಕು. ಮದುವೆ ಮುಂಜಿಗಳಿಗೆ ಸಾಲಮಾಡಿಯಾದರೂ ಖರ್ಚುಮಾಡಿ ಜನರನ್ನು ಮೆಚ್ಚಿಸುವ ಹವ್ಯಾಸವನ್ನು ತಪ್ಪಿಸಿ ಅದೇಹಣವನ್ನು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಇನ್ನಿತರ ಕೆಲಸ ಕಾರ್ಯಗಳಿಗೆ ಉಪಯೋಗಿಸುವಂತೆ ಸಮಾಜದ ಮಾರ್ಪಾಡು ಆಗಬೇಕು ಈರೀತಿಯ ಮಾರ್ಪಾಡುಗಳು ನಮ್ಮ ಕುಲಪದ್ಧತಿಯನ್ನು ಬಿಡಬೇಕೆಂಬ ವಾದವಲ್ಲ ಕುಲಪದ್ಧತಿಗಳನ್ನು ಆಡಂಬರವಿಲ್ಲದೆಯೇ ನಡೆಸಬಹುದಲ್ಲವೇ ? ನಮ್ಮಲ್ಲಿರುವ ಹಲವಾರು ಪದ್ಧತಿಗಳು ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಸಂಪರ್ಕ ಸೌಹಾರ್ದತೆಯನ್ನು ಕಲ್ಪಿಸುವವುಗಳಾಗಿ ಸಾಮಾಜಿಕ ಜೀವನದಲ್ಲಿ ಪರಸ್ಪರ ಪ್ರೀತಿ ವಿಶ್ವಾಸಗಳಿಗೆ ಎಡೆಮಾಡಿ ಕೊಡುವವಾಗಿರುತ್ತವೆ.ಪಾಶ್ಚಾತ್ಯರೀತಿಯ ವ್ಯಕ್ತಿ ವೈಶಿಷ್ಟ್ಯವನ್ನು ಎತ್ತಿಹಿಡಿಯುವ ರೀತಿಯದ್ದಾಗಿರದೆ ಸಮೂಹದ ಸಮಾಜದ ಒಂದು ಅಂಶವೆಂಬುದನ್ನು ಕಲಿಸುವುದಕ್ಕೆ ದಾರಿಮಾಡಿಕೊಡುತ್ತದೆ. ಸುಖಮಯ ಸಂಸಾರ ಜೀವನಕ್ಕೆ ಎಡೆಮಾಡುತ್ತದೆ ಆದರೆ ಈಗಿನ ವ್ಯಕ್ತಿ-ವೈಶಿಷ್ಟ್ಯ ನೀತಿಯಿಂದಾಗಿ ನಮ್ಮಲ್ಲಿ ಹಿಂದೆ ಇದ್ದ ವ್ಯಕ್ತಿ ವ್ಯಕ್ತಿಯ ಸಂಪರ್ಕ ಪ್ರೀತಿ ವಿಶ್ವಾಸಗಳು ಕಡಿಮೆಯಾಗಿ ಜೀವನವು ಈಯಾಂತ್ರಿಕಯುಗದಲ್ಲಿ ಯಾಂತ್ರಿಕವಾಗಿದೆ ಹೊರತು ಪ್ರೀತಿ ವಿಶ್ವಾಸಗಳಿಗೆ ಹೆಚ್ಚಿನ ಬೆಲೆಇಲ್ಲದಾಗಿದೆ. ಒಂದು ಕಾಲದಲ್ಲಿ ನಮ್ಮ ಸಮಾಜ ಸುವ್ಯವಸ್ಥಿತ ಸ್ಥಿತಿಯಲ್ಲಿದ್ದದ್ದು ಅವ್ಯವಸ್ಥಿತ ಸಮಾಜವಾಗಲು ತೊಡಗಿದೆ. ಹೀಗಾಗುವುದಕ್ಕೆ ಹಲವಾರು ಕಾರಣಗಳಿದ್ದರೂ ಅದರ ಕಾರಣದ ಪರಿವೆಯೇ ಇಲ್ಲದೆ ಸಾಗುತ್ತಿದ್ದರೆ ಇನ್ನುಕೆಲವು ದಶಕಗಳಲ್ಲಿ ಒಬ್ಬ ವ್ಯಕ್ತಿಗೆ ಇನ್ನೊಬ್ಬ ವ್ಯಕ್ತಿಯಲ್ಲಿ ಪ್ರೀತಿ ವಿಶ್ವಾಸವು ಉಳಿಯುವುದೋ ಇಲ್ಲವೋ ಎಂಬ ಭಯ ಉಂಟಾಗಿದೆ. ಹಾಗೆ ಆಗದಂತೆ ಈಗಿನ ಯುವಕ ಯುವಕಿಯರು ಈಗಿನಿಂದಲೇ ಸರಿಯಾಗಿ ಶ್ರದ್ಧೆವಹಿಸಬೇಕಾಗಿ ಕೇಳಿಕೊಳ್ಳುತ್ತೇನೆ.

# ನಮ್ಮ ಭಾಷೆ

ಲೇಖಕರು:- **ಶ್ರೀ ಪುಟ್ಟಣ್ಣಗೌಡ** ಬಿ.ಎ., ಅಂಜೆಕಲ್ಲು

---

(ಶ್ರೀ ಪುಟ್ಟಣ್ಣಗೌಡ ಅಂಜೆಕಲ್ಲುರವರು ಚೆಟ್ಟಹಳ್ಳಿ ಹೈಸ್ಕೂಲಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ. ಇವರು ನಮ್ಮ ಭಾಷೆಯ ವಿಷಯ ಲೇಖನವನ್ನು ಅರೆ ಭಾಷೆಯಲ್ಲಿ ಬರೆದು ಮಾತೃ ಭಾಷೆಯ ಹಿರಿಮೆಯನ್ನು ವಿವರಿಸಿದ್ದಾರೆ. ಅರೆ ಭಾಷೆಯನ್ನು ಆಡುವುದಕ್ಕೆ ಸಂಕೋಚ ಪಡುವವರನ್ನು ಎಚ್ಚರಗೊಸಿದ್ದಾರೆ. ಸಂ)

ನಮ್ಮ ಆಸ್‌ಪಾಸ್‌ನ ಜನರೊಟ್ಟಿಗೆ ಮಾತಾಡಿಕೆ ನಾವ್‌ಗೆ ಭಾಷೆಬೇಕು. ಆ ಭಾಷೆ ಯಾಗ ಹುಟ್ಟಿತ್, ಯಾರ್‌ಂದಾಗಿ ಹುಟ್ಟಿತ್‌ಂತ ಹೇಳ್ದು ಬಹಳ ಕಷ್ಟ. ಆದರೆ ಈ ಭಾಷೆ ಇಂದಿನ ಮಾತ್ರ ಅಲ್ಲದೆ ನಮ್ಮ ಅಜ್ಜ ಪಿಜ್ಜನಕಾಲದ ಕೆಲಸ ಕಾರ್ಯಗಳ ಇಂದಿಗೂ ಉಳಿಸಿಕಂಡ್, ಮುಂದೆಗೂ ಬೆಳ್ ಸಿಕಂಡ್ ಬಂದದೆ. ಇಂಥ ಅಮೂಲ್ಯ ಭಾಷೆ ಇದ್ದ್ ಇಲ್ಲದಾಂಗೆ ನಡೆವ ಜನಕ್ಕೆ ಖಂಡಿತಾ 'ಭಾಷೆ' ಇಲ್ಲೆ, ಈ ಭಾಷೆಂತ ಹೇಳ್ವ ಅಮ್ಮೃಂತನ ಕುಡ್ದ್ ಅದರ ಅರ್‍ಗಿಸಿಕಂಡ್ ಬಾವ ಮನ್‌ಷ್ಯನೇ ಮನ್‌ಷ್ಯಂತ ಹೇಳಿಕೆ ಯೋಗ್ಯ ಹಾಂಗೆ ಮಾಡದಂವ ಕುರಿಗೆ ಸಮ.

ಈ ಪ್ರಪಂಚಲಿ ಸುಮಾರ್ ನಾಲ್ಕ್ ಸಾವಿರ ಭಾಷೆಗ ಉಟ್ಟೊಂತ ಹೇಳ್ವೆ. ಈ ಭಾಷೆಗೆ ಆಯಾಯ ದೇಶಕ್ಕೆ, ನಾಡಿಗೆ ಸರಿಯಾಗಿ ಬೆಳ್ದ್ ಬಂದುಟ್ಟು. ಈ ಎಲ್ಲಾ ಭಾಷೆ ಗಳ್ಲಿ "ಗ್ರಾಂಥಿಕ" ಭಾಷೆ ಮತ್ತೆ "ವ್ಯವಹಾರಿಕ" ಭಾಷೆಂತ ಎರ್ಡ್ ತರ ಉಟ್ಟು. ಗ್ರಾಂಥಿಕ ಭಾಷೆಂತ ಹೇಳ್ರೆ ಅದ್ ಪುಸ್ತಕಗಳ್ಲಿ ಬರಿಯಕೆ ಉಪಯೋಗಿಸ್ದು. ಅದಕ್ಕೆ "ಲಿಪಿ" ಉಟ್ಟು. ಈ ಭಾಷೆಗಳ್ಲಿ ಸಾಧಾರ್ಣ ಮುನ್ನೂರು ಭಾಷೆ ಮಾತ್ರ ಲಿಪಿ ಉಟ್ಟುಗಡ. ವ್ಯವಹಾರಿಕ ಭಾಷೆಂತೇಳ್ರೆ ಜನ ಮಾತಾಡುವ ಭಾಷೆ, ಅದಕ್ಕೆ ಲಿಪಿ ಇರೋ ಕುಂತಳೇ ಕಟ್ಲೆ ಇಲ್ಲೆ. ಆದರೆ ಅದರ್‍ಲಿ ಯಾವ ತರದ ವ್ಯವಹಾರನೂ ಮಾಡಿಕೆ ಅಡ್ಡಿ ಇಲ್ಲೆ. ಹಾಂಗೇಂತ ಹೇಳ್ಕನ ಪ್ರಾಂಥಿಕ ಭಾಷೆಗಳ್ಲಿ ಎಲ್ಲಾ ಜನ ಮಾತಾಡುವೇಂತ ಅಲ್ಲ. ಹೆಚ್ಚಿನ ಗ್ರಾಂಥಿಕ ಭಾಷೆ ವ್ಯವಹಾರಿಕವೂ ಅಗ್ಯುಟು. ಈಗ ಕನ್ನಡ, ಹಿಂದಿ, ಇಂಗ್ಲೀಷ್, ಮಲ್ಯಾಳ ಇವೆ ಮೊದ್ ಲಾದ್ದ್ ವ್ಯವಹಾರಿಕವೂ ಹೌದು ಗ್ರಾಂಥಿಕವೂ ಹೌದು. ಆದರೆ ದೇವ ಭಾಷೆಂತ ಹೇಳ್ವ ಸಂಸ್ಕೃತ ಭಾಷೆ ಬರೀ ಗ್ರಾಂಥಿಕವಾಗಿಯೇ ಉಳ್ದುಟ್ಟು, ಅವರ ಮಾತಾಡ್ವ ಜನ ಸಿಕ್ಕ್ದುದು ಕಷ್ಟ. ಇನ್ನ್ ತುಳು ಕೊಡವ ಮತ್ತೆ ನಮ್ಮ ಅರೆಗನ್ನಡ ಭಾಷೆಗಳಿಗೆ ತಮ್ಮದೇ ಆದ ಲಿಪಿ ಇಲ್ಲೆ, ಇದ್ ಬರೀ ವ್ಯವಹಾರದ ಭಾಷೆ ಮಾತ್ರ ಅಗುಟ್ಟು.

ನಮ್ಮವು ಮಾತಾಡುವ ಭಾಷೆ ಅರೆಗನ್ನಡ. ಇದ್ಕೆ ಅರೆ ಭಾಷೆಂತಳೂ ಹೇಳ್ವ. ಈ ಅರೆಗನ್ನಡ ಹವೀಕ ಬ್ರಾಹ್ಮಣ್ರ "ಹಳೆಗನ್ನಡ" ಭಾಷೆ ಹಾಂಗೆ ಕನ್ನಡಂದಲೇ ಹುಟ್ಟಿಕಂಡ ಭಾಷೆ. ಇದರಲ್ಲಿ ಎಷ್ಟೋ ಶಬ್ಧಗ ಕನ್ನಡದ್ದ್ ತಪ್ಪರೆ ಅರ್ಧ ಕನ್ನಡದ್ದ್, ಹಾಂಗಾಗಿಯೇ ಇದಕ್ಕೆ ಅರೆಗನ್ನಡಂತ ಹೇಳ್ದ್. ಇದ್ ಸರೀಂತ ಹೇಳಿಕೆ ಈ ಕೆಲವು ಉದಾರ ಣೆಯೇ ಸಾಕ್. ಉದಾ:- ನಂಗೆ - ನನಗೆ; ನಿಂಗೆ - ನಿನಗೆ; ಆತು – ಆಗಬೇಕು; ಹೋನೆ, ಹೋಗುತ್ತೇನೆ. ಇನ್ನ್ ಈ

ಭಾಷೆಲಿ ಎಷ್ಟೋ ಕನ್ನಡದ ಶಬ್ಧಗಳೇ ಸಿಕ್ಕಿವೆ ಉದಾ :-
ಅಪ್ಪ; ಅವ್ವ; ನಾವು ಮೊದ್‌ಲಾದ್ದ್. ನಮ್ಮ ಅರೆಗನ್ನಡ
ಇನ್ನ್ ಕೆಲವು ಊರಿಗೆ ಅಲ್ಲಿಯ ಬೇರೆ ಬೇರೆ ಭಾಷೆಗೊಳೊ
ಟ್ಟಿಗೆ ಸೇರಿಕಂಡ್ ಕೆಲವು ವ್ಯತ್ಯಾಸ ಆಗ್ಯುಟ್ಟು ಕನ್ನಡ
ಜಿಲ್ಲೆಲಿ ನಮ್ಮವು ಅರೆಗನ್ನಡ, ತುಳು ಎರ್ಡೂ ಮಾತಾಡ್ವೆ.
ಹಾಂಗೆ ಇರಿತನ ಕೆಲವು ಶಬ್ಧಗಲ್ಲಿ ಹೆಚ್ಚ್ ಕಮ್ಮಿಯೂ
ಇದ್ದದೆ- ಕನ್ನಡ ಜಿಲ್ಲೆಲಿ "ಗಯ್ಯು"ಂತ ಹೇಳ್ದು ತುಳು
ಭಾಷೆನ "ಕಜಿಪು"ಂತ ಹೇಳ್ದರ್‌ಂದ ಬಂದದ್ ಆಗಿರಿಕು
ಎಡೆ ಉಟ್ಟು. ಇನ್ನ್ ಕೊಡಗಲಿ ಕೊಡುವ ಭಾಷೆ ಪ್ರಭಾ
ವಂದ "ಜಂಪರ್"ಂತ ಹೇಳ್ದು "ಜಂಬವ" ಎಂತ ಹೇಳ್ದ
ರ್‌ಂದ ಬಂದದ್ ಆಗಿರಿಕ್ಕೂ ಸಕ್. ಅದೆಲ್ಲ ಆಯಾಯ
ಆಸ್‌ಪಾಪಿನ ಭಾಷೆಗಳ ಪ್ರಭಾವಂದ ಆದ ಬದ್‌ಲಾವಣೆ.
ಒಟ್ಟಲಿ ಹೇಳ್ರೆ ಅರೆಗನ್ನಡ ಕನ್ನಡಂದ ಹುಟ್ಟಿದ ಭಾಷೆ.
ಕವಿ ಮುದ್ದಣನ ಹಳೆಗನ್ನಡನ ಉಳಿಸಿಕಂಡ್ ಬಂದ
ಭಾಷೆ.

ಒಂದು ಭಾಷೆ ಬೆಳಿಯುತೆ ಅದ್ ನಮ್ಮ ಭಾಷೇಂತ
ಹೇಳ್ವ ಪ್ರೀತಿ ಅಭಿಮಾನ ನಾವ್ಗೆ ಬೇಕು. ಒಂದು ಭಾಷೆನ
ಪ್ರೀತಿಸೊಕ್ಕೊಂತ ಹೇಳ್ರೆ ಬಾಕಿ ಭಾಷೆಗಳ ತಿರಸ್ಕರಿಸೊ
ಕೊಂತ ಅರ್ಥಅಲ್ಲ. ಹಾಂಗೆ ಅಭಿಮಾನ, ಪ್ರೀತಿ ಇದ್ದರೆ
ಮಾತ್ರ ಆ ಭಾಷೆ ಬೆಳಿಯೊದುಂ ಅದರ್ಲಿ ಸಾಹಿತ್ಯ ರಚನೆ
ಗೂ ಸಾಧ್ಯತೆ ಉಟ್ಟು. ನಾವು ನಮ್ಮವು .. ನಮ್ಮದ್‌ಂತ
ಹೇಳ್ವ ಅಭಿಮಾನ ನಾವ್ಗೇ ಕಮ್ಮಿ ಆದರೆ ಯಾವುದೂ ಬೆಳಿ
ಯುಕ್ತಿಲ್ಲೆ. ಅದ್ ತಲೆಮಾರ್‌ಂದ ತಲೆಮಾರಿಗಾಕನ ಇಲ್ಲೆ
ಂತಳೇ ಆದು. ಈಗಿಗ ನೋಡ್ಕನ ನಮ್ಮವುಕೇ ನಮ್ಮ
ಭಾಷೆಲಿ ಅಭಿಮಾನ ಕಮ್ಮಿ ಆಗ್ತಾ ಬಂದದೆ. ಕೆಲವು ಜನ
ಅರೆಗನ್ನಡಲಿ ಮಾತಾಡ್ರೆ ಅವರ ಗೌರವಕ್ಕೆ ಕಮ್ಮಿಂತ
ಗ್ರಹಿಸಿದಾಂಗೆ ಕಂಡದೆ, ಇನ್ನ್ ಕೆಲವು ಜನ ಮನೇಲಿ
ಅರೆಗನ್ನಡಲಿ ಮಾತಾಡ್ರೆ ಪೇಟೆಗೆ ಬಾಕನ ಅದರ್ಲಿ ಮಾತಾ
ಡಿಕ್ಕೇ ಹೆದ್ರುವೆ. ನಂಗೆ ಅರೆ ಭಾಷೆನೇ ಈಗ ಮರ್ತ್
ಹೋಗುಟ್ಟೊಂತ ಹೇಳ್ವ ಜನ ಇಲ್ಲೇಂತ ಇಲ್ಲೆ. ಮತ್ತೆ
ನಮ್ಮವು ನಮ್ಮ ಭಾಷೆಲಿದ್ದ "ಗಡ" ಅಂತ ಹೇಳ್ದರ ಬದ್
ಲಿಗೆ "ಅಂತೆ"ಗಳ ಕಂತೆನ ಸುರುಮಾಡ್ಯೊಳೊ. ಈ "ಗಡ"
ನ ಮುದ್ದಣ ಕವಿಯೇ ರಾಮಾಶ್ವಮೇದಲಿ ಎಷ್ಟೋ ಉಪ
ಯೋಗಿಸಿದ್ಕನ ನಾವ್‌ಗೆ ಮಾತಾಡ್ದಲಿ ನಾಚಿಕೆ ಯಾಕೆ
ನೀವು "ಗಡಗಡ" ಭಾಷೆಪೂಂತ ಯಾರಾರ್ ತಮಾಷೆ
ಮಾಡ್ರೆ ಅದ್ ಶುದ್ಧ ಹಳೆಗನ್ನಡಂತ ಹೇಳ್ರೆ ಅವು ತಲೆ
ಅಡಿಗೆ ಹಕ್‌ಬೇಡೆ ? ಇತ್ತೀಚೆಗೆ ನಮ್ಮವು ಅರೆಗನ್ನಡ
ದೊಟ್ಟಿಗೆ ಬಾಕಿ ಭಾಷೆಳೆಳ ಶಬ್ದನೂ ಉಪಯೋಗಿಸುವೆ.
ಹೀಂಗೆ - ಅಮ್ಮ; ಆಂಟಿ; ಡ್ಯಾಡಿ ಮೊದ್‌ಲಾದ್ದ್
ಬರದುಟು. ಅಪ್ಪನ "ಪೊಪ್ಪ"ಂತ ಹೇಳ್ಕೆ ಸಲರು ಮಾಡ್ವೆ
ಳೊ, ಅದ್ ಯಾವ ಕನ್ನಡವೊ ದೇವ್ರಿಗೇ ಗೊತ್ತು. ಈ
ರೀತಿ ಆದರೆ ನಮ್ಮವು ಮಾತಾಡ್ವ ಅರೆಗನ್ನಡವೊ ಕಾಲ
ಇಲ್ಲೇಂತ ಆಗಿ ಗೌಡುಗಳ ಭಾಷೆಯೇ ಕನ್ನಡವೋ ಇನ್ಯಾ
ವುದೋ "ಚೌಚೌ" ಭಾಷೆ ಆದರೂ ನಂಗೆ ಆಶ್ಚರ್ಯ
ಕಾಂಬೊದುಲ್ಲೆ. ಹಾಂಗಾಗದೆ ಮಾತ್ರ ಇರ್ಲಿ,

ಹಿಂದೆ ಕನ್ನಡಲಿ ಕೆಲವು ವಿದ್ವಾಂಸರ್ ಕಾವ್ಯಗಳ;
ದೊಡ್ಡ ದೊಡ್ಡ ಗ್ರಂಥಗಳ ಬರ್ದೊಳೊ. ಆದರೆ ಕೆಲವು
ಗ್ರಂಥಗಲ್ಲಿ ಅದ್ ಕನ್ನಡ ಗ್ರಂಥ ಆಗಿದ್ದರೂ ವಾಕ್ಯಯಿಡೀ
ಸಂಸ್ಕೃತವೇ ಆಗಿದ್ದ್ ಬರೀ ಒಂದು ಕ್ರಿಯಾ ಪದ ಮಾತ್ರ
ಆಗಿರ್ತಿತ್ತ್. ಅದ್ ಬರೀ ಕನ್ನಡವೇ ಗೊತ್ತಿದ್ದವುಕ್ಕೆ
ಕಬ್ಬಿಣದ ಕಡ್ಲೆನೇ ಸರಿ. ಅಂಥಾ ಸಮಯಸ ಅಚ್ಚಗನ್ನ
ಡಲಿ ಕಾವ್ಯ ಬರೆದ್ ಮುಂದೆ ಬಂದಂವ ಹದಿಮೂರನೇ
ಶತಮಾನದ ಆದಿ ಭಾಗಲಿದ್ದ ಆಂಡಯ್ಯ ಕವಿ. ಆ ಮೇಲೆ
ಇಪ್ಪತ್ತನೇ ಶತಮಾನಲಿ ದಿವಂಗತ ಮುಳಿಯ ತಿಮ್ಮಪ್ಪಯ್ಯ
ಆದರೆ ಆಂಡಯ್ಯನ "ಕಬ್ಬಿಗರ ಕಾವ"ಲಿಯೂ ತಿಮ್ಮಪ್ಪ
ಯ್ಯನ "ಸೊಬಗಿನ ಬಳ್ಳಿ"ಲಿಯೂ ತದ್ಭವಗಳ ಉಪಯೋ
ಗಿಸಿಯೊಳೊ. ಇವರೆಲ್ಲರಮಿಷ್ಸಿ, ಅಚ್ಚಗನ್ನಡಲಿ ಕಾವ್ಯ
ರಚನೆ ಸಾಧ್ಯನೇ ಇಲ್ಲೇಂತ ಹೇಳ್ವಕಾಲಲಿ ದಿಟ್ಟ ಹೆಜ್ಜೆ
ಇಸಿದವು ನಮ್ಮ ಶ್ರೀ ಕೊಳಂಬೆ ಪುಟ್ಟಣ್ಣಗೌಡ, ವಿದ್ವಾನ್
ಇವರ "ಕಾಲೂರ ಚೆಲುವೆ" ಕಾವ್ಯ ತದ್ಭವಗಳೂ ಇಲ್ಲದ
ಅಚ್ಚಗನ್ನಡದ ಕಾವ್ಯ ತಸ್ನಿಕೆ. ಇನ್ನ್ ಇವರ "ಅಂತೆ

ಗಳು" ಎಂಬ ನೂರು ಪದ್ಯಗಳ ಸಂಕಲನವೂ ಅಚ್ಚುಗನ್ನಡಕ್ಕೆ ಕಾಣಿಕೆ. ಇವು ಕನ್ನಡ ಸಾಹಿತ್ಯಲೇ ಹೊಸ ದಾಕಲೆ ಪಾರ್ದ್ ನಮ್ಮ ಗೌಡುಗಳಿಗೆಲ್ಲಾ ಹೆಮ್ಮೆಯ ವಿಷಯವೇ ಇವರ ಹಾಂಗೆ ಅನೇಕ ನಮ್ಮವು ಕನ್ನಡ ಸಾಹಿತ್ಯಲಿ ಮುಂದೆ ಬರ್ಲಿ. ಕನ್ನಡ ಚರಿತ್ರೆಲೇ ಒಂದೊಂದು ಹೊಸ ನಿರ್ಮಾಣ ಮಾಡಲಿ. ಶ್ರೀ ಕೊಳಂಜೆಯವರಿಂದಲೂ ಇನ್ನು ಅನೇಕಾನೇಕ ಸಾಹಿತ್ಯ ರಚನೆ ಅವಹಾಂಗೆ ಆ ಭಗವಂತ ಸಹಕರಿಸಲಿ· ನಮ್ಮ ಅರೆಗನ್ನಡವೂ ಬಾಕಿ ಭಾಷೆಗಳ ಹಾಂಗೆ ಬೆಳಿಯಲಿ. ನಮ್ಮ ಅರೆ ಭಾಷೆಗೂ ಲಿಪಿ ಕಂಡು ಹುಡುಕುವ ಮಹಾನುಭಾವ ಹುಟ್ಟಲಿ....... ಸಾಹಿತ್ಯ ರಚನೆ ಅಗಲಿ. ನಮ್ಮವೆಲ್ಲಾ ನಮ್ಮ ಭಾಷೆಲಿ ಪ್ರೀತಿ ಅಭಿಮಾನ ಹೆಚ್ಚಾಗಿ ಅದ್ ಚಿರಕಾಲ ಉಳಿವಂತಾಗಲಿ.



# ಭಾಷೆ ನನ್ನದು

ಲೇಖಕರು :- **ಶ್ರೀ ಪಿ. ಜಿ. ಅಂಬೆಕಲ್ಲು ಬಿ.ಎ.,**

---

ಭಾಷೆ ನನ್ನದು, ನನ್ನದು ಭಾಷೆ
ನನ್ನದ ಗೌಡನ ಎದೆ ಸುಡಗಾಡು
ಬೇರೆ ಊರಿಗೆ ಹೋದ ಸಮಯಧಿ
ತನ್ನ ಭಾಷೆಯ ನೆನೆನೆನೆದುಬ್ಬದ
ಗೌಡನು ಇದ್ದರೆ ಊರಿನಲಿ
ತಾವಿಲ್ಲಿವನಿಗೆ ನಾಡಿನಲಿ!– ನಮ್ಮನಾಡಿನಲಿ.

ತನ್ನನಾಡಿನ ತೆಂಗಿನ ತೋಟ
ತನ್ನನಾಡಿನ ಕಾಫಿಯು ತೋಟ
ತನ್ನ ನಾಡು ಕನ್ನಡ ನಾಡು
ತನ್ನ ಭಾಷೆಯು ಅರೆ ಭಾಷೆ
ಎಂದು ಹಿಗ್ಗದ ಗೌಡನಿದ್ದರೆ
ತಾವಿಲ್ಲವನಿಗೆ ನಾಡಿನಲ್ಲಿ ! - ನಮ್ಮ ನಾಡಿನಲಿ.

ಮಾತೃ ದ್ರೋಹಿಯು ಬದುಕುವನೆಲ್ಲಿ ?
ಭಾಷಾ ದ್ರೋಹಿಯು ಸಾಯುವನೆಲ್ಲಿ ?
ನತ್ತರವನು ಬದುಕುವನೆಲ್ಲಿ ?

ಭಾಳದ ರಾತನು ಸಾಯುವನಿಲ್ಲಿ !
ದ್ರೋಹಿಯು ಅವನಿಗೆ ನಾಡಿಲ್ಲ!
ನುಡಿಯಲು ನುಡಿಯಿಲ್ಲ ! - ಪಾಪಿಗೇನಿಲ್ಲ.

ನುಡಿಯದಿರಾತನ ಹೀನ ಕತೆಯ ;
ನೆನೆಸದಿರಾತನ ಹೀನ ಕರ್ಮವ :
ಮಾತೃ ದ್ರೋಹಿಗೆ ಪರವಿಲ್ಲ ! - ಆತನಿಗೇನಿಲ್ಲ.

ಬಂದರೆ ಊರಿಗೆ ದೂಡುವರೆಲ್ಲ ;
ಬೇರೆ ಹೋದರೆ ಮೂಸುವರಿಲ್ಲ ;
ಬದುಕಿದರಾತನು ಕೇಳುವರಿಲ್ಲ ;
ಭಾಷಾ ದ್ರೋಹಿಗೆ ಗತಿಯಿಲ್ಲ! – ಅವನಿಗೆ ಮತಿಯಿಲ್ಲ.

ಹೊತ್ತನಾಡು ಸಗ್ಗಕ್ಕಿಮ್ಮಡಿ,
ನುಡಿವ ಭಾಷೆಯು ಮುಕ್ತಿಗೆ ಮುಮ್ಮಡಿ,
ದೈವಭಕ್ತಿಯು ನಾಲ್ಕಡಿ ! - ಸಾಯಲೈಮಡಿ !

(ಪಿ. ಸೂ:- ರಾಷ್ಟ್ರಕವಿ "ಕುವೆಂಪು" ರವರ "ದೇಶ ನನ್ನದು" ಎಂಬ ಪದ್ಯದಂತೆ)

# ಗೌಡ ಜನರು

ಲೇಖಕರು :- ಶ್ರೀ ಯಂಕನ ಉತ್ತಯ್ಯನವರು ಗಿರಿಯಪ್ಪ ಎಸ್ಟೇಟ್ ಸುಂಟಿಕೊಪ್ಪ

(ಶ್ರೀ ಯಂಕನ ಉತ್ತಯ್ಯನವರು ಸುಂಟಿಕೊಪ್ಪದ ನಾರ್ಗಣೆಗ್ರಾಮದವರು. ಚಿಕ್ಕವಯಸ್ಸಿನಲ್ಲಿಯೇ ವಿದ್ಯಾಭ್ಯಾಸವನ್ನು ಮುಗಿಸಿ ಕೃಷಿಕ್ಷೇತ್ರದಲ್ಲಿ ಒಬ್ಬ ಮಾದರಿಯುವಕ ಕೃಷಿಗಾರರಾಗಿದ್ದಾರೆ. ಶ್ರೀ ಯಂಕನ ಉತ್ತಯ್ಯನವರು ಇನ್ನೂ ಯುವಕರಾದರೂ ಸಾರ್ವಜನಿಕ ಹಾಗೂ ರಾಜಕೀಯ ರಂಗದಲ್ಲಿ ತುಂಬಾ ದುಡಿದಿದ್ದಾರೆ. ಇವರು ಈಗ ಉಲುಗುಲಿಗ್ರಾಮ ಪಂಚಾಯಿತಿಯ ಅಧ್ಯಕ್ಷರಾಗಿಯೂ ಕಾಫಿ ಬೆಳೆಗಾರರ ಸಂಘದ ಡೈರೆಕ್ಟರಾಗಿ ಸೇವೆಸಲ್ಲಿಸುತ್ತಿದ್ದಾರೆ.)

ಗೌಡ ಜನಾಂಗದ ವೈಶಿಷ್ಟ್ಯತೆಗೆ ಏನುಮಾಡಬೇಕು. ವಿಶಾಲ ಪ್ರಪಂಚದ ನವಜೀವನದ ರಮ್ಯವಾತಾವರಣದಲ್ಲಿ "ಗೌಡ" ಜನಾಂಗದ ವೈಶಿಷ್ಟತೆ ಏನು? ಇದರ ಹಿನ್ನಲೆ ಏನು? ಆದರಿಂದ ಇಂದಿನ ಪೀಳಿಗೆ ಯಾವ ತತ್ವವನ್ನು ನಿರೂಪಿಸಬೇಕಾಗಿದೆ? ಎಂಬುದನ್ನು ಬಹು ದೀರ್ಘವಾಗಿ ಆಲೋಚಿಸುತ್ತಾ ಹೋದರೆ, ನಾವು ಕಾಣುತ್ತಿರುವುದು ಬರೇ ಶೂನ್ಯಪ್ರಪಂಚದ ನೋಟವನ್ನು. ಹಿಂದಿನ ವೈಭವಪೂರ್ಣವಾದ ಸ್ಥಿತಿಗತಿಗಳನ್ನು; ಆಚಾರವಿಚಾರಗಳನ್ನು; ಎಲ್ಲಾ ಓದುಗರು ಓದಿ ತಿಳಿದಿರಬಹುದು; ಕೇಳಿ ತಿಳಿದಿರಬಹುದು; ನೋಡಿ ತಿಳಿದಿರಬಹುದು. ಹಿಂದೆ ಪುರಾತನ ಕಾಲದಲ್ಲಿ ನಮ್ಮ ಜನಾಂಗದ ಪೂಜ್ಯಹಿರಿಯರನೇಕರು, ನಮ್ಮ ಮೇಲ್ಮೆಗಾಗಿ; ಜನಾಂಗದ ಹಿರಿಮೆ; ಶ್ರೇಯಸ್ಸಿಗಾಗಿ, ಅನವರತ ದುಡಿದು, ಆರ್ಥಿಕ, ಸಾಮಾಜಿಕ, ಮತ್ತು ವಿದ್ಯೆಯ ಉನ್ನತಿಗಾಗಿ ಆ ಕೊಡಗಿನ ಇತರೇ ಜನಾಂಗದವರ ಕೈಕೆ, ನಾವು ಒಂದು ಮಾದರಿಯ ಜನಾಂಗವಾಗಿದ್ದೇವೆ; ನಮಗೂ, ಎಲ್ಲಾ ಜನರಿಗೆ ಏನೇನೂ ಸೌಲಭ್ಯಗಳನ್ನು ಸರಕಾರದಿಂದ ಕೊಡುವ ಸೌಲಭ್ಯಗಳು ನಮ್ಮ ಜನರಿಗೆ ಸಿಕ್ಕುವಂತಾಗಬೇಕು. ಒಂದು ವೇಳೆ ದೊರಕದೇ ಹೋದ ಪಕ್ಷದಲ್ಲಿ ನಮ್ಮ ಜನರ ಮೇಲ್ಮೆಗಾಗಿ ನಾವು ನಮ್ಮ-ಜೀವವರೇಗೂ ಹೋರಾಡಲು ಸಿದ್ಧರಿದ್ದೆವೆ., ಎಂಬ ಘಂಟಾಘೋಷವಾದ ಶರತ್ತನ್ನು ಹಾಕಿದೂದರಿಂದ ನಮಗೆ ಅಲ್ಪ ಸ್ವಲ್ಪ ಸೌಲಭ್ಯಗಳು ದೊರೆತವು. ಹಿಂದಿನ ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ ಸ್ಥಾನಗಳು ಸಿಕ್ಕಿದವು ಪ್ರತಿಯೊಂದು ಸಂಘ ಸಂಸ್ಥೆಗಳ ನಮ್ಮ ಹಿರಿಯರು ಅದಕ್ಕಾಗಿ ಕಷ್ಟಪಟ್ಟಿದ್ದಾರೆ ಅದಕ್ಕಾಗಿ ದುಡಿದಿದ್ದಾರೆ. ಜನಸಂಖ್ಯೆಯಲ್ಲಿಯೂ ಆಸ್ತಿ ಪಾಸ್ತಿಗಳಲ್ಲಿಯೂ ಜೇರೆ ಮುಂದುವರಿದ ಜನಾಂಗ ಇಂದೂ ಮುಂದುವರಿದಿದೆ. ಇಂತರರಿಗಿಂತಲೂ ಕಡಿಮೆ ಇಲ್ಲ ಆದರೂ ಯಾವುದೋ ಕೊರತೆಇರುವಂತೆ ತೋರುತ್ತದೆ. ನಮ್ಮ ಪೂಜ್ಯಹಿರಿಯರ ಸ್ವಜಾತಿ ಪ್ರೇಮ; ಅವರ ನಿಷ್ಠೆ; ಪ್ರಾಮಾಣಿಕತನ; ಹಟಗಾರಿಕೆ ನಮ್ಮ ಇಂದಿನ ಪೀಳಿಗೆಯವರಲ್ಲಿ ಎಳ್ಳಷ್ಟು ಇಲ್ಲ ಎಂದು ನಾನು ಘಂಟಾ ಘೋಷವಾಗಿ ಹೇಳುತ್ತೇನೆ. ಯಾವಪೂಜ್ಯ ಹಿರಿಯರು ತಮ್ಮ ಅಚಲವಾದ ಪ್ರೇಮದಿಂದ, ನಮ್ಮ ಜನರ ಏಳಿಗೆಗೆ; ವೈಶಿಷ್ಟತೆಗೆ; ಮತ್ತು ಮೇಲ್ಮೆಗಾಗಿ ತಮ್ಮಸ್ಫೂರ್ತಿಯ ವಿಶ್ವಾಸದಿಂದ ತನು ಮನ ಧನವನ್ನು ಅರ್ಪಿಸಿದ್ದರೋ; ಆದೇಪೂಜ್ಯಹಿರಿಯರ ಸಂತತಿಯರು, ತಾನೊಬ್ಬ "ಗೌಡ"

ಜನಾಂಗದ ವ್ಯಕ್ತಿ ಎಂಬುದನ್ನು ಮರೆತ್ತಿದ್ದಾರೆ. "ಗೌಡ" ಜನರು ಎಂದು ಹೇಳಲು ನಾಚಿಕೆ ಆಗುವಷ್ಟರಮಟ್ಟಿಗೆ ಪೇಚಾಡುತ್ತಿದ್ದಾರೆ. ಇದು ಇಂದಿನ ಪೀಳಿಗೆಯವರ ನಾಚಿಕೆಗೇಡಿನ ಸಂಗತಿಯಾಗಿದೆ. ನಮ್ಮ ಜನರಲ್ಲಿ ಅನೇಕ ವ್ಯಕ್ತಿಗಳು ದೊಡ್ಡ ದೊಡ್ಡ ಪದವಿಗಳಲ್ಲಿ. ಸೈನ್ಯಖಾತೆ ಯಲ್ಲಿಯೂ ; ದೊಡ್ಡ ದೊಡ್ಡ ಖಾಸಗಿ ಸಂಸ್ಥೆಗಳಲ್ಲಿಯೂ; ಸರಕಾರದ, ನ್ಯಾಯಾಂಗ ಮತ್ತು ರೆವಿನ್ಯೂ ಖಾತೆಯ ಲ್ಲಿಯೂ, ಇದ್ದಾರೆ. ಇದ್ದರೇನು ಪ್ರಯೋಜನ? ತಮ್ಮ ಅಧಿಕಾರಾವಧಿಯಲ್ಲಿ ಸಾಧ್ಯವಾದಷ್ಟು ನಮ್ಮ ಜನರು ವಿದ್ಯಾಪ್ರವೀಣರಾದ ತರುಣರಿಗೆ ಉದ್ಯೋಗಕಲ್ಪಿಸುವ ಯೋಚನೆ ಇಲ್ಲ. ಉದಾ: ಸೈನ್ಯಖಾತೆಯಲ್ಲಿ ನಮ್ಮ ಜನಾಂಗದ ಆಫೀಸರುಗಳು ಯೋಚನೆಮಾಡಿದ್ದೇ ಆದರೆ ನಮ್ಮ ತರುಣರನ್ನು ಕಮೀಶನ್ ಹುದ್ದೆಗಳಿಗೆ ಹೋಗುವಂತೆ ಪ್ರೋತ್ಸಾಹಿಸಬಹುದು. ಆರೀತಿಯ ಪ್ರೋತ್ಸಾಹ ಕಂಡು ಬರುವುದಿಲ್ಲ. ನಮ್ಮ ಜನಾಂಗದ ವ್ಯಕ್ತಿ ಒಬ್ಬ ಮುಂದಕ್ಕೆ ಹೋದವರು ಹಿಂದುಳಿದವರನ್ನು ಸರಿಯಾದ ಮಾರ್ಗದರ್ಶನವಿತ್ತು ಮುಂದುವರಿಸುವ ಮನೋಭಾವ ಬರಬೇಕು. ಜನರನ್ನು ಅಭಿವೃದ್ಧಿ ದಾರಿಗೆ ಎಳೆಯಬೇಕಾಗಿದೆ. ಚಂದ್ರಲೋಕ ; ಸೂರ್ಯಲೋಕದತ್ತ ; ತನ್ನ ಪ್ರಯಾಣದಲ್ಲಿ ಸಂಚರಿಸುವಂತೆ ಈ ವೈಜ್ಞಾನಿಕ ಯುಗದಲ್ಲಿ, ತನ್ನ ಸ್ವಾರ್ಥವನ್ನು ಬದಿಗೊತ್ತಿ ನಾನು ನನ್ನ ವಿಜ್ಞಾನದ ಮುನ್ನಡೆಗಾಗಿ ಶ್ರಮಿಸುವಂತೆ ನಾವು, ನಮ್ಮ ಜನರ ಏಳಿಗೆಗಾಗಿ ನಾವು ದುಡಿಯೋಣ ; ನಮ್ಮ ಜನರ ಕೀರ್ತಿಯನ್ನು ಬೆಳ್ಳಿಗಿಲ ಬೆಳಕಿನಂತೆ ಬೆಳಗಿಸೋಣ ಎಂಬ ಸ್ವಾಜ್ಯಭಾವನೆ ಬರಲು ಪ್ರತಿಯೊಬ್ಬ ಗೌಡರ ಮುಂದಾಳುಗಳಿಗೆ ಭಗವಂತನು ಆಶೀರ್ವದಿಸಲಿ ; ನಮ್ಮ ಜನರ ಮುಂದಾಳುಗಳಿಗೆ ದೇವರು ದಿವ್ಯಜ್ಯೋತಿಯ ಆಸರೆಯನ್ನು ಕೊಟ್ಟು ಸೂರ್ಯ, ಚಂದ್ರರು ಇರುವತನಕವೂ ನಮ್ಮ ಜನಾಂಗದ ವೈಶಿಷ್ಟ್ಯತೆ, ಹಿರಿಮೆ ಬೆಳೆದು ಬರುವಂತಾಗಲಿ ಎಂದು ನಾನು ಹಾರೈಸುತ್ತೇನೆ.



# ನಡೆದು ಬಂದ ದಾರಿ

ಬರೆದವರು : **ಶ್ರೀ ಕೆ. ಎಂ. ಬಸಪ್ಪ, ಎಂ. ಎ. ಬಿ. ಯಡ್**

---

ಶ್ರೀ ಕೆ. ಎಂ. ಬಸಪ್ಪ ಎಂ. ಎ. ಬಿ. ಯಡ್‌ರವರು ಬೆಂಗಳೂರಿನಲ್ಲಿ ವಿದ್ಯಾ ಇಲಾಖೆಯಲ್ಲಿ ಉದ್ಯೋಗ ಮಾಡುತ್ತಿದ್ದಾರೆ. —ಸಂ.

---

ಕೊಡಗು ಬಹಳ ಚಿಕ್ಕ ಜಿಲ್ಲೆ. ಇದರ ವಿಸ್ತಾರ ಬರೇ 40×60 ಮೈಲುಗಳು. ಇಲ್ಲಿಯ ಜನ ಸಂಖ್ಯೆ ಸುಮಾರು $2\frac{1}{2}$ ಲಕ್ಷ. ಇಲ್ಲಿಯ ಮುಖ್ಯ ಕಸುಬು ವ್ಯವಸಾಯ-ಭತ್ತ ಆಹಾಗ ಬೆಳೆ-ಏಲಕ್ಕಿ, ಕಾಫಿ ಕಿತ್ತಳೆ ಹಣದ ಬೆಳೆ.

ಇಲ್ಲಿ ನಾನಾ ಭಾಷೆಯನ್ನಾಡುವ ಎಲ್ಲಾ ತರದ ಜನಾಂಗದವರು ವಾಸಿಸುವರು. ಜನಸಂಖ್ಯೆಯಲ್ಲಿ ಮೊದಲಾಗಿ ಕೊಡವರು, ಎರಡನೆಯದಾಗಿ ಗೌಡರು

ಗೌಡರು ಇಲ್ಲಿ ಕೊಡವರಂತೆ ಬಹು ಪುರಾತನ ಕಾಲದಿಂದಲೇ ಇದ್ದವರು. ಜಮ್ಮವನ್ನು ಪಡೆದವರು.

ಇವರ ಆದಿಯನ್ನು ಕಂಡುಹಿಡಿಯಲು ಸ್ವಲ್ಪ ಪ್ರಯಾಸದ ಕೆಲಸವೇ. ಕೆಲವರು ಹೇಳುತ್ತಾರೆ ಇವರು ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದವರು ಎಂದು. ಇದು ಪೂರ್ತಿ ನಿಜ ವಲ್ಲ. ಏಕೆಂದರೆ ಹಿಂದೆ ಕೊಡುಗು ವಿಸ್ತಾರದಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಉಪ್ಪಿನಂಗಡಿಯವರೆಗೆ ಹಬ್ಬಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಸ್ವಲ್ಪಭಾಗ ಕೊಡಗಿಗೆ ಸೇರಿರು ವಾಗ ಅಲ್ಲಿಂದ ಬಂದವರು ಎಂದು ಹೇಗೆ ಹೇಳುವುದು. ?

ಆ ಮಾತಿರಲಿ. ಕೊಡಗಿನಲ್ಲಿ ಗೌಡುಗಳ ಜನಸಂಖ್ಯೆ ಸುಮಾರು 50,000 ಕ್ಕೂ ಮಿಕ್ಕಿ ಇರುವುದು. ಮೇಲೆ ಬಣ್ಣಿಸಿರುವ ಭವ್ಯ ಭೂಮಿಯಲ್ಲಿ ಈ ಜನಾಂಗದವರು ಸರ್ವತೋನ್ಮುಖವಾಗಿ ಅನಾದಿ ಕಾಲದಿಂದಲೂ, ಜೀವಿ ಸುತ್ತಿರುವರು. ಈ ಜನಾಂಗದವರು ಸಾಧಾರಣ 15-20 ವರ್ಷಗಳ ಹಿಂದೆ ಹೆಚ್ಚಿಗೆ ಅವಿದ್ಯಾವಂತರೂ, ಬಡವರೂ ಆಗಿದ್ದರಿಂದ ಸಮಾಜದಲ್ಲಿ ಶೂನ್ಯವಾಗಿ ತೋರುತ್ತಿದ್ದರು. ಆದರೆ 15-20 ವರ್ಷಗಳಿಂದೀಚೆ ನಮ್ಮ ಜನಾಂಗದ ವರು ಅರೆ ನಿದ್ರೆಯಿಂದ ಎಚ್ಚೆತ್ತಿರುವರು. ಸಮಾಜದಲ್ಲಿ ತಮ್ಮ ಸ್ಥಾನ ಏನೆಂದು ಅರಿತುಕೊಂಡಿರುವರು. ಕಾರಣ ಆರ್ಥಿಕ ಪರಿಸ್ಥಿತಿಯು ತಕ್ಕಮಟ್ಟಿಗೆ ಸುಧಾರಿಸಿರುವದು. ವಿದ್ಯಾವಂತರ ಸಂಖ್ಯೆಯು ಸಾಕಷ್ಟು ಇಲ್ಲದಿದ್ದರೂ ನಿರಕ್ಷರಸ್ಥರು ಕಡಿಮೆ. ಆದರೆ ಹೆಣ್ಣು ಮಕ್ಕಳ ವಿದ್ಯಾಭ್ಯಾಸವು ತೃಪ್ತಿಕರವಾಗಿಲ್ಲ. ಹೆಚ್ಚಿನ ಮಟ್ಟಗೆ ಪ್ರೌಢವಿದ್ಯಾಭ್ಯಾಸದ ಮಟ್ಟದಲ್ಲಿ ನಿಲ್ಲಿಸುವರು. ಆದ್ದ ರಿಂದ ಇವರಿಗೆ ಸ್ವಲ್ಪ ಉತ್ತೇಜನ ಕೊಡಬೇಕು.

ಹತ್ತು ವರ್ಷಗಳಿಂದೀಚೆ ಅನೇಕ ಯುವಕರು ವಿಶ್ವ ವಿದ್ಯಾನಿಲಯದ ಮಟ್ಟದವರೆಗೆ ಯಶಸ್ವಿಯಾಗಿ ವಿದ್ಯೆ ಯನ್ನು ಪಡೆದಿರುವರು. ದೇಶದ ಪುನರ್‌ನಿರ್ಮಾಣದ ಕಾರ್ಯದಲ್ಲಿ ಬೇರೆ ಜನಾಂಗದವರಷ್ಟೇ ಗೌಡಜನಾಂಗದ ವರೂ ಕೂಡ ಎಲ್ಲಾ ವಿಧದಲ್ಲಿಯೂ ಕೂಡ ಪಣತೊಟ್ಟು ಸೇವೆ ಸಲ್ಲಿಸುತ್ತಿದ್ದಾರೆ. ಇದು ನಿಜವಾಗಿ ನಮ್ಮ ಜನಾಂಗದ ಹೆಗ್ಗಳಿಕೆ. ನಮ್ಮಲ್ಲಿ ವೈದ್ಯಕೀಯ ತರಬೇತನ್ನು ಪಡೆದವರೂ ತಾಂತ್ರಿಕ ಶಿಕ್ಷಣ ವನ್ನು ಪಡೆದವರೂ, ಪ್ರಾಥಮಿಕ ಶಾಲೆಯಿಂದ ಹಿಡಿದು ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ವೃತ್ತಿ ಮಾಡುತ್ತಿರು ವರು. ನ್ಯಾಯಾಂಗದಲ್ಲಿ ಸೇವೆ ಸಲ್ಲಿಸುತ್ತಿರುವ ಅನೇಕ ವಕೀಲರೂ, ಪ್ರತಿಯೊಂದು ಸರಕಾರಿ ಇಲಾಖೆಗಳಲ್ಲಿ ಎಲ್ಲಾ ಹಂತಗಳಲ್ಲಿ ಕೆಲಸ ಮಾಡುವ ನೌಕರರೂ ಇರು ವುದು ನಮಗೆ ಸಂತೋಷವನ್ನುಂಟುಮಾಡುವುದು.

ಮಾತ್ರವಲ್ಲದೆ ದೇಶರಕ್ಷಣೆಗೆ ಶ್ರಮಿಸುತ್ತಿರುವ, ವಾಯು ದಳದಲ್ಲಿ ವೈಮಾನಿಕರಾಗಿ ಉನ್ನತ ಅಧಿಕಾರದಲ್ಲಿರುವವರು ನೌಕಾದಳದಲ್ಲಿಯೂ, ಕಾಲುದಳದಲ್ಲಿಯೂ, ಉನ್ನತ ಅಧಿ ಕಾರದಲ್ಲಿ ಅನೇಕರು ನಮ್ಮ ಜನಾಂಗಕ್ಕೆ ಕೀರ್ತಿಯನ್ನು ತರುವುದು ಮಾತ್ರವಲ್ಲದೆ ದೇಶದ ಏಳಿಗೆಗೆ ಹಗಲೆನ್ನದೆ ರಾತ್ರಿಯೆನ್ನದೆ ಶ್ರಮಿಸುತ್ತಿರುವರು.

ಶಿಕ್ಷಣ ಅಭಿವೃದ್ಧಿಗೆ ಸಕಲ ಸೌಲಭ್ಯ ಒದಗಿಸಲು, ಮಡಿಕೇರಿಯಲ್ಲಿ ಎರಡು ಬೋರ್ಡಿಂಗ್, ಒಂದು ಹುಡು ಗರಿಗೂ, ಇನ್ನೊಂದು ಹುಡುಗಿಯರಿಗೂ ನಡೆಸಲಾಗು ತ್ತಿರುವುದು ಮೈಸೂರಿನಲ್ಲಿಯೂ ಕೂಡ ಇದರ ಆಶ್ರಯ ದಲ್ಲಿ ಒಂದು ಬೋರ್ಡಿಂಗನ್ನು ಸ್ಥಾಪಿಸಲು ಸಂಸ್ಥೆಯ ಅಧಿಕಾರಿಗಳು ಕಾರ್ಯವನ್ನು ಕೈಗೊಂಡಿರುವರು. ಬೆಂಗ ಳೂರಿನಲ್ಲಿಯೂ ಕೂಡ ಸಾಕಷ್ಟು ಜನರು ವಾಸಿಸುತ್ತಿ ರುವುದರಿಂದ ತಮ್ಮದೇ ಆದ ಒಂದು ಸಂಸ್ಥೆಯನ್ನು ಏರ್ಪಡಿಸಿರುವುದು, ಸ್ತುತ್ಯರ್ಹವಾದುದು. ಇದರಿಂದಾಗಿ ತಮ್ಮಲ್ಲಿ ಆದಷ್ಟು ಮಿಳಿತವಾಗಿ ಅನ್ಯೋನ್ಯತೆಯನ್ನು ವ್ಯಕ್ತಪಡಿಸಿ ಜನಾಂಗದ ಏಳಿಗೆಗೆ ಸದವಕಾಶವನ್ನು ಕಲ್ಪಿಸಿದಂತಾಗುವುದು ನಮ್ಮ ಜನಾಂಗ ಉದ್ಧಾರ ವಾಗಬೇಕು ಎಂಬ ಭಾವನೆ ಬರಬೇಕು. ಜನಾಂಗ ಉದ್ಧಾರವಾದರೆ, ದೇಶೋದ್ಧಾರವಾಗುವುದು. ಜನಾಂಗ ಉದ್ಧಾರವೆಂದರೆ ಬೇರೆ ಜನಾಂಗದ ಮೇಲೆ ದ್ವೇಷ ಕಟ್ಟ ಬೇಕೆಂದಲ್ಲ. ಜನಾಂಗದ ಎಲ್ಲರೂ ಒಂದು ಮನೆಯ ಮಕ್ಕಳು. ಐಶ್ವರ್ಯವಂತರೂ, ವಿದ್ಯಾವಂತರೂ ಸರಿಯಾದ ಹಾದಿಯನ್ನು ತೋರಿಸ ಬೇಕು. ತಾನು ಐಶ್ವರ್ಯವಂತ, ತಾನು ವಿದ್ಯಾವಂತ ಎಂಬ ಅಹಂಭಾವವನ್ನು ಬಿಟ್ಟು ಜನಾಂಗದ ಹಿತದೃಷ್ಟಿ ಯಿಂದ ಶ್ರಮಿಸಿದರೆ ಮಾತ್ರ ಸಮಾಜ ಸೇವೆಯಾಯಿ ತೆಂದು ಪರಿಗಣಿಸಬಹುದು.

ಸಮಾಜ ಪದ್ಧತಿ:- ಜನನ: ಸಾಮಾನ್ಯವಾಗಿ ಮೊದಲನೆಯ ಮಗುವಿನ ಜನನವು ತಾಯಿಯ ತವರ ಲ್ಲಿಯೇ ಆಗುವುದು. ಮಗುವು ಜನಿಸಿದ 16 ದಿನಗಳ ನಂತರ ಮಗುವನ್ನು ತೊಟ್ಟಿಲಲ್ಲಿ ತೂಗಿಸುವರು. ಆ ದಿನವೇ ಮಗುವಿಗೆ ಹೆಸರನ್ನಿಡುವ ಕಾರ್ಯವನ್ನು ನೆರ ವೇರಿಸುವರು. ಇದು ಬಹು ವಿಜೃಂಭಣೆಯಿಂದಲೇ ನಡೆ ಯುವುದು. ತಾಯಿ ಮಗುವಿನ ಆರೈಕೆಯನ್ನು ಸಾಧಾರಣ 2 ತಿಂಗಳುಗಳ ಕಾಲ ತಾಯಿ ಮನೆಯಲ್ಲಿಯೇ ನಡೆಯಿಸಿ ನಂತರ ಆಕೆಯ ಪತಿಯ ಮನೆಗೆ ಕಳುಹಿಸಿಕೊಡು ವರು.

ಬಾಲ್ಯ ಮತ್ತು ವಿದ್ಯಾಭ್ಯಾಸ: ತಂದೆತಾಯಿಯರು ತಮ್ಮ ಶಕ್ತಿಯನುಸಾರವಾಗಿ ಮಕ್ಕಳಿಗೆ ವಿದ್ಯಾಭ್ಯಾಸ ವನ್ನು ಒದಗಿಸುವರು. ಪ್ರತಿಯೊಬ್ಬ ಹುಡುಗನೇ ಆಗಲಿ ಅಥವಾ ಹುಡುಗಿಯೇ ಆಗಲಿ ತನ್ನಬಾಲ್ಯದಲ್ಲಿ ತನ್ನ ತಂದೆ ತಾಯಿಯರ ಕಸುಬನ್ನು ಕಲಿತುಕೊಳ್ಳುವರು. ತಂದೆಯು ರೈತನಾದರೆ, ರೈತನು ಮಾಡುವ ಎಲ್ಲಾ ಕೆಲಸವನ್ನು ಮಕ್ಕಳು ಅರಿತುಕೊಳ್ಳುವರು.

ವಿವಾಹ :- ಮಕ್ಕಳು ಪ್ರಾಪ್ತ ವಯಸ್ಸಿಗೆ ಬಂದಾಗ ತನ್ನ ವರ ಯಾ ವಧುವನ್ನು ಆರಿಸಿ ವಿವಾಹ ಮಾಡುವರು. ಕೆಲವು ಸಂದರ್ಭದಲ್ಲಿ ವಧುವಿನ ಕಡೆಯಿಂದ ಕರೆ ಬಂದರೆ ಕೆಲವು ಸಂದರ್ಭದಲ್ಲಿ ವರನೇ ವಧುವನ್ನು ಹುಡುಕುವನು. ನವೀನ ಯುಗದಲ್ಲಿ ಒಲವು ಅಂದರೆ ವಧೂವರರೇ ಅಪೇಕ್ಷಿಸಿ ವಿವಾಹವಾಗುವ ಸಂಭವವೂ ಇರುವುದು ಉಡು ಗೊರೆ ಪದ್ಧತಿ ಜಾರಿಯಲ್ಲಿ ಇಲ್ಲದಿದ್ದರೂ, ಖಡ್ಡಾಯ ವಾಗಿ ಕೇಳದಿದ್ದರೂ, ಸ್ವಯಂ ಪ್ರೇರಿತರಾಗಿ ಕೊಡುವ ಉಡುಗೊರೆಯನ್ನು ಸ್ವೀಕರಿಸುವರು. ವಿವಾಹಪದ್ಧತಿಯ ವಿಚಾರವಾಗಿ ಹೇಳುವುದಾದರೆ ಕೆಲವು ಸಂದರ್ಭದಲ್ಲಿ ಒಂದೇ ಕಡೆಯಲ್ಲಿ ದಂಪತಿ ವಿವಾಹ ನಡೆಯುವುದು. ಕೆಲವು ವೇಳೆ ಗೊತ್ತಾದ ದಿನ ವಧುವಿನ ಮತ್ತು ವರನ ಮನೆಯಲ್ಲಿ ಬೇರೆ ಬೇರೆಯಾಗಿ ನಡೆಯುವುದು. ಅದೇ ವರನು ವಧುವನ್ನು ಕರೆದುಕೊಂಡು ಬರಲು ಬಹು ಸಡಗರದಿಂದ ಒಡ್ಡೋಲಗ ಸಮೇತ ಹೋಗುವರು. ಇದಕ್ಕೆ ದಿಬ್ಬಣ ಎಂದು ಹೆಸರು. ವಧುವಿನ ಮನೆಯಲ್ಲಿ ವರನನ್ನು ಮತ್ತು ಅವನ ಸಂಗಡಿಗರನ್ನು ಬಹು ವಿನಯದಿಂದ, ಸತ್ಕಾರದಿಂದ ನೋಡಿಕೊಳ್ಳುವರು. ಎಲ್ಲಾ ಶಾಸ್ತ್ರಗಳು ಮುಗಿದ ನಂತರ ಮಾಂಗಲ್ಯ ಕಟ್ಟಿ ವಧುವನ್ನು ವರನಿಗೆ ವಹಿಸುವ ಸಂದರ್ಭದಲ್ಲಿ ವಧುವು ಎಷ್ಟು ಸಂತಸದಲ್ಲಿದ್ದರೂ ಕೂಡ, ತಂದೆ ತಾಯಿಯರನ್ನು ತನ್ನ ಹುಟ್ಟಿದ ಮನೆ ಯನ್ನು ಬಿಡುವ ಸಮಯದಲ್ಲಿ ದುಃಖವು ಉಕ್ಕಿ ಬಂದು ಬಿಕ್ಕಿ ಬಿಕ್ಕಿ ಅಳುವಳು. ವಧುವನ್ನು ವಹಿಸಿ ಕೊಡುವ ಸಮಯದಲ್ಲಿ ಹೇಳಿದ ವಾಕ್ಯವನ್ನು ಎಷ್ಟರಮಟ್ಟಿಗೆ ನಡೆಯಿಸಿಕೊಡುವರು ಎಂದರೆ ಅದು ಅವರಿಗೆ ಗೊತ್ತು.

ವಧುವು ತನ್ನ ವರನ ಮನೆಯಲ್ಲಿ ಅಲ್ಲಿಯ ವಾತಾ ವರಣಕ್ಕೆ ಹೊಂದಿಕೊಂಡು ಕಷ್ಟ ಸುಖಗಳಲ್ಲಿ ಭಾಗಿ ಯಾಗಿ ತನ್ನ ಜೀವನವನ್ನು ಸಾಗಿಸುವಳು. ಗಂಡನೆದುರಿ ನಲ್ಲಿಯೂ ಹಿರಿಯರೆದುರಿನಲ್ಲಿಯೂ ಬಹು ಮರ್ಯಾದೆ ಯಿಂದಲೂ, ಗೌರವದಿಂದಲೂ ನಡೆದುಕೊಳ್ಳುವಳು. ಗಂಡನನ್ನು ಎಂದೂ ಏಕ ವಚನದಲ್ಲಿ ಮಾತಾಡಿಸುವು ದಿಲ್ಲ. ಅಲ್ಲದೆ ತನ್ನ ಗಂಡನ ಹೆಸರನ್ನು ಎಂದೂ ಹೇಳು ವುದಿಲ್ಲ.

ಪುನರ್ ವಿವಾಹ: ಪುನರ್ ವಿವಾಹವು ಬಹಳ ಕಡಿಮೆ. ಆದರೆ ಪುನರ್ ವಿವಾಹ ಮಾಡುವುದು ಸಮಾ ಜದಲ್ಲೂ ಅಡ್ಡಿ ಇರುವುದಿಲ್ಲ. ಆದರೆ ಹೆಂಗಸು ಪುನರ್ ವಿವಾಹವಾದಾಗ ಮೊದಲಿನ ಮನೆಯ ಸಂಬಂಧವು ಕಡಿದುಹೋಗುವುದು. ನಂತರ ಪುನಃ ಆ ಮನೆಯ ಮೆಟ್ಟಲನ್ನು ಸಹ ಹತ್ತುವ ಅವಕಾಶವಿರುವುದಿಲ್ಲ.

ನಾಡ ಹಬ್ಬ: ಕೊಡಗಿನಲ್ಲಿ ಮುಖ್ಯವಾಗಿ ಆಚ ರಿಸುವ ಹಬ್ಬಗಳಾದ ಕೈಲು ಮುಹೂರ್ತ, ಹುತ್ತರಿ, ಕಾವೇರಿ ಸಂಕ್ರಮಣ ಮುಂತಾದುವುಗಳನ್ನು ಆಚರಿಸು ತ್ತಾರೆ. ಮಾತ್ರವಲ್ಲದೆ ಪ್ರತಿಯೊಂದು ಗ್ರಾಮದಲ್ಲಿಯೂ,

ಇರುವ ಗ್ರಾಮದೇವರ ಹಬ್ಬವನ್ನು ಗ್ರಾಮದವರೊಂದಿಗೆ ಸೇರಿ ಬಹು ವಿಜೃಂಭಣೆಯಿಂದ ನಡೆಸುತ್ತಾರೆ. ಅಲ್ಲದೆ ಯಾವ ರೀತಿಯಲ್ಲಿ ಕ್ರಿಸ್ತರಿಗೆ ಏಸು ಕ್ರಿಸ್ತನು, ಮುಸಲ್ಮಾನರಿಗೆ ಮಹಮ್ಮದ್ ಪೈಗಂಬರ್ ಜೈನರಿಗೆ ಮಹಾವೀರ, ಸಿಖ್ಖರಿಗೆ ಗುರುನಾನಕ್, ಹಾಗೆಯೇ ನಮ್ಮ ಕುಲದೇವರು ಶ್ರೀ ವೆಂಕಟೇಶ್ವರ ಸ್ವಾಮಿ. ಪ್ರತಿಯೊಂದು ಗೌಡ ಕುಲದಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯ ಮುಡಿಪು ಇರುವುದು ವರ್ಷಂಪ್ರತಿ ಯಾ 2–3 ವರ್ಷಕ್ಕೊಂದು ಸಲ ಶ್ರೀ ವೆಂಕಟೇಶ್ವರ ಸ್ವಾಮಿಯ ಪೂಜೆಯನ್ನು ಪ್ರತಿಯೊಂದು ಗೌಡುಗಳು ಬಹು ಶ್ರದ್ಧೆ, ಭಕ್ತಿಗಳಿಂದ ಆಚರಿಸುವರು.

ಆಹಾರ:– ಗೌಡ ಜನಾಂಗದವರು ಮಾಂಸಾಹಾರಿಗಳಾದರೂ ಕೆಲವರು ಸಸ್ಯಹಾರಿಗಳು ಇರುವರು. ಮುಖ್ಯ ಆಹಾರ ಅಕ್ಕಿ, ಗೌಡ ಜನಾಂಗಕ್ಕೆ ಸೇರಿದ ಪ್ರತಿಯೊಂದು ಮನೆತನದವರಿಗೆ ತಮ್ಮದೇ ಆದ ಮನೆ ಮಠ ಭೂಮಿ, ತೋಟ ಇರುವುದು. ಕೊಡಗಿನಲ್ಲಿ ಜನ್ಮವನ್ನು ಪಡೆದವರು. ಮುಖ್ಯ ಆಯುಧ ಕೋವಿ. ಕೋವಿಯನ್ನು ರಕ್ಷಣೆಗೂ ಹಾಗೂ ಬೇಟೆಗೂ ಉಪಯೋಗಿಸುತ್ತಾರೆ. ಗೌಡುಗಳು ಬಲಶಾಲಿಗಳೂ, ಧೀರರೂ, ವೀರರೂ ಬೇಟೆಯಲ್ಲಿ ನಿಪುಣರೂ ಆಗಿರುವರು. ಪ್ರತಿಯೊಂದು ಕೆಲಸವನ್ನು ಬಲ್ಲವರು. ವಿವಿಧ ಕಸುಬುಗಳನ್ನು ಸ್ವೀಕರಿಸುವರು.

ಭಾಷೆ: ಗೌಡುಗಳಿಗೆ ತಮ್ಮದೇ ಆದ ಒಂದು ಭಾಷೆ ಇರುವುದು. ಇದು ಹೆಚ್ಚಾಗಿ ಹಳೆಗನ್ನಡವನ್ನು ಹೋಲುವುದು. ಈ ಭಾಷೆಗೆ ಅರೆಗನ್ನಡ ಎಂದು ಹೇಳುತ್ತಾರೆ.

ಉದಾಹರಣೆಗೆ:– ಯಾವಾಗ ಹೋಗುತ್ತಿಯಾ ಎಂಬುವುದಕ್ಕೆ "ಯಾಗ ಹೋದಿಯಾ", "ನನಗೆ ಗೊತ್ತಿಲ್ಲ" ಎಂಬುವುದಕ್ಕೆ "ನಂಗೆ ಗೊತ್ತಿಲ್ಲೆ", "ಬಾ ಹೋಗೋಣ" ಎಂಬುವುದಕ್ಕೆ "ಬಾ ಪೋಯಿ", "ಅವರು ಬರುವುದಿಲ್ಲವಂತೆ" ಎಂಬುವುದಕ್ಕೆ "ಅವು ಬಾದುಲೆಗಡ" ಎಂದು ಮುಂತಾಗಿ ಮಾತಾಡುತ್ತಾರೆ.

ಕೊಡಗಿನ ಕಾವೇರಿ ಮಾತೆಯ ಮಡಿಲಲ್ಲಿ ಜನಿಸಿ ಹೊತ್ತಿಸಿದ ದೀವಿಗೆ ಅಷ್ಟದಿಕ್ಕುಗಳಿಗೂ ಬೆಳಕನ್ನು ಚೆಲ್ಲಿ ಅಂಧಕಾರದಲ್ಲಿ ತೊಳಲುತ್ತಿರುವವರನ್ನು ಬೆಳಕಿಗೆ ಒಯ್ದು ಸರ್ವತೋನ್ಮುಖ ಪ್ರಗತಿಯನ್ನು ಸಾಧಿಸಲು ಶ್ರೀ ಕಾವೇರಿ ಮಾತೆಯ ಅನುಗ್ರಹವು ನಿರಂತರವಾಗಿರಲಿ.

# ಗಿರಿಯೂರ ಗೌಡರ ಯುವಕ ಮಂಡಲಿ

ಲೇಖಕರು : ಶ್ರೀ ಕೊತ್ತಿಯಂಡ ಮಂದಣ್ಣ ಬಿ.ಎಸ್‌ಸಿ.,

( ಶ್ರೀ ಮಂದಣ್ಣನವರು ತಿಳಿಸಿದಂತೆ ಗಿರಿಯೂರು ಗೌಡ ಯುವಕ ಮಂಡಳಿ ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳು. ಗೌಡ ಸಮಾಜದ ಅಭಿವೃದ್ದಿಗಾಗಿ ಬೇಸಿಗೆ ಬೆಳೆಯನ್ನು ಬೆಳೆಯುವ ಯೋಜನೆಯ ರೂಪರೇಷೆಯೆಂದು ಹೇಳುತ್ತಾರೆ. ಈ ಯೋಜನೆಯು ಬರೇ ಕಾಗದದ ಮೇಲೆ ಮಾತ್ರವಾಗಿರದೆ ಕಾರ್ಯಗತವಾಗಿ ಸಮಾಜದ ಆರ್ಥಿಕ ಅಭಿವೃದ್ಧಿಗೆ ಸಹಾಯಕವಾದರೆ ಇದೊಂದು ವಿಶೇಷ ರೀತಿಯ ಯೋಜನೆಯೇ ಸರಿ. ಈ ರೀತಿಯ ಯೋಜನೆಯನ್ನು ಎಲ್ಲಾ ವಿದ್ಯಾರ್ಥಿವಿದ್ಯಾರ್ಥಿನಿಯರು ಹಾಕಿಕೊಂಡರೆ ಗೌಡ ಸಮಾಜದ ಅಭಿವೃದ್ಧಿ ಮಾತ್ರವಲ್ಲ ಇಡೀ ಭಾರತದ ಆರ್ಥಿಕ ಮುಗ್ಗಟ್ಟು ಕ್ಷಣದಲ್ಲಿಯೇ ಮಾಯವಾಗುವುದರಲ್ಲಿ ಯಾರೂ ಸಂಶಯ ಪಡಬೇಕಾದುದಿಲ್ಲ. ಈ ಯೋಜನೆಗಳು ಕಾರ್ಯಗತವಾಗುವುದನ್ನು ನಾವು ಕಾಣಬೇಕಾಗಿದೆ! ಸಂ)

ವಸಂತ ಋತುವಿನ ಆಗಮನವನ್ನು ಇದಿರು ನೋಡುತ್ತಾ ನಿಂತಿದೆ ಕೊಡಗಿನ ಗಿರಿಯೂರು ಡಿಸಂಬರ್ ತಿಂಗಳ ಚಳಿ ರಾಜ ತಾನೆಂದು ಎಲ್ಲರನ್ನೂ ಬೆದರಿಸುತ್ತಲಿದೆ. ಪಡುದಿಕ್ಕಿನಲ್ಲಿ ಹಬ್ಬಿರುವ ನೂರೆಕ್ಲು ಬೆಟ್ಟಸಾಲಿನ ಎಡೆಯಲ್ಲಿ ಹುಟ್ಟಿ, ಗಿರಿಯೂರ ಮಧ್ಯದಲ್ಲಿ ಹರಿಯುತ್ತಿರುವ ತೊರೆಯೊಂದು ಕಾಫಿ ಬೀಜದ ಕಶ್ಮಲ ಹೊತ್ತು ಸೇವಕನಂತೆ ಹರಿಯುತ್ತಲಿದೆ. ತೆಂಕು ಮತ್ತು ಬಡಗು ದಿಕ್ಕಿನಲ್ಲಿ ವಿಶಾಲವಾಗಿ ಹಬ್ಬಿದ ಕಾಫಿ ಮತ್ತು ಕಿತ್ತಳೆ ತೋಟಗಳು ಫಲವನ್ನು ಹೊತ್ತು ನಿಂತಿವೆ. ಭತ್ತದ ಗದ್ದೆಗಳಲ್ಲಿ ತೆನೆಗಳು ಬಾಗಿ ನಿಂತಿದ್ದು ಸುಗ್ಗಿಯ ಓಲೆಯನ್ನು ಒಯ್ಯುತ್ತಲಿವೆ.

ಅಂದು ರವಿವಾರ ಅರುಣೋದಯದ ಸಮಯದಲ್ಲಿ ಒಂದು ಲೋಟ ಬಿಸಿ ಕಾಫಿಯನ್ನು ಸೇವಿಸಿ ಗೆಳೆಯರೆಲ್ಲಾ ಒಂದು ಕಡೆ ಸೇರಿ ಹರಟುತ್ತಿದ್ದರು. ಹೀಗೆ ಹರುಟುತ್ತಾ ಸೂರ್ಯ ಹತ್ತು ಮಾರು ಏರಿ ಬಂದಾಗ ಎಲ್ಲರೂ ಸೇರಿ ಗೌಡ ಸಮಾಜದ ಪ್ರಗತಿಗಾಗಿ ಒಂದು ಕಾರ್ಯವನ್ನು ಕೈಗೊಳ್ಳಲೇ ಬೇಕೆಂದು ವಿಚಾರಪರವಶರಾದರು. ಒಬ್ಬೊಬ್ಬರು ಒಂದೊಂದು ತೆರನಾದ ಉದ್ದೇಶದ ವಿವರ ನೀಡಿದರು. ದೀರ್ಘಚರ್ಚೆಯ ನಂತರ ರವಿಯು ಸೂಚಿಸಿದ ಭತ್ತದ ಬೇಸಾಯ ಎಲ್ಲರಿಗೂ ಹಿತವೆಂದು ಕಂಡಿತು. 15 ಎಕ್ರೆಯಷ್ಟು ಜಮೀನನ್ನು ಗೇಣಿಗೆ ಪಡೆದು; ಬೇಸಗೆಯ [ಎಗಡನೇಬೆಳೆ] ಭತ್ತದ ಬೆಳೆಯನ್ನು ಬೆಳೆಯುವಂತೆ ನಿರ್ಧರಿಸಿದರು. ತಮ್ಮಂತೆ ಉಳಿದಿರುವ ತಮ್ಮ ಮಿತ್ರರಿಗೂ ಈ ಕಾರ್ಯದಲ್ಲಿ ಪಾಲುಗೊಂಡು ಸಮಯದ ಉಪಯೋಗ ಹೊಂದಲು ಸಾಧ್ಯವಿದೆ ಎಂದು ಕೊಂಡನು ಸೋಮು. ಅಭಿಪ್ರಾಯಕ್ಕೆ ತಕ್ಕಂತೆ ಒದಗುವ ಭೂಮಿ ಯಾದರೋ ಎಲ್ಲಿದೆ ? ಎಂದು ಪ್ರಶ್ನೆ ಎಲ್ಲರ ಮುಂದೆ ನಿಂತಿತು. ಮುಂದಿನ ಎಂಟು ದಿನಗಳಲ್ಲಿ ಭೂಮಿಯನ್ನು ಗೊತ್ತುಪಡಿಸಬೇಕೆಂದು ನಿಶ್ಚಯಿಸಿದರು. ಒಬ್ಬೊಬ್ಬರು. ಒಂದೊಂದು ಊರುಗಳಿಗೆ ಹೋಗಿ ವಿವರ ತರಬೇಕೆಂದು ಲೋಕೇಶ್ ಎಲ್ಲರನ್ನು ಕೇಳಿಕೊಂಡನು. ಸೋಮು

ಬಂದೂಕ್ನ ಊರಿ ಮೇಲೆದ್ದು ಮನೆಯ ಕಡೆ ಹೊರಟನು. ಎಲ್ಲರೂ ತಮ್ಮ ತಮ್ಮ ಮನೆಗಳ ದಾರಿ ಹಿಡಿದು ನಡೆದರು.

ಮರುದಿನ ಮುಂಜಾನೆ ಸೋಮು ನವಿಲೂರು ಸುಬ್ಬಯ್ಯ ಗೌಡರಲ್ಲಿಗೆ ಹೋದದು. ಸಂಬಂಧಿಕನಾದ ಸೋಮುವಿಗೆ ಅತಿಥಿ ಸತ್ಕಾರ ಗಡದ್ದಿನಿಂದ ದೊರೆಯಿತು. ಸೋಮು ತನ್ನ ಮಿತ್ರಮಂಡಳಿಯ ಬಯಕೆಯನ್ನು ಗೌಡರಲ್ಲಿ ಬಿನ್ನವಿಸಿಕೊಂಡನು. ಗೌಡರು ಮೂಗಿನ ಸೊಳ್ಳೆಗಳಿಗೆ ನಸ್ಯವನ್ನು ತುರುಕಿ ಮೀಸೆಯನ್ನು ಉಜ್ಜಿಕೊಂಡು ಕಿರು ನಗೆಯನ್ನು ಬೀರಿ ಅಂದರು, "ಲೋ, ಸೋಮು ಎಲ್ಲಿಯಾದರೂ ಹೋಗಿ ಗುಮಾಸ್ತರ ಕೆಲಸ ಮಾಡ್ರೊ ಈ ಗದ್ದೆ ಬೇಸಾಯ ಏನು ಹುಡುಗಾಟವೊ ? ನಿಮ್ಮಂತಹ ಸೋಮಾರಿಗಳಿಗೆ ಇದೆಲ್ಲ ಯಾಕೊ ?" ಪೆಚ್ಚು ಮೋರೆಯಿಂದ ಸೋಮು ಸಿರಿಯೂರಿನ ಕಡೆಗೆ ಹೆಜ್ಜೆ ಬೆಳೆಸಿದನು. ರವಿ ಊರಿನ ಪಟೇಲರಲ್ಲಿಗೆ ಹೋಗಿ ಪ್ರಸ್ತಾಪಿಸಿ ವಿಫಲನಾಗಿ ಬಂದನು. ಈ ಮಧ್ಯೆ ಲೋಕೇಶ ಗಿರಿಯೂರ ಕುಶಾಲಪ್ಪ ಗೌಡರಲ್ಲಿಗೆ ಹೋಗಿ ತನ್ನ ಅಭಿಲಾಶೆಯನ್ನು ತಿಳಿದನು. ಪದವೀಧರ ಕುಶಾಲಪ್ಪ ಗೌಡರು ಕೂಲಕುಂಶವಾಗಿ ಲೋಕೇಶನ ಮಿತ್ರ ಮಂಡಳಿಯ ನಿರ್ಧಾರವನ್ನು ವಿಚಾರಿಸಿದರು. ಯುವಕರಲ್ಲಿ ಉದ್ಭವಿಸಿದ ಉತ್ಸಾಹವನ್ನು ಹೆಚ್ಚಿಸಲು ಇದೊಂದು ಒಳ್ಳೆಯ ಮಾರ್ಗ ಎಂಬುದು ಗೌಡರಿಗೆ ಹೊಳೆಯಿತು. ಯುವಕರ ಶ್ರಮದ ಫಲ ತಮ್ಮ ಜನಾಂಗದ ಅಭಿವೃದ್ಧಿ ಕಾರ್ಯದ ನಾಂದಿಯಾಗುವುದೆಂದು ಮನದಲ್ಲಿ ಎಣಿಸಿ ಲೋಕೇಶನಿಗೆ ತಮ್ಮ ಒಪ್ಪಿಗೆಯನ್ನಿತ್ತರು. ಇನ್ನು ಒಂದೆರಡು ದಿನಗಳಲ್ಲಿ ತಾನು ಗೆಳೆಯರೊಂದಿಗೆ ಇನ್ನೊಂದ್ದಾವರ್ತಿ ಬಂದು ತಮ್ಮ ಕಾರ್ಯಕಲಾಪಗಳ ಹಂಚಿಕೆಯನ್ನು ತಿಳಿಸುವುದಾಗಿ ಹೇಳಿ ಲೋಕೇಶ ಗೌಡರಿಂದ ಬೀಳ್ಕೊಂಡನು.

ಮಿತ್ರಮಂಡಳಿಗೆ ಲೋಕೇಶ್ ತಂದ ಸುದ್ದಿಯನ್ನು ಕೇಳಿ ಆನಂದವಾಯಿತು. ಎಲ್ಲರೂ ಸಂಜೆ ಮಿತ್ರ ಮಂಡಳಿಯ ಭವನದಲ್ಲಿ ಸಭೆ ಸೇರಿದರು. ಡಾಕ್ಟರ್ ಕಿಶೋರ್ ಮತ್ತು ಮಿತ್ರ ಮಂಡಳಿಯ ವ್ಯವಸ್ಥಾಪಿತ ಕುಮಾರ್ ಅಂದಿನ ಸಭೆಯಲ್ಲಿ ಹಾಜರಿದ್ದರು. ಗಿರಿಯೂರ ಬಯಲಿನಲ್ಲಿ ತಾವು ಮಾಡಲಿರುವ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿದರು ಡೇರೆ ಮನೆಗಳನ್ನು ನೆಟ್ಟು ವಸತಿ ಸೌಕರ್ಯ ಪಡೆಯುವುದು ಎಲ್ಲರಿಗೂ ಹಿತವೆನಿಸಿತು. ಅಷ್ಟರಲ್ಲಿ ಜಯ ತನ್ನ ಪವರ್ ಟಿಲ್ಲರ್ ತರುವುದಾಗಿ ತಿಳಿಸಿದ. "ನಮ್ಮಂತೆ ಇರುವ ಮಿತ್ರರಿಗೆಲ್ಲಾ ಈ ವಿಷಯ ತಿಳಿಸಿರಿ ಸಾಕಷ್ಟು ಜನರನ್ನು ನಾನು ಆಹ್ವಾನಿಸುತ್ತೇನೆ" ಎಂದು ರವಿ ತಿಳಿಸಿದನು. ಇನ್ನು ಉಳಿದಿರುವುದು ಒಂದೇ ಒಂದು ಪ್ರಶ್ನೆ ಗಿರಿಯೂರಿನಲ್ಲಿ ಬೇಸಾಯದ ಕೆಲಸ ಅದಕ್ಕೆ ಬೇಕಾಗುವ ಹಣದ ಪೂರೈಕೆ. ರೂ. 6000/- ಬೇಕಾಗಬಹುದು. ಈ ಮೊಬಲಗನ್ನು ಪಡೆಯುವುದು ಹೇಗೆ ? ಎಂಬದಾಗಿ ಪ್ರಶ್ನೆ ಎದ್ದಿತು. "ತಮ್ಮ ತಮ್ಮ ತಂದೆಯರಲ್ಲಿ ಸಾಲವಾಗಿ ಹಣ ಕೇಳೋಣ. ನಮ್ಮ ಶ್ರಮದಿಂದ ಬರುವ ಭತ್ತವನ್ನು ಮಾರಿ ಸಾಲ ತೀರಿಸೋಣ" ಎಂದನು ಸೋಮು. ಎಲ್ಲರೂ ಈಮಾತಿಗೆ ಒಪ್ಪಿ ಮರುದಿನ ಸಂಜೆಯ ಸಭೆಗೆ ತಮ್ಮ ತಮ್ಮತಂದೆಯರನ್ನು ಆಮಂತ್ರಿಸಿದರು. ಕುಮಾರ್ ಬಂದಿದ್ದ ಹಿರಿಯರಿಗೆ ತನ್ನ ಬಳಗದವರ ದೃಢ ನಿರ್ಧಾರವನ್ನು ತಿಳಿಸಿದನು. "ಯುವಕರ ಜಾಣ್ಮೆಯನ್ನು ಕಣ್ಣಾರೆ ನೋಡಬೇಕು, ಜವಾಬ್ದಾರಿಯುತ ಜೀವನವನ್ನು ಯುವಕರೂ ಅರಿಯಬೇಕು," ಎಂದು ಬಯಸಿ, ಬಂದಿದ್ದ ಹಿರಿಯರು ಹಣ ಒದಗಿಸುವುದಾಗಿ ಆಶ್ವಾಸನೆ ನೀಡಿದರು.

ಕೊಡಗಿನ ಮೂಲೆ ಮೂಲೆಗೂ ಮಿತ್ರ ಮಂಡಳಿಯ ಚಟುವಟಿಕೆಗಳ ಸುದ್ದಿ ರವಿಯ ಪತ್ರಗಳಿಂದ ಮುಟ್ಟಿತು. ಯುವಕರೆಲ್ಲ ಉತ್ಸಾಹಭರಿತರಾದರು. ಗಿರಿಯೂರಲ್ಲಿ ಒದಗಲಿರುವ ಸಾಮೂಹಿಕ ಜೀವನವನ್ನು ನೆನಸಿ ಹಿಗ್ಗಿದರು. ಇವೆಲ್ಲ ಪುಸ್ತಕದ ಹುಚ್ಚಾಟ" ಎಂಬ ಮಾಯ ಅಲ್ಲಿ ಇಲ್ಲಿ ಉದ್ಭವಗೊಂಡದ್ದೂ ಇದೆ. "ಗಿರಿಯೂರ ಕುಶಾಲಪ್ಪ ಗೌಡರಿಗೆ ಏನು ಭ್ರಾಂತಿ ಬಂತು ತಮ್ಮ ಜಮೀನನ್ನು ಹುಡುಗರಿಗೆ ಬಿಟ್ಟುಕೊಟ್ಟರು" ಎಂದು ಕೊಡರು ಜನಾಂಗದ ಕೆಲವು ಮುಖಂಡರು. ಆದರೆ ಕುಡಿಮೀಸೆಯ

ಯುವಕರು ಅಂತಹ ಅವಹೇಳನಗಳನ್ನು ಖಂಡಿಸಿ ನಮ್ಮ ಜನಾಂಗದಲ್ಲಿ ಒಗ್ಗಟ್ಟು ನೆಲೆಸಲು ಇದೊಂದು ಸದಾವಕಾಶವೆಂದು ಉತ್ಸಾಹ ಪೂರಿತ ಒಪ್ಪಿಗೆಯನ್ನು ಸಿರಿಯೂರಿಗೆ ತಲಪಿಸಿದರು. ಬೆಂಗಳೂರಿನಲ್ಲಿದ್ದ ಸಂತೋಷ್ ಸಹೋದರನ ಪತ್ರನೋಡಿ ಬೆರಗಾದನು. ತಾನು ಡೇರೆ ಸಲಕರಣೆಗಳನ್ನು ಬಾಡಿಗೆಗೆ ಪಡೆದು ಒಂದು ವಾರದೊಳಗೆ ತರುವೆನೆಂದು ಉತ್ತರಿಸಿದನು. ಸೋಮುವಾರ ಪೇಟೆಯ ಚಂದ್ರಶೇಖರ್ ಪವರ್ ಟಿಲ್ಲರ್ ಸಮೇತ ಗಿರಿಯೂರಿಗೆ ಬರುವುದಾಗಿ ತಿಳಿಸಿದನು. ಇದೇ ರೀತಿ ಹತ್ತಾರು ಊರುಗಳಿಂದ ಗೆಳೆಯರ ಹರ್ಷಭರಿತ ಓಲೆಗಳು ಗಿರಿಯೂರು ತಲಪಿದವು. ಈ ಮಧ್ಯೆ ಮಿತ್ರ ಮಂಡಳಿಯ ಕೆಲವು ಮಂದಿ ಪುನಃ ಒಂದುಬಾರಿ ಗಿರಿಯೂರ ಗೌಡರನ್ನು ಭೇಟಿ ಮಾಡಿ ಜಮೀನಿನ ಸೌಕರ್ಯ ನೋಡಿಕೊಂಡು ಬಂದರು. ನಂತರದ ಒಂದುವಾರದಲ್ಲಿ ಗಿರಿಯೂರಲ್ಲಿ ಮಿತ್ರಮಂಡಳಿಯ "ಕೃಷಿಶಿಬಿರ" ಪ್ರಾರಂಭವಾಗುವುದೆಂಬ ನಿರ್ಧಾರವಾಯಿತು. ರವಿಯ ಪತ್ರಗಳು ಹೊರವಲಯದ ಯುವಜನಾಂಗಕ್ಕೆ ಗಿರಿಯೂರಿಗೆ ಬರಬೇಕಾದ ದಿನವನ್ನು ತಿಳಿಸಿದುವು. ಈ ಮಧ್ಯೆ ಸಂತೋಷ್ ಡೇರೆಯ ಸಲಕರಣೆಗಳನ್ನು ಗಿರಿಯೂರಿಗೆ ತಲಪಿಸಿ ತಾನು ಮಿತ್ರಮಂಡಲಿಯೊಂದಿಗೆ ಕಾರ್ಯತತ್ಪರನಾದನು. ರವಿ ಮತ್ತು ನಾಲ್ವರು ಸಂಗಡಿಗರು ಗೊತ್ತುಪಡಿಸಿದ ದಿನಕ್ಕೆ ಮುಂಚಿತವಾಗಿ ಹೋಗಿ ಶಿಬಿರದ ಕೆಲವು ಅವಶ್ಯಕ ವ್ಯವಸ್ಥೆಗಳನ್ನು ಏರ್ಪಡಿಸುವುದಾಗಿ ತೀರ್ಮಾನಿಸಿಕೊಂಡರು.

ಸಿರಿಯೂರಲ್ಲಿ ಮೊಳೆತ ಬಯಕೆಯ ಸಸಿ ಫಲವನ್ನು ಹೊಂದಲು ಸಿರಿಯೂರ ಕಡೆಗೆ ಹೆಜ್ಜೆ ಪ್ರಾರಂಭಿಸಿತು. ಮೂಡು ದಿಕ್ಕಿನ ಬಾನು ಕೆಂಪಡರುವ ಮುನ್ನ ಜಯನ 'ಪವರ್ ಟಿಲ್ಲರ್' ಗುಡುಗುಡು ಶಬ್ದದಿಂದ ತೊಡಗಿದ ಕಾರ್ಯಕ್ಕೆ ಜಯಭೇರಿ ಎಬ್ಬಿಸುತ್ತಾ ಗಿರಿಯೂರ ದಾರಿ ಹಿಡಿಯಿತು. ರಾಜಪ್ಪ ಮತ್ತು ಹೊನ್ನಣ್ಣ ಅವಶ್ಯಕ ಸಾಮುಗ್ರಿಗಳನ್ನು 'ಟಿಲ್ಲರ್' ನಲ್ಲಿ ತುಂಬಿ, ಅವುಗಳ ಸಂದಿನಲ್ಲಿ ತಾವು ನುಸುಳಿಕೊಂಡರು. ರವಿ, ಸೋಮು ಬಸ್ಸೇರಿ ಗಿರಿಯೂರ ಕಡೆ ಹೊರಟರು. ಮಧ್ಯಾಹ್ನದ ವೇಳೆಗೆ ಎಲ್ಲರೂ ಗಿರಿಯೂರ ತಲಪಿದರು. ಗೌಡರ ಮನೆಯ ಊಟ ಎಲ್ಲರನ್ನೂ ಸ್ವಾಗತಿಸಿತು. ಕಲೆಗಾರ ರಾಜಪ್ಪ ಮತ್ತು ಮಿಾನು ಬೇಟೆಗಾರ ಹೊನ್ನಣ್ಣನಿಗೆ ಗಿರಿಯೂರ ಸೊಬಗು ಹೊಸ ಹುರುಪು ಒದಗಿಸಿತು.

ಗಿರಿಯೂರು ಹೆಸರಿಗೆ ತಕ್ಕಂತೆ ಇತ್ತು. ನಾಲ್ದೆಸೆಗಳಲ್ಲಿಯೂ ಗಿರಿಶಿಖರಗಳೇ ದೃಷ್ಟಿರೇಖೆಯನ್ನು ತಡೆಯುತ್ತಿದ್ದುವು. ಪಡುದಿಕ್ಕಿನ ಕಿಬ್ಬರಿ ಬೆಟ್ಟದ ಮಗ್ಗುಲಿಂದ ಹಾದು ಬರುತ್ತಿದ್ದ ಹಾರಂಗಿ ನದಿ, ಬಂಡೆಗಳ ಸಂದಿನಿಂದ ನೆಗೆಯುತ್ತಾ ಉತ್ಸಾಹದ ನೊರೆಯನ್ನು ಕಾರುತ್ತಾ ಗೌಡರ ಬಯಲಂಚಿನಿಂದ ಹಾದು ಮುಂದೆ ಹೋಗುತ್ತಲಿತ್ತು. ಬಯಲಿನ ಒಂದು ಮಗ್ಗುಲಲ್ಲಿ ಹರಡಿರುವ ವಿಶಾಲ ಹುಲ್ಲು ಮೈದಾನ ತನ್ನ ವಿಶಾಲತೆಯ ಉಪಯೋಗವನ್ನು ಹಂಚಲು ಯುವಕರ ಬಳಗವನ್ನು ಇದಿರು ನೋಡುತ್ತಲಿತ್ತು. ಬೆಳೆ ಕಟಾವು ಆದ್ದರಿಂದ ಮುಂದಿನ ಬೆಳೆಯ ಕಾರ್ಯಕ್ರಮವನ್ನು ಇದಿರುನೋಡುತ್ತಲಿದ್ದುವು ಭತ್ತದ ಗದ್ದೆಗಳು. ಹೊಳೆಯಂಚಿನಲ್ಲಿ ತಳವೂರಿದ್ದ ನೀರೆತ್ತುವ ಪಂಪುಗಳು ದುಡಿಮೆಗೆ ತಯಾರಾಗಲು ಸುಶ್ರೂಷೆ ಹೊಂದುತ್ತಿದ್ದುವು.

ರವಿ ಮತ್ತು ಸಂಗಡಿಗರು ಕುಶಾಲಪ್ಪಗೌಡರ ಮನೆಯಲ್ಲಿ ಮೊದಲ ರಾತ್ರಿಯನ್ನು ಕಳೆದರು. ಮಾರನೆ ದಿನ ಮುಂಜಾನೆಯಲ್ಲಿಯೇ ವಿಶಾಲವಾಗಿದ್ದ ಹುಲ್ಲು ಮೈದಾನದಲ್ಲಿ ಡೇರೆಗಳು ನಿಲ್ಲಬೇಕಾದ ಜಾಗವನ್ನು ಗೊತ್ತುಪಡಿಸಿದರು. ಮೈದಾನಿನ ಪಡುಭಾಗದ ಕೊನೆಯಲ್ಲಿ ವಾಸಕ್ಕಿರುವ 4 ಡೇರೆಗಳು ಸಾಲಾಗಿ ನಿಲ್ಲುವಂತೆಯೂ, ಅವುಗಳ ಎದುರಿಗೆ 50 ಗಜ ದೂರದಲ್ಲಿ ಬಲಮಗ್ಗುಲಲ್ಲಿ ವಿನೋದಾವಳಿಗಾಗಿ ಸ್ವಲ್ಪ ದೊಡ್ಡದಾದ ಇನ್ನೊಂದು ಡೇರೆ ಊರುವಂತೆಯೂ ಆಯಕಟ್ಟನ್ನು ಗುರ್ತಿಸಿದರು. ವಸತಿ ಡೇರೆಯ ಎಡ ಮಗ್ಗುಲಲ್ಲಿ ಪಂಪಿನ ನೀರು ಸುರಿಯುವ ಗಟ್ಟವಾದ್ದರಿಂದ ಅಲ್ಲಿ ಅಡುಗೆಯ ವ್ಯವಸ್ಥೆ ಮಾಡುವುದೆಂದು ಎಣಿಸಿದರು. ಇಷ್ಟೆಲ್ಲಾ ಹಂಚಿಕೆಯನ್ನು ಕ್ರಮದಂತೆ ಗುರ್ತಿಸಿ ಆದಾಗಿ ಸೂರ್ಯ ನಡುನೆತ್ತಿಯೇರಿದ್ದ. ಎಲ್ಲರನ್ನೂ ಗೌಡರು ಮನೆಗೆ ಕರೆದೊಯ್ದರು. ಉರಿಬಿಸಿಲಲ್ಲಿ ದುಡಿದ ಆಯಾಸವನ್ನು ಮರೆತು ಯುವಕರೊಂದಿಗೆ

ಶಿಬಿರದ ಕಾರ್ಯಕ್ರಮಗಳ ಬಗ್ಗೆ ಪ್ರಸ್ತಾಪಿಸುತ್ತಾ ಊಟವನ್ನು ಮುಗಿಸಿದರು. ಸ್ವಲ್ಪ ಹೊತ್ತು ವಿರಮಿಸಿದ ಬಳಿಕ ಎಲ್ಲರೂ ಮುಂದಿನ ಕಾರ್ಯಕ್ಕೆ ಸಿದ್ಧರಾದರು. ಹೊನ್ನಣ್ಣ, ಸೋಮು ಹಾರೆ ಗುದ್ದಲಿಗಳನ್ನು ಹಿಡಿದು ಹುಲ್ಲು ಮೈದಾನಿನ ಕಡೆ ಹೊರಟರು. ಜಯ ಮತ್ತು ರವಿ ಡೇರೆ ಸುರುಳಿಯೊಂದನ್ನು ಹೊತ್ತು ನಡೆದರು. ಡೇರೆ ನಿಲ್ಲುವ ಜಾಗದ ಹುಲ್ಲನ್ನು ಕೆತ್ತಿದರು. ನೀರು ಸಿಂಪರಿಸಿ, ನೆಲವನ್ನು ಅಗೆದು ಸಜ್ಜುಗೊಳಿಸಿದರು. ಆಯಕಟ್ಟಿನ ಅಂಚಿನಲ್ಲಿ ನಾಜೂಕಾದ ಚರಂಡಿಗಳನ್ನು ಕೊರೆದರು. ಡೇರೆನಿಲ್ಲುವ ಜಾಗ ಎರಕ ಹುಯ್ದಂತೆ ಅಚ್ಚುಕಟ್ಟಾಗಿ ಗೋಚರಿಸಿತು. ನಾಲ್ಕು ಮೂಲೆಗಳಲ್ಲಿ ನಾಲ್ಕು ಗೂಟಗಳನ್ನು ನೆಟ್ಟರು. ಸಂಜೆಯ ವೇಳೆಗೆ ಡೇರೆಯೊಂದು ಎದ್ದುನಿಂತು ಗಿರಿಯೂರ ಸೊಬಗನ್ನು ನೋಡುತ್ತಿತ್ತು. ನಂತರದ ಎರಡು ದಿನಗಳಲ್ಲಿ ಎಲ್ಲಾ ಡೇರೆಗಳೂ ಎದ್ದು ನಿಂತು ಮಿತ್ರಮಂಡಲಿಯ ಆಗಮನವನ್ನು ಇದಿರು ನೋಡುತಲಿದ್ದುವು.

ಜನವರಿ ತಿಂಗಳ 15ನೇ ತಾರೀಕಿನಂದು ಮಿತ್ರವರ್ಗದವರು ಗಿರಿಯೂರಲ್ಲಿ ಶಿಬಿರ ಹೂಡುವುದೆಂದು ಗೊತ್ತುಪಡಿಸಿದ್ದರು. ಈ ವಾರ್ತೆಯನ್ನು ರವಿ ಎಲ್ಲರಿಗೂ ತಿಳಿಸಿದ್ದನು. ಕಾರ್ಯಕ್ರಮದ ಪಟ್ಟಿಯಂತೆ ಮೊದಲ ಹಂತದಲ್ಲಿ ಭಾಗವಹಿಸಲು ಇಪ್ಪತ್ತು ಮಂದಿ ಬರುವುದಾಗಿ ಹಂಚಿಕೆಯಾಗಿತ್ತು. ಎರಡು ದಿನ ಮುಂಚಿತವಾಗಿ ಕುಮಾರ್ ಮತ್ತು ಲೋಕೇಶರು ಅಡುಗೆ ಬೆಳ್ಳಪ್ಪನೊಂದಿಗೆ ಗಿರಿಯೂರ ತಲುಪಿದರು. ಲೋಕೇಶ್ ಮತ್ತು ಸೋಮು ಶಿಬಿರಕ್ಕೆ ಬೇಕಾಗುವ ಅಡುಗೆ ಸಾಮುಗ್ರಿಗಳನ್ನು ಜೋಡಿಸುವುದರಲ್ಲಿ ಮಗ್ನರಾದರು. ಕುಮಾರ್ ಇನ್ನಿತರ ಸಾಮುಗ್ರಿಗಳನ್ನು ಜವಾಬಿಸುತ್ತಿದ್ದನು. ವಾರಪತ್ರಿಕೆ, ದಿನಪತ್ರಿಕೆ ಇತ್ಯಾದಿಗಳು ಶಿಬಿರಕ್ಕೆ ಒದಗುವಂತೆ ಏರ್ಪಾಡು ಮಾಡಿಯಾಯಿತು ರಾಜಪ್ಪ, ಹೊನ್ನಣ್ಣ, ಜಯ ಮೈದಾನಿನಲ್ಲಿ 'ಬ್ಯಾಡ್ಮಿಂಟನ್', ಕಬಡಿ, ಇತ್ಯಾದಿ ಆಟದ ಮೈದಾನಗಳನ್ನೂ ನಿರ್ಮಿಸಿದರು. ಕುಶಾಲಪ್ಪ ಗೌಡರು ಅಡುಗೆ ಬೆಳ್ಳಪ್ಪನಿಗೆ ನೆರವಾಗಲು ಇನ್ನಿಬ್ಬರನ್ನು ನೇಮಿಸಿದರು. ಹಾರೈಸಿದಂತೆ ಸಕಲ ಸಿದ್ಧತೆಗಳೂ ಪೂರೈಸಿದುವು. ಯುವಕರ ಕಾರ್ಯಶೀಲತೆಯನ್ನು ನೋಡುವ ಬಯಕೆ ಗೌಡರಲ್ಲಿ ಇಮ್ಮಡಿಸಿತು.

ಸೋಮವಾರ ಪೇಟೆಯ ಚಂದ್ರಶೇಖರ್ ಆ ದಿನ ಮುಂಜಾನೆಯೇ 'ತನ್ನ ಪವರ್ ಟಿಲ್ಲರ್' ನೊಂದಿಗೆ ಗಿರಿಯೂರು ತಲುಪಿದನು. ಡೇರೆ ಮನೆಗಳಿಂದ ಕಂಗೊಳಿಸುತ್ತಲಿದ್ದ ಶಿಬಿರದ ವಾತಾವರಣ ನೋಡಿ ಚಂದ್ರಶೇಕರ್ ಹರ್ಷಗೊಂಡು ಮಿತ್ರಮಂಡಳಿಯ ಕಾರ್ಯಶೀಲತೆಯನ್ನು ಮೆಚ್ಚಿದನು. ಮಧ್ಯಾಹ್ನದ ವೇಳೆಗೆ ಸಿರಿಯೂರಿಂದ ಪೂವಣ್ಣ ಮತ್ತು ಹರೀಶ್ ಎರಡು ಜೊತೆ ಎತ್ತುಗಳನ್ನು ಅಟ್ಟಿಕೊಂಡು ಬಂದು ತಲುಪಿದರು. ಬಿಸಿಲಿನ ಬೇಗೆ ಸುಡುತ್ತಿದ್ದರೂ ಯುವಕರಿಬ್ಬರು ಲೆಕ್ಕಿಸದೆ ಬಯಲಿನಲ್ಲಿ ಆಕಡೆ ಈಕಡೆ ಸುತ್ತಾಡಿ ಗಿರಿಯೂರ ಪರಿಚಯ ಮಾಡಿಕೊಂಡರು. ಸಂಜೆ ಹೊತ್ತಿನಲ್ಲಿ ಭಾಗಮಂಡಲದ ತಿಮ್ಮಣ್ಣ, ಮಡಿಕೇರಿಯಿಂದ ಕೃಷ್ಣಪ್ಪ, ಚಯ್ಯಂಡಾಣೆಯ ಕಾಳಪ್ಪ ಮತ್ತು ಸಂಗಡಿಗರು ಬಂದು ತಲುಪಿದರು. ಇವರೂ ತಮ್ಮೊಂದಿಗೆ ಉಳುವ ಎತ್ತುಗಳನ್ನು ಕೂಡಿಕೊಂಡು ಬಂದಿದ್ದರು. ಇಷ್ಟರಲ್ಲಿ ಹಾರೈಸಿದ್ದ ಇಪ್ಪತ್ತು ಮಂದಿ ಸದಸ್ಯರೂ ನೆರೆದಿದ್ದರು. ಬಳಲಿ ಬಂದ ಶಿಬಿರಾರ್ಥಿಗಳಿಗೆ ಅಡುಗೆ ಬೆಳ್ಳಪ್ಪನ ರಸಭೋಜನ ದಣಿವು ಮರೆಯುವಂತೆ ಮಾಡಿತು. ಭೋಜನವಾದ ಬಳಿಕ ಎಲ್ಲರೂ ವಿನೋದಾವಳಿಗೆಂದು ನಿರ್ಮಿತವಾದ ಡೇರೆಮನೆಗೆ ಹೋದರು. ಮುಂದಿನ ಕೆಲಸ ಕಾರ್ಯಗಳ ಗೊತ್ತುವಳಿಯನ್ನು ಚರ್ಚಿಸುತ್ತಿರುವಾಗ ಗೌಡರೂ ಕೈಯಲ್ಲಿ ಟಾರ್ಚೊಂದನ್ನು ಹಿಡಿದು ಅಲ್ಲಿಗೆ ಬಂದರು. ತಮ್ಮ ಸಲಹೆಯನ್ನು ಸೇರಿಸಿ ಕಾರ್ಯಕ್ರಮದ ಪಟ್ಟಿಯನ್ನು ಸಜ್ಜುಗೊಳಿಸಿದರು. ಅಲ್ಲದೆ ತಮ್ಮ ಎತ್ತುಗಳನ್ನು ಮತ್ತು ಇತರ ಕೆಲವು ಸಲಕರಣೆಗಳನ್ನು ಬೇಸಾಯ ಕೆಲಸಕ್ಕೆ ಉಪಯೋಗಿಸಬಹುದೆಂದು ತಿಳಿಸಿದರು. ನಂತರ ಹಂಚಿಕೆಯಂತೆ ತಮ್ಮ ತಮ್ಮ ಡೇರೆ ಮನೆಗಳನ್ನು ಸೇರಿದರು. ಗೌಡರು ಎಲ್ಲಾ ಡೇರೆಗಳನ್ನೂ ಸಂದರ್ಶಿಸಿ ತಮ್ಮ ಮನೆಯ ಕಡೆ ಹೊರಟರು.

ಸೂರ್ಯೋದಯಕ್ಕೆ ಮುನ್ನವೇ ಎಲ್ಲರೂ ಎದ್ದು ಪ್ರಾತಃ ವಿಧಿಗಳನ್ನು ಮುಗಿಸಿ ಬಿಸಿ ಬಿಸಿ ಕಾಫಿಯನ್ನು ಕುಡಿದು

ಉತ್ಸಾಹ ತುಂಬಿಕೊಂಡರು. ರವಿ, ರಾಜಪ್ಪ, ಸೋಮು ಎತ್ತುಗಳನ್ನು ಉಳುವ ಗದ್ದೆಗೆ ಅಟ್ಟಿಕೊಂಡು ಬಂದರು. ಕೃಷ್ಣಪ್ಪನ ಬೂದ ಎತ್ತು ಕಾಲಿಂದ ಮಣ್ಣನ್ನು ಕೆದುರುತ್ತಾ ಉಳಿದ ಎತ್ತುಗಳನ್ನು ಕಾಳಗಕ್ಕೆ ಕರೆಯುತಿತ್ತು. ಲೋಕೇಶ್ ತನ್ನ ಕೈಯಲ್ಲಿದ್ದ ಕೋಲಿಂದ ಅದಕ್ಕೆರಡೇಟು ಬಾರಿಸಿದನು. ಅಷ್ಟರಲ್ಲಿ ಇನ್ನೆರಡು ಎತ್ತುಗಳು ಬೆದರಿ ಓಡಿದುವು - ಹರಿ, ಪೂವಣ್ಣ ಅವುಗಳನ್ನು ಹಿಂಬಾಲಿಸಿ ಹೇಗೂ ಹಿಡಿದು ತಂದರು. ಅಂತು ಗಿರಿಯೂರ ಶಿಖರವನ್ನು ಮುದ್ದು ಮುಖದ ಸೂರ್ಯ ನೋಡುತ್ತಿರುವಾಗ ಹತ್ತು ಮಂದಿ ನೇಗಿಲಯೋಗಿಗಳು ಕಾರ್ಯ ತತ್ಪರರಾಗಿದ್ದರು. ಕೃಷ್ಣಪ್ಪ ಎಲ್ಲರಿಗೂ ಮುಂದಾಗಿ ಸಾಗುತ್ತಿದ್ದನು. ರವಿ, ಸೋಮು, ಹರ-ಹೀ-ಹೋ.... ಎಂಬ ಗಾನದಿಂದ ಎಲ್ಲ ಎತ್ತುಗಳನ್ನು ಹುರಿದುಂಬಿಸುತ್ತಿದ್ದರು. ಎತ್ತುಗಳಾದರೋ ಎಲ್ಲಿಲ್ಲದ ಉತ್ಸಾಹದಿಂದ ಗಬಗಬನೆ ಸಾಗುತ್ತಿದ್ದವು. ಪಕ್ಕದಲ್ಲಿದ್ದ ವಿಶಾಲವಾದ ಗದ್ದೆಯೊಂದನ್ನು ಜಯ ಮತ್ತು ಚಂದ್ರಶೇಕರ್ 'ಟಿಲ್ಲರ್'ನಲ್ಲಿ ಉತ್ತು ದೂಳಿಬ್ಬಿಸುತ್ತಿದ್ದರು. ಶಾಲಾಮಕ್ಕಳ ಗುಂಪೊಂದು ಬಯಲಂಚಿನಲ್ಲಿ ಸಾಲಾಗಿ ಸಾಗಿ ಬರುತ್ತಿದ್ದಾಗ ಒಂದು ಗದ್ದೆ ಉತ್ತು ಪೂರೈಸಿತ್ತು. ಬುತ್ತಿಗಂಟು ಹಿಡಿದು, ಜಂಡೆಯಂತಿರುವ ಪುಸ್ತಕ ಗಂಟನ್ನು ಹೆಗಲಿಂದ ಇಳಿಬಿಟ್ಟ ವಿದ್ಯಾರ್ಥಿಗಳು ತಮ್ಮೊಳಗೆನೆ ಈ ವಿಶೇಷತೆಯ ಬಗ್ಗೆ ಚರ್ಚಿಸುತ್ತಾ ಮುಂದೆ ಸಾಗಿದರು. ಮೊದಲ ದಿನವಾದ್ದರಿಂದ ಉಳುಮೆಯನ್ನು ಸ್ವಲ್ಪ ಬೇಗನೆ ಮುಗಿಸಿ ಎತ್ತುಗಳನ್ನು ಮೈತೊಳೆಯಲು ನದಿಯ ಸಮೀಪ ಅಟ್ಟಿದರು. ಓಟಗಾರ ಕಾಳೆ ಎತ್ತನ್ನು ಸೋಮು ಹಗ್ಗದಿಂದ ಹಿಡಿದು ಹೊಳೆಯೊಳಗೆ ದಬ್ಬಿ ಹಗ್ಗದ ತುದಿಯನ್ನು ಕಾಲಿಗೆ ಸುತ್ತಿಕೊಂಡು ಕಾಳೆಯ ಮೈಗೆ ನೀರು ಹಾರಿಸಿದನು. ಚೇಳು ಕಂಡ ಹುಡುಗಿಯಂತೆ ಕಾಳೆ ಮುಂದಕ್ಕೆ ಜಿಗಿಯಿತು. ಒಂದೆರಡು ಜಿಗಿತದಲ್ಲಿ ಸೋಮು ಪಾಲುಗೊಂಡುದಲ್ಲದೆ ಎರಡು ಗುಟುಕು ನೀರು ಬೇರೆ ಕುಡಿದನು. ಉಸಿರು ಹಿಡಿದು ಕೆಮ್ಮುತ್ತಾ ದಡ ಸೇರಿ ಕೈ, ಕಾಲುಗಳನ್ನು ಮುಟ್ಟಿ ಎಲ್ಲ ಸರಿ ಇವೆಯೋ ಎಂದು ನೋಡಿಕೊಂಡನು. ನಾಚಿಕೆ ತೋರೆಯಲು ಹೇ....ಹೇ... ಎಂದು ನಗುತ್ತಾ ತನ್ನ ಡೇರೆಯೊಳಗೆ ಹೋದನು.

ಕಾಫಿ ತಿಂಡಿಯ ಬಳಿಕ ಲೋಕೇಶ್ ಮತ್ತು ಸಂಗಡಿಗರು ಸೌದೆ ಸಂಗ್ರಹಿಸಲು ಕತ್ತಿ,ಕೊಡಲಿ ಹಿಡಿದು ಪಕ್ಕದ ಗುಡ್ಡವೇರಿದರು. ರಾಜಪ್ಪ ನಾಲ್ಕಾರು ಚಿತ್ರ ಬರೆಯುವ ಹಾಳೆಗಳನ್ನು ಹಿಡಿದು ಎತ್ತುಮೇಯಿಸಲು ಹೊರಟನು. ರವಿ ಮತ್ತು ಕುಮಾರ್ ಅಗತ್ಯವಾಗಿದ್ದ ಎರಡು ವಿದ್ಯುತ್ ದೀಪ ಕಂಬನೆಡಲು ತೊಡಗಿದರು. ಒಬ್ಬೊಬ್ಬರು ಒಂದೊಂದು ಕೆಲಸದಲ್ಲಿ ಮಗ್ನರಾಗಿ ಕೆಲಸವನ್ನು ಪೂರೈಸಿ ಮಧ್ಯಾಹ್ನದ ಊಟಕ್ಕೆ ಮರಳಿದರು. ಊಟ ಆದನಂತರ ವಿಶ್ರಮಿಸಿದರು. ಎಲ್ಲರೂ ಡೇರೆಯೊಳಗೆ ವಿಶ್ರಮಿಸಿದರು. ಸಂಜೆ ಬ್ಯಾಡ್‌ಮಿಂಟನ್, ಕಬಡಿ, ಚೆಸ್ ಇತ್ಯಾದಿ ಆಟಗಳಲ್ಲಿ ಭಾಗವಹಿಸಿದರು. ಹೊಸ ದಿನಚರಿಯಿಂದ ಒದಗುತ್ತಿರುವ ಸಹಬಾಳ್ವೆಯ ಪೂರ್ಣ ಸವಿಯನ್ನು ಎಲ್ಲರೂ ಅನುಭವಿಸುತ್ತಿದ್ದರು. ಸೂರ್ಯಾಸ್ತಮಾನದ ಬಳಿಕ ವಿನೋದಾವಳಿಯ ಡೇರೆಯಲ್ಲಿ ಎಲ್ಲರೂ ಸೇರಿದರು. ಮುಂದಿನ ಕೆಲಸ ಕಾರ್ಯಗಳ ಬಗ್ಗೆ ಚರ್ಚಿಸಿದರು. ಈ ಮಧ್ಯೆ ಯಾವ ಜಾತಿಯ ಭತ್ತಬೆಳೆಯುವುದೆಂಬ ಪ್ರಶ್ನೆಯೂ ಬಹುದೆಂಬ ನಿರ್ಧಾರಕ್ಕೆ ಬಂದರು. ಅಷ್ಟರಲ್ಲಿ ಹೊನ್ನಣ್ಣನು ಬಾರಿಸುತ್ತಿದ್ದ ಟಿಸ್ಟಿನ ತಮಸ ನಾದ ಜಯ ರಾಜಪ್ಪರನ್ನು ಕುಣಿತಕ್ಕೆ ಆಹ್ವಾನಿತು. ಹಲ್ಲಿ ಕುಣಿತ, ಹಾವು ಕುಣಿತ, ದೇವರು ಕುಣಿತ ಪ್ರಾರಂಭವಾಯಿತು. ಸೋಮು ನದಿಯಲ್ಲಿ ಕಾಲು ಮೇಲಾಗಿ ತಾಳೆಯೊಂದಿಗೆ ಜಿಗಿದ ದೃಶ್ಯವನ್ನು ಕೃಷ್ಣಪ್ಪ ನಟಿಸಿ ಎಲ್ಲರನ್ನು ಹೊಟ್ಟೆ ಹುಣ್ಣಾಗುವಂತೆ ನಗಿಸಿದನು. ಅಷ್ಟರಲ್ಲಿ ಬೆಳ್ಯಪ್ಪನ ಸವಿ ಎಲ್ಲರನ್ನು ಸಭೆ ಮುಕ್ತಾಯವಾಗುವಂತೆ ನೆನಪು ಮಾಡಿತು.

ನಂತರದ ಎರಡು ದಿನಗಳಲ್ಲಿ ಬೀಜ ಬಿತ್ತುವ 'ಯಾಕಲಿನ' ತಯಾರಿ ಬಿರುಸಿನಿಂದ ನಡೆಯಿತು. ಕೆಸರು ಗದ್ದೆಯ ಉಳುಮೆ ಕೆಲವರಿಗೆ ವಿಚಿತ್ರವಾಗಿ ಕಂಡಿತು. ಎತ್ತುಗಳ ಬಾಲದಿಂದ ಚಿಮ್ಮಿದ ಕೆಸರಿನ ತುಣುಕ ಲೋಕೇಶನನ್ನು ಕಣ್ಣುಮುಚ್ಚಿ ನಿಲ್ಲುವಂತೆ ಮಾಡಿತ್ತು, ಎತ್ತುಗಳ ಬಾಲವನ್ನು ನೇಗಿಲ ದಂಡಕ್ಕೆ' ಬಿಗಿಯಬೇಕೆಂದು ಸೂಚಿಸಿದ. ಆದರೆ ಕ್ರಮೇಣ ಇಂತಹ ಹೊಸತು ವಿಷಯಗಳು ರೂಢಿಯಾದುವು. ಉತ್ತಬಳಿಕ ಕೈಯಲ್ಲಿ ಗುದ್ದಲಿ ಹಿಡಿದು

ಏರಿಯ ಅಂಚನ್ನು ಕೆತ್ತಿದರು. ಮೊದಮೊದಲು ಏರು ಪೇರಾಗಿ ಸಾಗಿದರೂ ಕೊನೆಗೆ ಅಚ್ಚುಕಟ್ಟಾಗಿ ಸಾಗುತಿತ್ತು. ಎರಡು ದಿನಗಳಲ್ಲಿ ಆ ಗದ್ದೆಯನ್ನು 'ತಾವೆ ಹೊಡೆದು' ಬೀಜ ಬಿತ್ತಲು ತಯಾರುಮಾಡಿದರು. ನೀರು ತುಂಬಿದ ಗದ್ದೆ ಬಿಸಿಲಿನಲ್ಲಿ ಕನ್ನಡಿಯಂತೆ ಗೋಚರಿಸಿತು. ಪದ್ಧತಿಯಂತೆ ಕೃಷ್ಣಪ್ಪ ಅದರ ಮಧ್ಯದಲ್ಲಿ ಒಂಪು ಕಸುವಿನ ಗಿಡವನ್ನು ನೆಟ್ಟು ಮುಂದೆ ಮೊಳೆಯಲಿರುವ ಭತ್ತದ ಸಸಿ ಕಸುವಿನಷ್ಟು ಹುಲುಸಾಗಿ ಶೀಘ್ರದಲ್ಲಿ ಬೆಳೆಯಲೆಂದು ಪ್ರಾರ್ಥಿಸಿಕೊಂಡನು.

ಮಾರಣೆ ದಿನ ಎಂದಿನಂತೆ ಕೆಲಸ ಕಾರ್ಯಗಳು ಪ್ರಾರಂಭವಾದುವು. ಕೆಲವರು ಉಳುಮೆಯನ್ನು ತೊಡಗಿದರು. ಮತ್ತೆ ಕೆಲವರು ನೀರು ಹಾಯಿಸುವ ಚರಂಡಿಗಳನ್ನು ದುರಸ್ಥಿಪಡಿಸಿದರು. ರಾಜಪ್ಪ ಮತ್ತು ತಿಮ್ಮಣ್ಣ ಹೆಗಲಿನಲ್ಲಿ ಬುಟ್ಟಿಗಳನ್ನು ತೂಗಿಕೊಂಡು ಯಾಕಲಿನಲ್ಲಿ ಬೀಜ ಬಿತ್ತುವ ಕೆಲಸವನ್ನು ತೊಡಗಿದರು. ಮಧ್ಯಾಹ್ನಕ್ಕೆ ಮೊದಲೇ ಬೀಜ ಬಿತ್ತುವ ಕೆಲಸ ಮುಗಿಯಿತು. ಕೆಸರಿನಲ್ಲಿ ಬದುಕಿನ ನೆರಳನ್ನು ಕಂಡ ಎಲ್ಲ ಯುವಕರಿಗೂ ಬಿತ್ತಿದ ಗದ್ದೆಯನ್ನು ಕಂಡಾಗ ಮನದಲ್ಲಿ ಸಂತಸದ ಬೀಜ ಮೊಳೆಯಲಾರಂಭಿಸಿತು. ತಮಗೊದಗಿರುವ ಯೋಗ್ಯ ಸೌಲಭ್ಯತೆಯಿಂದ ಯಾರ ಕಾಟ್ಟಪ್ಪಣೆಯೂ ಇಲ್ಲದೆ ಶಿಸ್ತಿನ ದಿನಚರಿಯನ್ನು ಪಾಲಿಸಿದರು. ವಾರದ ಪ್ರತಿಯೊಂದು ದಿನವೂ ಉತ್ಸಾಹದ ಕಿರಣದೊಂದಿಗೆ ಉದಯವಾಯಿತು. ದಿನದಿಂದ ದಿನಕ್ಕೆ ಕೆಲಸಕಾರ್ಯಗಳಲ್ಲಿ ಕೌಶಲತೆ ಹೆಚ್ಚಿತು ಸಹಬಾಳ್ವೆಯ ಸವಿಯನ್ನು ಉಂಡರು. ಪ್ರತಿ ದಿನ ಸಂಜೆ ಎಲ್ಲರೂ ಉತ್ತಮ ವಿಚಾರಗಳ ಬಗ್ಗೆ ಚರ್ಚಿಸುತ್ತಿದ್ದರು.

ಮುಂದಿನ ಹತ್ತು ದಿನಗಳಲ್ಲಿ ನಾಟಿಕೆಲಸ ಪ್ರಾರಂಭವಾಗಬೇಕು. ವಿವಿಧ ಹಂತಗಳಲ್ಲಿರುವ ಯಾಕಲುಗಳು ಭತ್ತದ ಸಸಿಯಿಂದ ಕಂಗೊಳಿಸುತ್ತಲಿವೆ. ಎಲ್ಲಾ ಗದ್ದೆಗಳಲ್ಲಿ ನಿಯಮಿತ ಕಾಲದಲ್ಲಿ ಕೆಲಸ ಸಾಗುತ್ತಲಿದೆ. ಕುಶಾಲಪ್ಪ ಗೌಡರು ತರುಣರ ಶಿಸ್ತಿನ ಬಾಳನ್ನು ಕಂಡು ತಮ್ಮ ಪ್ರೋತ್ಸಾಹದ ಕೊಡುಗೆ ಫಲಿಸಿತೆಂಬ ಕನಸು ಕಾಣುತ್ತಿದ್ದರು. ಎಲ್ಲರಲ್ಲಿ ಮೊದಲು ಅಡಗಿದ್ದ ಸೋಮಾರಿತನವೆಂಬ ಭೂತ ದುಡಿಮೆಯ ತಿಳಿನೀರಿನಲ್ಲಿ ಕೊಚ್ಚಿ ಹೋಗಿತ್ತು. ನಿರುದ್ಯೋಗಿಗಳಾಗಿದ್ದಾಗ ಬೆನ್ನು ಹತ್ತಿದ್ದ ದುರಾಭ್ಯಾಸಗಳು ದುಡಿಮೆಯ ರಂಗದಲ್ಲಿ ತನಗೆ ಸ್ಥಾನ ದೊರೆಯದೆ ಪಲಾಯನ ಮಾಡಿದ್ದುವು. ಸೂರ್ಯೋದಯಕ್ಕೆನೇ ಸೇಂದಿ ಮರದತ್ತ ದೃಷ್ಟಿ ಹಾಯಿಸುತ್ತಿದ್ದ ರವಿಯ ಕಣ್ಣುಗಳು ಈಗ ಭತ್ತದ ಸಸಿಯತ್ತ ಹಾಯುತ್ತಲಿವೆ. ಅಂದು ನೊರೆ ಸೇಂದಿಯೊಳಗಿಂದ ಮನಸ್ಸಿಗೆ ನೆಮ್ಮದಿ ದೊರೆಯುತ್ತಿತ್ತು. ಈಗ ಸಹಬಾಳ್ವೆಯ ದುಡಿಮೆಯಿಂದ ಅದಕ್ಕಿಂತ ಮಿಗಿಲಾದ ನೆಮ್ಮದಿ ದೊರೆಯುತ್ತಲಿದೆ. ಸಹಬಾಳ್ವೆಯ ದುಡಿಮೆ ಪ್ರತಿಯೊಬ್ಬನಲ್ಲಿಯೂ ಹೊಸನಡತೆಯ ಬೀಜವನ್ನು ಬಿತ್ತಿತ್ತು.

ಮಧ್ಯಾಹ್ನದ ಊಟವನ್ನು ಮುಗಿಸಿ ಎಲ್ಲರೂ ವಿಶ್ರಮಿಸುತ್ತಿದ್ದರು. ರವಿ, ಸೋಮು ಮತ್ತು ಜಯ, ಇವರ ತಾಯಂದಿರು ಬಗೆ ಬಗೆಯ ತಿಂಡಿಯ ಗಂಟುಗಳನ್ನು ಹೊತ್ತುಕೊಂಡು ಗಿರಿಯೂರ ಶಿಬಿರಕ್ಕೆ ಬಂದರು ಬೆಂಗಳೂರಿಂದ ಬಂದಿದ್ದ ಸಂತೋಷ್ ತಾಯಂದಿರ ಜತೆಯಲ್ಲಿ ಬಂದಿದ್ದನು ರವಿ ಮತ್ತು ಕುಮಾರ್ ಯಾವುದೋ ಲೆಕ್ಕಪತ್ರಗಳನ್ನು. ಜೋಡಿಸುತ್ತಿದ್ದವರು ತಟ್ಟನೆ ಮುಂದೆ ಬಂದು ತಾಯಂದಿರನ್ನು ಸ್ವಾಗತಿಸಿದರು. ಕ್ಷಣದಲ್ಲಿಯೇ ಎಲ್ಲರೂ ಅಥಿತಿಗಳನ್ನು ಬಂದು ಮಾತನ್ನಾಡಿಸಿದರು. ಜಯ ಮತ್ತು ಹೊನ್ನಣ ತಿಂಡಿಯ ಗಂಟುಗಳನ್ನು ಬಿರಿದು ಎಲ್ಲರಿಗೂ ಹೋಳಿಗೆ, ಲಾಡು ಇತ್ಯಾದಿಯನ್ನು ಹಂಚಿದರು. ಉಭಯ ಕುಶಲೋಪರಿಯಾಗುತ್ತಿದ್ದಂತೆಯೇ ಗೌಡರ ಪತ್ನಿಯೂ ಅಲ್ಲಿಗೆ ಬಂದರು ಒಂದೆರಡುಗಂಟೆಗಳ ಕಾಲ ಶಿಬಿರದ ಕಾರ್ಯಕ್ರಮಗಳ ಬಗ್ಗೆ ಮಾತನ್ನಾಡಿದರು. ಭತ್ತದ ಸಸಿಯನ್ನು ಕಿತ್ತು ಸಂಗ್ರಹಿಸುವ ಕಾರ್ಯದ ಬಗ್ಗೆ ಒಂದಿದ್ದ ಅಥಿತಿಗಳು ಪ್ರಶ್ನಿಸಿದರು. ಗೌಡರ ಪತ್ನಿ ತಾನು ಮತ್ತು ನೆರಕರೆಯ ಮಹಿಳೆಯರು ಸಹಾಯ ಮಾಡುವುದಾಗಿ ಭರವಸೆ ಇತ್ತರು. "ಇಷ್ಟಾಗುವಾಗ ನಾವೇಕೆ ಸುಮ್ಮನಿರುವುದು, ಯುವಕರ ಪ್ರಯತ್ನಕ್ಕೆ ನಮ್ಮ ಪ್ರೋತ್ಸಾಹವು ದೊರೆಯಲಿ" ಎಂದು ಬಂದಿದ್ದ ಅಥಿತಿಗಳು ಸಸಿ ತೆಗೆಯುವ ದಿನವನ್ನು ತಮಗೂ ತಿಳಿಸುವಂತೆ

ಕೇಳಿಕೊಂಡರು. ಅಸಾಧ್ಯವಾಗಿದ್ದ ಪ್ರಶ್ನೆಯೊಂದು ಸುಲಭದಲ್ಲಿ ಇತ್ಯರ್ಥವಾಯಿತು. ಎಲ್ಲರಿಗೂ ಎಲ್ಲರೂ ಶುಭವನ್ನು ಕೋರಿ ಅತಿಥಿಗಳು ಗೌಡರ ಪತ್ನಿಯ ಆದೇಶದಂತೆ ಗೌಡರ ಮನೆಗೆ ನಡೆದರು. ಉಚಿತ ಅಥಿತ್ಯವನ್ನು ಸ್ವೀಕರಿಸಿ ಸಂಜೆ ಮೂವರು ತಾಯಂದಿರು ಸಿರಿಯೂರ ಕಡೆ ಬಸ್ಸೇರಿದರು. ಸಂತೋಷ್ ಶಿಬಿರದಲ್ಲಿಯೇ ಉಳಕೊಂಡರು.

ನಾಟಿನೆಡುವ ಕಾರ್ಯಕ್ಕೆ ಇನ್ನು ಹೆಚ್ಚುಮಂದಿ ಸದ್ಯಸ್ಯರ ಅಗತ್ಯವಿತ್ತು. ಗಿರಿಯೂರಿಗೆ ಬರುವ ಹವಣಿಕೆಯಲ್ಲಿದ್ದ ಮಿತ್ರರಿಗೆ ರವಿಯ ಪತ್ರಗಳು ಆಮಂತ್ರಣ ಕೊಟ್ಟವು. ಎರಡು ಡೇರೆಗಳು ಹೊಸತಾಗಿ ರಚಿತವಾದುವು. ನಾಟಿನೆಡಲು ತೊಡಗಿ ಒಂದು ವಾರದೊಳಗೆ ಪೂರೈಸಬೇಕೆಂದು ತೀರ್ಮಾನಿಸಿದ್ದರು. ಸಕಲ ಸಿದ್ಧತೆಗಳು ಬಿರುಸಿನಿಂದ ಜರುಗಿದುವು. ಉತ್ತು ಹದಗೊಳಿಸಿದ ಗದ್ದೆಗಳು ತುಂಬು ನೀರಿನಿಂದ ಥಳಥಳಿಸುತ್ತಿದ್ದುವು. ಬೆಳಿಗ್ಗೆ ಮತ್ತು ಸಾಯಂಕಾಲ ಹೊಳೆಯಂಚಿನಲ್ಲಿ ತಳವೂರಿದ್ದ "ಪಂಪು"ಗಳು ಗುಡುಗುಡು ನಾದವನ್ನೆಬ್ಬಿಸುತ್ತಾ ಗದ್ದೆಗಳಿಗೆ ನೀರನ್ನು ಸುರಿಯುತ್ತಿದ್ದುವು.

ಗೊತ್ತುಪಡಿಸಿದ ದಿನಕ್ಕೆ ಸರಿಯಾಗಿ ಕೊಡಗಿನ ಎಲ್ಲಾ ಭಾಗಗಳಿಂದ ನಿರೀಕ್ಷಿತ ಮಿತ್ರವರ್ಗದವರು ಶಿಬಿರವನ್ನು ತಲಪಿದರು. ಶಿಬಿರದಲ್ಲಿ ಮಿತ್ರ ಮಂಡಲಿಯ ಸಂಖ್ಯೆ 35 ಕ್ಕೆ ಏರಿತು. ಸಿರಿಯೂರ ಮಾತೆಯರು ಕುಶಾಲಪ್ಪ ಗೌಡರ ಮನೆಯಲ್ಲಿ ಬಂದು ನೆರೆದರು. ಗೌಡರ ಪತ್ನಿಯವರ ಸಡಗರ. ಒಂದುವಾರದ ಅಡುಗೆ ವಿಚಾರಿಸುತಿದ್ದರು, ಶಿಬಿರ ಕುಮಾರ್ ಮತ್ತು ರವಿ ಏನೇನೊ ವಿಜೃಂಭಣೆಯ ಏರ್ಪಾಡುಗಳನ್ನು ಗೊತ್ತುಪಡಿಸಿದರು. ಈ ರೀತಿಯಾಗಿ ಗಿರಿಯೂರಲ್ಲಿ ಸಡಗರದ ಅಲೆಗಳು ಉದ್ಭವಿಸಿದುವು.

ಪ್ರಾತಃಕಾಲಡ ಶುಭಗಳಿಗೆಯಲ್ಲಿ ಗೌಡರ ಪತ್ನಿ ಪದ್ಧತಿಯಂತೆ ಅಗೆ ಮೂಹೂರ್ತ ಮಾಡಿದರು. "ತರುಣರ ಉತ್ಸಾಹಕ್ಕಿಂತ ಹುಲುಸಾದ ಭತ್ತದ ಸಸಿ ಎಂಬ ವಾರ್ತೆಯನ್ನು ಹೆಂಗೆಳೆಯರ ಮಧ್ಯ ಬಿತ್ತಿದರು. ಮರುದಿನ ಮುಂಜಾನೆ ಹತ್ತಾರು ಮಂದಿ ಮಹಿಳೆಯರು ಸಸಿ ಸಂಗ್ರಹಿಸುವ ಕೆಲಸ ತೊಡಗಿದರು. ಮಾತಿನ ಮಾಲೆಗಳು ಕೆಲಸಕ್ಕೆ ಹುರುಪುಕೊಡುತ್ತಿದ್ದವು. ಕೆಲವರ ಬಾಯಿಂದ ಬಹಳ ಸಮಯದಿಂದ ಅವಿತುಕೊಂಡಿದ್ದ ಸೋಬಾನೆಗಳು ಉದುರಿದುವು. ಹಾಸ್ಯ ನುಡಿಗಳಿಂದ ನಡುವೆದ್ದಾಗ ಪಕ್ಕದ ಗದ್ದೆಗಳಲ್ಲಿ ನೀರಲೆಗಳು ಮೇಲೇಳುತ್ತಿದ್ದುವು. ಸಂಜೆಯ ವೇಳೆಗೆ ಸುಮಾರು ಮೂರು ಏಕ್ರೆಯಷ್ಟು ಗದ್ದೆಗಳಿಗೆ ಬೇಕಾಗುವ ಸಸಿಯುನ್ನ ಸಂಗ್ರಹಿಸಿದರು.

ಬೆಳಗಿನ ಹೊಂಗಿರಣ ಬಯಲನ್ನು ಆವರಿಸುವ ಮುನ್ನವೇ 15 ಜೊತೆ ಎತ್ತುಗಳಿಂದ ಉಳುವ ಕಾರ್ಯ ತೊಡಗಿತು. ಬೇಟೆಗಾರ ರಾಮಣ್ಣ ಮತ್ತು ಇನ್ನಿಬ್ಬರು ತಾವಾಗಿಯೇ ಬಂದು ಬೇಸಾಯ ಕಾರ್ಯದಲ್ಲಿ ಪಾಲುಗೊಂಡರು. ಎರಡು, ವಿಶಾಲವಾದ ಗದ್ದೆಗಳನ್ನು ಉತ್ತು ಪೂರೈಸಿದ ಕೂಡಲೇ ರಾಜಪ್ಪ ಮತ್ತು ಕೃಷ್ಣಪ್ಪ ತಮ್ಮ ಎತ್ತುಗಳಿಗೆ 'ತಾವೆಮರ' ಕಟ್ಟಿದರು. ಊಳುವಿಕೆಯ ಮಧುರ ಗಾನ ಗಿರಿಯೂರ ಶಿಖರಗಳನ್ನು ಚುಂಬಿಸಿತ್ತು. ಸಾಕಷ್ಟು ಗದ್ದೆಗಳನ್ನು ಉತ್ತಬಳಿಕ ಎತ್ತುಗಳ ಮೈ ತೊಳೆದು ಹುಲ್ಲು ಮೈದಾನಕ್ಕೆ ಅಟ್ಟಿದರು. ರಾಜಪ್ಪ ಇನ್ನೂ 'ತಾವೆ' ಹೊಡೆಯುತ್ತಿದ್ದರು. ತಾವೆಯಲ್ಲಿ ಮಣ್ಣನ್ನು ಬೇಕಾಪೆಡೆಗೆ ಸರಿಸುವುದು ಕಂಡಾಗ ರವಿಗೆ ತಾನೂ ಆ ಕೆಲಸ ಮಾಡಬೇಕೆಂಬ ಬಯಕೆಯಾಯಿತು. ರಾಜಪ್ಪನಿಂದ ತಾವೆ ಮರವನ್ನು ಪಡೆದನು. ಮಣ್ಣು ಹೇರಲು ಒಂದು ಕಾಲನ್ನು ಮರದ ಮೇಲಿಟ್ಟು ಒತ್ತಿದನು. ಎತ್ತುಗಳ ನೆಗೆತಕ್ಕೆ ಕಾಲು ಒಳಬದಿಗೆ ಜಾರಿದ್ದರಿಂದ ಮುಗ್ಗರಿಸಿ ಬಿದ್ದು ಕೆಸರಿನ ಲೇಪನ ಮಾಡಿಕೊಂಡನು. ಆಕಾಶ ಬಿರಿಯುವಂತೆ ಬಯಲಿನಲ್ಲಿ ನಗುವೆದ್ದಿತು. ಎತ್ತುಗಳ ಜೊತೆಗೆ ಮೈತೊಳೆಯುವ ಕಾರ್ಯಕ್ಕೆ ಅಂದು ರವಿಯನ್ನು ಸೇರಿಸಿಕೊಂಡರು.

ಎಲ್ಲರೂ ಅಗೆ ಕಂತೆಗಳನ್ನು ಬಿರುಸಿನಿಂದ ನಾಟಿ ಗದ್ದೆಗಳಿಗೆ ಸಾಗಿಸಿ ಹರಡಿದರು. ಪೈಪೋಟಿಯಿಂದ ಕಂತೆಗಳನ್ನು ಎಸೆದರು. ಅಷ್ಟರಲ್ಲಿ ಗೌಡರು ಬಂದು ನಾಟಿ ನೆಡಲು ತೊಡಗಿ

ದರು. ಗೌಡರ ಬಲ ಬದಿಯಲ್ಲಿ ಸಾಲಾಗಿ ನಾಟಿ ಊರಲು ಪ್ರಾರಂಭಿಸಿದರು. ಸೋಮು ಲೋಕೇಶ ಪೈಪೋಟಿಯಿಂದ ಸಾಗುತ್ತಿದ್ದರು. ಕೃಷ್ಣಪ್ಪನನ್ನು ಬೆನ್ನಟ್ಟಿ ಬರುವಂತೆ ರಾಜಪ್ಪ ನಾಟಿ ಊರುತ್ತಿದ್ದ ಮಧ್ಯಾಹ್ನಕ್ಕೆ ವಿಶಾಲವಾದೊಂದು ಗದ್ದೆಯನ್ನು ನೆಟ್ಟು ಮುಗಿಸಿದರು. ಸಂಜೆಯಾದಾಗ ಕೆಲವರ ಸೊಂಟ ಡೊಂಕಾಯಿತು. ಕೆಲವರ ಕೈ ಬೆರಳ ತುದಿಯಲ್ಲಿ ಉರಿಯೆದ್ದಿತು. ಆದರೆ ರಾಮಣ್ಣನವರ ಹಾಸ್ಯ ಕಥೆಗಳು ಸದ್ಯಕ್ಕೆ ಎಲ್ಲರ ಬೇನೆಯನ್ನು ಮರೆಮಾಜುವಂತೆ ಮಾಡಿತು. ಸಂಜೆಗೆ ಸಜ್ಜುಗೊಳಿಸಿದ ಗದ್ದೆಗಳನ್ನು ನೆಟ್ಟು ಪೂರೈಸಿದರು. ಮಹಿಳೆಯರು ಹಿಂದಿನ ದಿನಕ್ಕಿಂತ ಹೆಚ್ಚು ಸಸಿಯನ್ನು ಸಂಗ್ರಹಿಸಿದ್ದರು.

ನಾಲ್ಕನೇ ದಿನದಲ್ಲಿ ವಿಶಾಲವಾಗಿದ್ದ 'ಕಂಬಳ'ದ ಗದ್ದೆಯನಾಟಿ. ಮಧ್ಯಾಹ್ನಕ್ಕೆ ಗಡದ್ದಿನ ಊಟದ ಏರ್ಪಾಡು. ಗೌಡರ ಮನೆಯಲ್ಲಿ ಇದರ ಆಸೆಯಿಂದಲೋ ಏನೋ ಊರಿನ ನಾಲ್ಕಾರು ಮಂದಿ ಬಂದು ನಾಟಿನೆಡಲು ನೆರವಾದರು. ರಾಜಪ್ಪ ಮತ್ತು ಕೃಷ್ಣಪ್ಪ ಕಂಬಳದ ಗದ್ದೆಯಲ್ಲಿ 'ಕೊಡಿನಾಟಿ' ಊರಲು ಒಂದು ಮೂಲೆಯಿಂದ ತೊಡಗಿದರು. ಎಂದಿಗಿಂತ ಮಿಗಿಲಾದ ಹುರುಪಿನಿಂದ ಅಂದಿನ ಕೆಲಸ ಸಾಗುತ್ತಲಿತ್ತು. ಪಕ್ಕದ ಯಾಕಲಿನಿಂದ ಕೇಳಿಬರುತ್ತಿದ್ದ ಸೋಬಾನೆಗಳು ಬಿಸಲ ಬೇಗೆಯನ್ನು ಮರೆಯಿಸಿದುವು. 'ಕೊಡಿನಾಟಿ' ಮಧ್ಯಾಹ್ನದ ಊಟದ ವೇಳೆಗೆ ಗುರಿ ಮುಟ್ಟಿತು. ಸರಳ ರೇಖೆಯ ಮೇಲೆ ಹಾದುಬಂದ ಮೂರು ಸಾಲಿನ ಕೊಡಿನಾಟಿಗಳು ಕೃಷ್ಣಪ್ಪ ಮತ್ತು ರಾಜಪ್ಪರ ಅಸಾಮಾನ್ಯ ಕೌಶಲ್ಯತೆಯನ್ನು ಎತ್ತಿ ತೋರಿಸುತ್ತಿದ್ದುವು. ಗಿರಿಯೂರ ಗೌಡರ ಗತ್ತಿಗೆ ತಕ್ಕನಾಗಿತ್ತು ಕಂಬಳದ ಊಟ, ಹೊಟ್ಟೆ ಬಿರಿಯುವಷ್ಟು ತಿಂಡಿಪದಾರ್ಥಗಳನ್ನು ಎಲ್ಲರೂ ಸವಿದರು. ಲಘು ವಿಶ್ರಾಂತಿಯ ಬಳಿಕ ನಾಟಿನೆಡುವಿಕೆ ಮುಂದುವರಿಯಿತು. ಸಂಜೆಗೆ ಕಂಬಳದ ಗದ್ದೆನಾಟಿ ನೆಟ್ಟಾಯಿತು.

ಮುಂದಿನ ಎರಡು ದಿನಗಳಲ್ಲಿ ನಾಟಿಕೆಲಸ ಪೂರೈಸಿತು. ಸಿರಿಯೂರ ಮಾತೆಯರು ತಮ್ಮ ಊರನ್ನು ತಲುಪಿದರು. ಮುಂದಕ್ಕೆ ಮೂರು ತಿಂಗಳ ಕಾಲ ಹೆಚ್ಚಿನ ಕೆಲಸಕಾರ್ಯಗಳಿರಲಿಲ್ಲ. ಬೆಳೆಯ ರಕ್ಷಣೆಯ ಕಾರ್ಯ, ನೀರಿನ ಹಂಚಿಕೆ ಇತ್ಯಾದಿ ಕೆಲಸಗಳು ಇದ್ದುವು ಸಂಜೆಯ ಕೂಟದಲ್ಲಿ ಎಂದಿನಂತೆ ಸೂಚನೆಗಳನ್ನು ಚರ್ಚಿಸಿದರು. ಐದೈದು ಮಂದಿಯ ಆರು ಪಂಗಡಗಳನ್ನು ರಚಿಸಿದರು. ಒಂದೊಂದು ಪಂಗಡದವರು ಸರದಿಯಂತೆ 15 ದಿವಸಗಳ ಕಾಲ ಗಿರಿಯೂರಲ್ಲಿ ಇದ್ದು ಅವಶ್ಯಕ ಕಾರ್ಯ ಎಸಗುವಂತೆ ತೀರ್ಮಾನಿಸಿದರು. ಬೆಳೆ ಕುಯಿಲ್ಲಿಗೆ ಬಂದಾಗ ಎಲ್ಲರೂ ಪುನಃ ಒಂದಾವರ್ತಿ ಗಿರಿಯೂರಲ್ಲಿ ಸೇರಬೇಕೆಂದು ನಿರ್ಧರಿಸಿದರು. ಸಂತೋಷ್ ಮತ್ತು ಗೆಳೆಯರು ಮೊದಲ ಪಂಗಡದವರು. ಮರುದಿನ ಉಳಿದ ಸದಸ್ಯರು ತಮ್ಮತಮ್ಮ ಮನೆಗಳಿಗೆ ಹೊರಟರು.

ಕಂಗೊಳಿಸುತಿದ್ದ ಶಿಬಿರ ಒಂದೇ ದಿನದಲ್ಲಿ ತನ್ನ ಆಕೃತಿ ಬದಲಾಯಿಸಿತು. ಒಂದೆರಡು ಡೇರೆಗಳನ್ನುಳಿದು ಉಳಿದವು ಗೌಡರ ದಾಸ್ತಾನು ಗ್ರಹವನ್ನು ಸೇರಿದುವು. ಪಂಪುಸೆಟ್ಟುಗಳು ಮಾತ್ರ ಬೆಳಿಗ್ಗೆ ಸಂಜೆ ಗುಡುಗುಡಿಸುತ್ತಾ ಗದ್ದೆಗೆ ನೀರು ತುಂಬುತ್ತಿದ್ದುವು. ಕುಮಾರ್ ಮತ್ತು ರವಿ ಆಗಾಗ ಗಿರಿಯೂರಿಗೆ ಬಂದು ಹೋಗುತ್ತಿದ್ದರು. ಸಂತೋಷ್ ಮತ್ತು ಸಂಗಡಿಗರು ತಮ್ಮ ಅವಧಿಯ ಕೊನೆಯಲ್ಲಿ ಗದ್ದೆಗಳಿಗೆ ರಾಸಾಯಿನಿಕ ಗೊಬ್ಬರವನ್ನು ಹಾಕಿದರು. ನಂತರದ ಪಂಗಡದವರು ಕಳತೆಗೆದರು, 'ಸ್ಪ್ರೆ' ಮಾಡಿದರು, ಪೈರು ಹುಲುಸಾಗಿ ಬೆಳೆಯುತಿತ್ತು. ಇದೇ ಇದೇ ರೀತಿಯಲ್ಲಿ ಮೂರು ತಿಂಗಳೂ ಸರದಿಯ ಪಂಗಡಗಳು ಬಂದು ಕೆಲಸವನ್ನು ನೆರವೇರಿಸಿದರು.

ಗದ್ದೆಯಲ್ಲಿ ಬೆಳೆ ತೆನೆಬಾಗಿ ನಿಂತಿತ್ತು. ಬೆಳೆ ಕಟಾವಿನ ದಿನವನ್ನು ಗೊತ್ತುಪಡಿಸಲು ರವಿ ತನ್ನ ಮಿತ್ರವರ್ಗಕ್ಕೆ ಪತ್ರ ಕಳುಹಿದನು. ಸಿರಿಯೂರ ಮಿತ್ರ ಮಂಡಲಿಯ ನಾಲ್ಕಾರು ಮಂದಿ ಎರಡು ದಿನ ಮುಂಚಿತವಾಗಿ ಬಂದು ಡೇರೆಗಳನ್ನು ಬಿಗಿದರು. ಮುಂದೆ ಹತ್ತೊ ಹನ್ನೆರಡೊ ದಿನ ಶಿಬಿರ ನಡೆಯಬೇಕಾದುದರಿಂದ ಆವಶ್ಯಕತೆಗಳನ್ನು ಅಳವಡಿಸಿದರು. ಗೊತ್ತುಪಡಿಸಿದ ದಿನಕ್ಕೆ ಸರಿಯಾಗಿ ಎಲ್ಲರೂ ಬಂದು ನೆರೆದರು. ಭತ್ತ ಬೇರ್ಪಡಿಸುವ ಕಳವನ್ನು ದುರಸ್ತಿಗೊಳಿಸಿದರು. ಕೊಯ್ ಕತ್ತಿಗಳನ್ನು ಊರ ಕಮ್ಮಾರಲ್ಲಿಗೆ ಒಯ್ದು ಸಿದ್ಧಪಡಿಸಿದರು.

ಆಗಸದಲ್ಲಿ ಮೋಡಗಳು ತೇಲಿಬರುತಿದ್ದುದರಿಂದ ಭತ್ತ ಬೇರ್ಪಡಿಸುವ ಕೆಲಸವನ್ನು ಬಿರುಸಿನಿಂದ ಮಾಡಬೇಕಾಯಿತು. ಕೆಲವರು ಮೂರುದ್ದದ ಹಗ್ಗಗಳನ್ನು ಹಿಡಿದು ಹೊರೆಗಳನ್ನು ಬಿಗಿದರು. ಇನ್ನೊಂದು ಪಂಗಡದವರು ಹೊರೆಗಳನ್ನು ಕಣಕ್ಕೆ ಸಾಗಿಸಿದರು. ಇನ್ನು ಕೆಲವರು ಸುಡಿಗಳನ್ನು ಬಿಚ್ಚಿ ಹಲಗೆಗಳ ಮೇಲೆ ಎತ್ತಿ ಹೊಡೆಯುತ್ತಾ ಭತ್ತ ಉದುರಿಸಿದರು. ಕಣದ ಇನ್ನೊಂದು ಮಗ್ಗುಲಲ್ಲಿ ಭತ್ತರಹಿತ ಸೂಡಿಗಳನ್ನು ಅಚ್ಚುಕಟ್ಟಾಗಿ 'ಅಟ್ಟೆ' ಮಡಗಿದರು. ಒಂದಿಬ್ಬರು ಐದಾರು ಜೊತೆ ಎತ್ತುಗಳನ್ನು ತಂದು ಒಕ್ಕಲನ್ನು ತುಳಿಸುತ್ತಿದ್ದರು. ಮಧ್ಯಾಹ್ನ ಮೂರು ಗಂಟೆಯ ವೇಳೆಗೆ ಸುಮಾರು30 ಕ್ವಿಂಟಾಲಿನಷ್ಟು ಭತ್ತವನ್ನು ಬೇರ್ಪಡಿಸಿದರು. ಸಂಜೆಯ ಕಾಫಿಯನ್ನು ಸೇವಿಸಿದ ಬಳಿಕ 'ಕಂತೆಕಟ್ಟುವ' ಕಾರ್ಯಕ್ರಮ ಪ್ರಾರಂಭವಾಯಿತು. ನೆರೆಕೊಕ್ಕೆಗಳನ್ನು ಹಿಡಿದು ಹುಲ್ಲನ್ನು ಕೊಡಹಿ ರಾಶಿ ಹಾಕುವ ಕಾರ್ಯದಲ್ಲಿ ಲೋಕೇಶ್ ಮತ್ತು ನಾಲ್ವರು ತೊಡಗಿದರು. ರವಿಯ ಪಂಗಡದವರು ಹಲ್ಲನ್ನು ಕಂತೆಗಳನ್ನಾಗಿ ಬಿಗಿದರು. ವಿವಿಧ ವಿನೋದಾವಳಿಗಳು ಕೆಲಸದ ಮಧ್ಯದಲ್ಲಿಯೇ ಏರ್ಪಟ್ಟುವು ರಸಭರಿತ ಕಟ್ಟುಕಥೆಗಳು, ಒಗಟುಗಳು, ಜಾಣ್ಮೆ ಲೆಕ್ಕಗಳು ಒಂದರಂತೆ ಸರಿದು ಬಂದುವು. ಗಿರಿಯೂರ ರಾಮಣ್ಣಗೌಡರು ಸಂಜೆಯ ಕೆಲಸಕಾರ್ಯದಲ್ಲಿ ಭಾಗಿಗಳಾದರು. ಗೌಡರು ತುಂಬು ಉತ್ಸಾಹದಿಂದ ತರುಣರ ಮಧ್ಯೆ ಅದೋ ಇದೋ ನಗು ಮಾತುಗಳನ್ನಾಡುತ್ತಾ ಸಂಜೆಯಿಡೀ ಕಣದಲ್ಲಿಯೇ ಇರುತ್ತಿದ್ದರು. ರಾಜಪ್ಪ ಜಯ, ಹೊನ್ನಣ್ಣ ಮೂವರು ಸೇರಿ ಕಂತೆಗಳನ್ನು ಪ್ರತ್ಯೇಕವಾಗಿ ಗೊತ್ತುಪಡಿಸಿದ ಸ್ಥಳದಲ್ಲಿ ಕ್ರಮ ಪ್ರಕಾರ 'ಬಣವೆ' ಮಾಡಿದರು. ಸಾಯಂಕಾಲದ ಊಟದ ಸಮಯಕ್ಕೆ ಹುಲ್ಲಿನ ಕೆಲಸ ಪೂರ್ತಿ ಮುಗಿಯಿತು. ನಂತರ ಎಲ್ಲರೂ ನದಿಯ ಬದಿಗೆ ಹೋಗಿ ತಣ್ಣೀರು ಸ್ನಾನ ಮಾಡಿದರು ಊಟದ ಬಳಿಕ ತಮ್ಮ ತಮ್ಮಡೇರೆಗಳನ್ನು ಸೇರಿದರು. ಮರುದಿನ ಸೂರ್ಯೋದಯಕ್ಕೇನೇ ಭತ್ತವನ್ನು ಗಾಳಿಯಲ್ಲಿ ತೂರಿ ಶುದ್ಧಗೊಳಿಸಿ ದಾಸ್ತಾನು ಗ್ರಹದಲ್ಲಿ ತುಂಬಿದರು. ಬಳಿಕ ಹಿಂದಿನ ದಿನದಂತೆ ಕಣದಲ್ಲಿ ಕೆಲಸ ಸಾಗಿತು. ಅಂದಾಜು ಮಾಡಿದಕ್ಕಿಂತ ಎರಡು ದಿನ ಹೆಚ್ಚಿಗೆ ಬೇಕಾಯಿತು. ಕೆಲಸವನ್ನು ಪೂರೈಸಲು ಕೊನೆಯ ದಿನದಲ್ಲಿ ಗೌಡರು ವಿಜೃಂಭಣೆಯ ಭೋಜನವನ್ನು ಏರ್ಪಡಿಸಿದ್ದರು. ಕ್ರಮಪ್ರಕಾರ ಹುಲ್ಲು ಮತ್ತು ಭತ್ತವನ್ನು ದಾಸ್ತಾನು ಮಾಡಿದರು. ಗೌಡರ ಎಣಿಕೆಯಂತೆ ವರ್ಷಂ ಪ್ರತಿ 260-278 ಕ್ವಿಂಟಾಲ್ ಭತ್ತ 30 ಕ್ವಿಂಟಾಲ್ ಅಷ್ಟು ಭತ್ತ ಹೆಚ್ಚು ಬೆಳೆದಿತ್ತು. ತರುಣರ ಉತ್ಸಾಹ ಪೂರಿತ ಕೆಲಸದ ಫಲವನ್ನು ಕಂಡು ಗೌಡರು ಹಿಗ್ಗಿದರು.

ಕುಶಾಲಪ್ಪ ಗೌಡರ ಸೂಚನೆಯಿಂದ ಗಿರಿಯೂರು ಸಹಕಾರ ಸಂಘದ ಕಾರ್ಯ ಕರ್ತರು ಭತ್ತವನ್ನು ಕೊಳ್ಳಲು ಮುಂದೆ ಬಂದರು. ಕ್ವಿಂಟಲ್ ಒಂದಕ್ಕೆ ರೂ. 60 ರಂತೆ ರೂಪಾಯಿ ಹತ್ತು ಸಾವಿರವನ್ನು ಮಿತ್ರಮಂಡಳಿಗೆ ಒದಗಿಸಿದರು. ಉಳಿದ ಎಂಟು ಸಾವಿರ ರೂಪಾಯಿಗಳನ್ನು ಮುಂದಿನ ಒಂದು ತಿಂಗಳಲ್ಲಿ ಕೊಡುವಂತೆ ಭರವಸೆಯಿತ್ತರು.

ಶಿಬಿರಾರ್ಥಿಗಳು ತಮ್ಮ ಕಾರ್ಯಸಾಧನೆಯ ಫಲದ ಉಳಿಕೆಯನ್ನು ಮುಂದಕ್ಕೆ ಹೇಗೆ ವಿನಿಯೋಗಿಸುವುದೆಂದು ಸುದೀರ್ಘವಾಗಿ ಚರ್ಚಿಸಿದರು. ಖರ್ಚುವೆಚ್ಚಗಳನ್ನು ನೋಡಿದಾಗ ಸುಮಾರು ರೂಪಾಯಿ ಹತ್ತು ಸಾವಿರ ಉಳಿಯುವ ಭರವಸೆ ಕಂಡು ಬಂತು. ಜನಾಂಗದ ಅಭಿವೃದ್ಧಿ ಕಾರ್ಯಕ್ಕೆ ವಿನಿಯೋಗಿಸುವ ಹಲವಾರು ದಾರಿಗಳು ಹೊಳೆದುವು. ಜನಾಂಗದ ಅಭಿವೃದ್ಧಿಯಾಗಬೇಕಾದರೆ ಯುವ ಜನಾಂಗಕ್ಕೆ ಯೋಗ್ಯ ಮಾರ್ಗದರ್ಶನಮಾಡಿಸಬೇಕು. ಅದಕ್ಕಾಗಿ ಮಡಿಕೇರಿಯಲ್ಲೊಂದು ಗೌಡ ಯುವಕ ಸಂಘವನ್ನು ಸ್ಥಾಪಿಸಿ ಅದರ ಮೂಲಕ ಯುವಕರ ಅಭಿವೃದ್ಧಿ ಕಾರ್ಯವನ್ನು ಕೈಗೊಳ್ಳಬೇಕೆಂದು ತೀರ್ಮಾನಿಸಿ ಅದಕ್ಕೆಬೇಕಾದ ಏರ್ಪಾಡುಗಳನ್ನು ಮಾಡಲು ಯೋಜನೆಯನ್ನು ಹಾಕಿಕೊಳ್ಳಲಾಯಿತು.



# ಕಣ್ಮರೆಯಾದ ನಮ್ಮ ಹಿರಿಯರು

( ಈ ಲೇಖನದಲ್ಲಿ ನಾವು ಆದಷ್ಟು ಪ್ರಯತ್ನಪಟ್ಟು ಸರಿಯಾದ ವಿವರವನ್ನು ಸಂಗ್ರಹಿಸಲು ಪ್ರಯತ್ನ ಪಟ್ಟರೂ ಹಲವಾರು ಮಹನೀಯರಿಂದ ಸರಿಯಾದ ವಿವರಗಳು ದೊರಕದಿದ್ದರಿಂದ ನಮಗೆ ದೊರಕಿದ ಕೆಲವೇ ವಿವರವನ್ನು ಇಲ್ಲಿ ಕೊಡಲಾಗಿದೆ. ಮಹನೀಯರು ನಮ್ಮ ಕೇಳಿಕೆಗೆ ಪ್ರೋತ್ಸಾಹಿಸಿದ್ದರೆ ಇನ್ನೂ ಹೆಚ್ಚಿನ ವಿವರಗಳಿಂದ ಕೂಡಿದ ಲೇಖನವನ್ನು ಪ್ರಕಟಿಸಬಹುದಾಗಿತ್ತು—ಸಂ. )

### ದಿವಂಗತ ಗುಡ್ಡೇರ ಅಪ್ಪಯ್ಯನವರು

ಬ್ರಿಟಿಷರನ್ನು ಭಾರತದಿಂದ ಹೊಡೆದೋಡಿಸಲು 1857 ರಲ್ಲಿ ಸ್ವಾತಂತ್ರ ಹೋರಾಟ ಪ್ರಾರಂಭವಾಗುವುದಕ್ಕಿಂತ ಎರಡುದಶಕಗಳ ಮೊದಲು ಕೊಡಗು ಹಾಗೂ ದಕ್ಷಿಣ ಕನ್ನಡಜಿಲ್ಲೆಯಲ್ಲಿ ನಡೆದ ಅಮರ ಸುಳ್ಯ ಕಾಟಕಾಯಿಯೇ ಸಾಕ್ಷಿ. ಝಾನ್ಸಿ ಲಕ್ಷ್ಮಿಬಾಯಿ ಕಿತ್ತೂರು ಚೆನ್ನಮ್ಮ ತನ್ನ ರಾಜ್ಯಾಡಳಿಕೆ ತಪ್ಪಿ ಹೋಗಬಹುದೆಂಬ ಯೋಚನೆಯಿಂದ ಬ್ರಿಟಿಷರ ವಿರುದ್ಧ ಹೋರಾಡಿದ್ದರೆ ಅಮರ ಸುಳ್ಯಕಾಟಕಾಯಿ ರಾಜ್ಯವನ್ನು ಕಳೆದು ಕೊಂಡ ರಾಜನಿಗಾಗಿ ರಾಜನನ್ನು ಸೆರೆ ಹಿಡಿದ ನಂತರ ಪ್ರಜೆಗಳು ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿ ತಮ್ಮ ಪ್ರಾಣವನ್ನು ಅರ್ಪಿಸಿದ ವೀರರ ತ್ಯಾಗ ಬುದ್ಧಿಯ ಕಥೆ. ಅಮರ ಸುಳ್ಯ ಕಾಟಕಾಯಿಯಲ್ಲಿ ಕಲ್ಯಾಣ ಸ್ವಾಮಿಯ ಪಾತ್ರ ಬಹು ಮುಖ್ಯ. ಕಲ್ಯಾಣ ಸ್ವಾಮಿಯವರ ಒಬ್ಬರೇ ಅಧಿಕಾರಿಯಾಗಿ ತೆರಳಿದ್ದ ಗುಡ್ಡೇರ ಅಪ್ಪಯ್ಯನವರು ಅಮರ ಸುಳ್ಯ ಮಾಗಣೆಗಳಿಗೆ ಹೋಗಿ ಅಲ್ಲಿಯ ಜಮೀನ್ದಾರರಾಗಿದ್ದ ಸುಳ್ಯದ ಕೆದಂಪಾಡಿ ರಾಮಗೌಡ, ಅಣ್ಣೆಗೌಡ, ಮುಂತಾದವರೊಡಗೂಡಿ ಬ್ರಿಟಿಷರ ವಿರುದ್ಧ ಹೋರಾಡಿದರು. ಆದರೆ ಆದರೆ ಇವರ ಹೋರಾಟವು ಸಫಲಗೊಳ್ಳದೆ ಶ್ರೀ ಗುಡ್ಡೇರ ಅಪ್ಪಯ್ಯ ಮತ್ತು ಕೆಲವರನ್ನು ಮಡಿಕೇರಿಯಲ್ಲಿ ಗಲ್ಲಿಗೇರಿಸಿದರು.

### ದಿವಂಗತ ಸುಳ್ಯದ ರಾಮಗೌಡರು.

ಅಮರ ಸುಳ್ಯ ಕಾಟಕಾಯಿಯಲ್ಲಿ ಕಲ್ಯಾಣಪ್ಪನವರ ಆಪ್ತ ಸ್ನೇಹಿತರಾಗಿ ಬ್ರಿಟೀಷರನ್ನು ತಮ್ಮ ನಾಡಿನಿಂದ ಓಡಿಸುವದರಲ್ಲಿ ಪಣತೊಟ್ಟ ಶೌರ್ಯ ಧೈರ್ಯಗಳಿಂದ ಕೂಡಿದ, ಸುಳ್ಯದಲ್ಲಿ ಮುಖ್ಯ ಭೂಮಾಲಿಕರಾದ ಇವರು ತಮ್ಮ ನೆರೆ ಹೊರೆಯ ಊರಿನ ಜನರನ್ನು ಕಲ್ಯಾಣಸ್ವಾಮಿಯ ಸೈನ್ಯಕ್ಕೆ ಸೇರಿಸಲು ಅಲ್ಲಿನ ಜನರನ್ನು ಹುರಿದುಂಬಿಸಿ ಸೈನ್ಯ ಜಮಾವಣೆಯಲ್ಲಿ ಸಹಾಯಕರಾಗಿ ದುಡಿದ ದೇಶ ಭಕ್ತ. ಕಲ್ಯಾಣ ಸ್ವಾಮಿಯವರು ಯೋಚಿಸಿದ ಕಾಟಕಾಯಿಯಲ್ಲಿ ಶ್ರೀರಾಮ ಗೌಡರ ಪ್ರೋತ್ಸಾಹವೇ ಕಾರಣವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇವರು ಮಂಗಳೂರಿನವರೆಗೂ ತಮ್ಮ ಸೈನ್ಯವನ್ನು ಕೊಂಡುಹೋಗಿ ಅಲ್ಲಿಯವರೆಗಿನ ಸ್ಥಳವನ್ನು ಬ್ರಿಟೀಷರಿಂದ ವಶಪಡಿಸಿಕೊಳ್ಳಲು ಪ್ರಯತ್ನಿಸಿ ವಿಫಲರಾದರು. ಕೆಚ್ಚೆದೆಯ ಈ ವೀರರನ್ನು ಬ್ರಿಟಿಷರು

ಪುಂಡರುಗಳ ಗುಂಪಿಗೆ ಆಗ ಸೇರಿಸಿದರು. ಅವರನ್ನು ಮಡಿಕೇರಿಯಲ್ಲಿ ಗಲ್ಲಿ ಗೇರಿಸಿದರು. ಇವರನ್ನು ಸ್ವಾತಂತ್ರ್ಯ ಸಂಗ್ರಾಮದ ವೀರ ಕೇಸರಿಗಳ ಸಾಲಿನಲ್ಲಿ ಸೇರಿಸುವುದಕ್ಕೆ ಹೆಮ್ಮೆಎನಿಸುತ್ತದೆ.

### ದಿವಂಗತ ಕೋಚನ ದೊಡ್ಡಯ್ಯನವರು

ಇವರು 1837 ರಲ್ಲಿ ನಡೆದ ಅಮರ ಸುಳ್ಯಕಾಟಕಾಯಿಯಲ್ಲಿ ಕಲ್ಯಾಣ ಸ್ವಾಮಿಯ ವಿರುದ್ಧ ಅಪ್ಪಾರಂಡ ಬೋಪು ದಿವಾನರ ಆಪ್ತ ಸಹಾಯಕರಾಗಿ ಭಾಗವಹಿಸಿದ ಐವತ್ತೈದು ಕೊಡಗಿನ ಮುಖ್ಯಸ್ಥರಲ್ಲಿ ಒಬ್ಬರು. ಇವರಿಗೆ ಮೂರುತಲೆಗಳ ಪರ್ಯಂತರ ರಾಜಕೀಯ ವೇತನವನ್ನು ಬ್ರಿಟೀಷ್ ಸರಕಾರವು ಕೊಟ್ಟದ್ದಿತು. ಈ ರಾಜಕೀಯ ವೇತನವು ತಮ್ಮ ಮೊಮ್ಮಗನವರೆಗೆ ನಡೆಯಿತು.

### ದಿವಂಗತ ಕೆದಂಬಾಡಿ ಸುಬ್ರಾಯನವರು

ದಿವಂಗತ ಕೆದಂಬಾಡಿ ಸುಬ್ರಾಯನವರು ಭಾಗಮಂಡಲ ನಾಡಿನ ಚೆಟ್ಟಿಮಾನಿ ಗ್ರಾಮದವರು. ಇವರೊಬ್ಬ ದೊಡ್ಡ ಜಮೀನ್ದಾರರು ಕಾಫಿ ತೋಟಗಾರರು. ಇವರು ತಮ್ಮ ಊರಿನ ವಿದ್ಯಾಭಿವೃದ್ಧಿಗಾಗಿ ತುಂಬಾ ದುಡಿದಿದ್ದಾರೆ. ಇವರ ನಾಡಿನ ಮತ್ತು ಗ್ರಾಮದ ಶಾಲೆಗಳಿಗೆ ಧನ ಸಹಾಯ ಮಾಡಿ ಶಾಲೆಗಳನ್ನುಕಟ್ಟಿಸಿದ್ದಾರೆ. ಇವರು 1908 ರಲ್ಲಿ ಸ್ಥಾಪಿಸಿದ ಕೊಡಗು ಗೌಡ ವಿದ್ಯಾ ಸಂಘದ ಸ್ಥಾಪಕರಲ್ಲೊಬ್ಬರು ಇವರು 1924 ರಲ್ಲಿ ಕೊಡಗು ಚೀಫ್ ಕಮಿಷ್‌ನರ್ ಪ್ರಾಂತ್ಯವಾಗಿದ್ದಾಗ ಚೀಫ್ ಕಮಿಷನ್‌ರವರಿಗೆ ಸಲಹೆ ಮಾಡುವ ಅಧಿಕಾರವಿದ್ದ ಕೌನ್ಸಿಲಿನ 13 ಜನರ ಸದಸ್ಯರಲ್ಲಿ ಒಬ್ಬರಾಗಿದ್ದರು. ಗೌಡರಲ್ಲಿ ಕೌನ್ಸಿಲ್ ಮೆಂಬರಾದವರಲ್ಲಿ ಸುಬ್ರಾಯನವರೇ ಮೊದಲಿಗರು.

### ದಿವಂಗತ ಬಂಟೋಡಿ ಲಿಂಗಪ್ಪ ಗೌಡರು

ದಿವಂಗತ ಬಂಟೋಡಿ ಲಿಂಗಪ್ಪ ಗೌಡರು ಸಂಪಾಜೆ ಗ್ರಾಮದಲ್ಲಿ ಜನಿಸಿ ಒಬ್ಬ ಪ್ರಸಿದ್ಧ ವ್ಯಕ್ತಿಯಾಗಿದ್ದರು. ಇವರು ನ್ಯಾಯ ಪಂಚಾಯಿತಿಗೆಯಲ್ಲಿ ನಿಷ್ಪಕ್ಷ ಪಾತೀ ತೀರ್ಪುಗಳನ್ನು ಕೊಟ್ಟು ಜನರ ಪ್ರೀತಿಗೆ ಪಾತ್ರರಾಗಿದ್ದರು. ದ.ಕನ್ನಡ ವಿದ್ಯಾ ವರ್ಧಕ ಸಂಘದ ಮೇಲ್ಮೆಗಾಗಿ ತುಂಬಾ ದುಡಿದಿದ್ದಾರೆ.

### ದಿವಂಗತ ತೆಕ್ಕಡ ಮುತ್ತಣ್ಣನವರು

ಇವರು ಮೂರ್ನಾಡಿನ ಹೊದ್ದೂರು ಗ್ರಾಮದಲ್ಲಿ ಜನಿಸಿ ಕೊಡಗಿನ ಗೌಡರಲ್ಲಿ ಸಾಮಾಜಿಕ ಬದಲಾವಣೆಗಳನ್ನು ಮಾಡಿದ ಒಬ್ಬ ಕ್ರಾಂತಿ ಕಾರಿ ವ್ಯಕ್ತಿ. ದೃಢಕಾಯರಾದ ಇವರು ಸಮಾಜದಲ್ಲಿ ಜಾತೀಯತೆಯ ಹೆಗ್ಗಳಿಕೆಯನ್ನು ಮೆಚ್ಚದೆ ಅದನ್ನು ಪ್ರತಿಭಟಿಸಿದ ಧೀರವ್ಯಕ್ತಿ. ಇವರೊಬ್ಬ ಜಮೀನ್ದಾರರು ಕಾಫಿ ತೋಟಗಾರರು ಆಗಿದ್ದು, ಕೊಡಗು ಜಮಿನ್ದಾರ ಸಂಘದ ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದಾರೆ.

### ದಿವಂಗತ ಕೋಚನ ಸಣ್ಣಯ್ಯನವರು

ದಿವಂಗತ ಕೋಚನ ಸಣ್ಣಯ್ಯನವರು ಮಡಿಕೇರಿ ಗಾಳಿಬೀಡು ಗ್ರಾಮದವರಾಗಿ,ಊರಿನ ಪ್ರಮುಖ ವ್ಯಕ್ತಿಯಾಗಿ ಹೆಸರುಗಳಿಸಿದ್ದರು. ಇವರು 1879 ನೇ ಇಸವಿ ಕೊಡಗು ಪ್ರತ್ಯೇಕ ರಾಜ್ಯವಾಗಿರಬೇಕೆಂದು ಹೋರಾಡಿದ ಮುಖಂಡರಲ್ಲೊಬ್ಬರು.

### ದಿವಂಗತ ಬಳ್ಳಡಕ ದೇವಪ್ಪನವರು

ಇವರು ಭಾಗಮಂಡಲ ನಾಡಿನಲ್ಲಿ ಚೇರಂಗಾಲ ಗ್ರಾಮದಲ್ಲಿ ಜನಿಸಿ ಹಲವಾರು ಸಾರ್ವಜನಿಕ ಕ್ಷೇತ್ರದಲ್ಲಿ ತಮ್ಮ ನಾಡಿನ ಜನರಿಗೆ ತುಂಬಾ ಉಪಕಾರವನ್ನು ಮಾಡಿದ್ದಾರೆ 1877 ನೇ ಇಸವಿಯಲ್ಲಿ ಬ್ರಿಟೀಷ್ ಸರಕಾರವು ಕೊಡಗನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸುವ ಯೋಚನೆಯಲ್ಲಿದ್ದಾಗ ಅವರ ವಿರುದ್ಧ ಆಗಿನ ಗೌರ್ವನರ್ ಜನರಲ್‌ರವರಿಗೆ ಕೊಡಗು ಪ್ರತ್ಯೇಕವಾದ ರಾಜ್ಯವಾಗಿ ಉಳಿಯಬೇಕೆಂದು ಮನವಿ ಮಾಡಿದವರಲ್ಲಿ ಒಬ್ಬರು.

### ದಿವಂಗತ ನಿಡ್ಯಮಲೆ ಮುತ್ತಣ್ಣನವರು

ಇವರು ಪೆರಾಜೆ ಗ್ರಾಮದಲ್ಲಿ ಜನಿಸಿ ಊರಿನ ಪ್ರಮುಖ ವ್ಯಕ್ತಿಯಾಗಿ ಹಲವಾರು ಸಾರ್ವಜನಿಕ ಕ್ಷೇತ್ರದಲ್ಲಿ ದುಡಿದು ಕೀರ್ತಿಗಳಿಸಿದ್ದಾರೆ ಇವರು 1879 ನೇ ಇಸವಿಯಲ್ಲಿ ಕೊಡಗನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಬೇಕೆಂಬ ಕಲ್ಕತ್ತದ ಗೌರ್ವನರ್ ಜನರಲ್‌ರಲ್ಲಿ ಸರ್ಕಾರಕ್ಕೆ ಮನವಿ ಪತ್ರವನ್ನಿತ್ತು ಕೊಡಗು ಪ್ರತ್ಯೇಕವಾಗಿ ಉಳಿಯಬೇಕೆಂದು ಬ್ರಿಟೀಷ್ ಸರ್ಕಾರವನ್ನು ಒತ್ತಾಯ ಪಡಿಸಿದವರಲ್ಲಿ ಒಬ್ಬರು.

---



### ದಿವಂಗತ ಯಂಕನ ಸುಬ್ರಾಯನವರು

ದಿವಂಗತ ಯಂಕನ ಸುಬ್ರಾಯನವರು 1878 ರಲ್ಲಿ ಸುಂಟಿಕೊಪ್ಪ ನಾಡಿನ ಉಲುಗುಲಿ ಗ್ರಾಮದಲ್ಲಿ ಜನಿಸಿದರು. ಚಿಕ್ಕ ಪ್ರಾಯದಲ್ಲಿಯೇ ತಂದೆ ತಾಯಿಯನ್ನು ಕಳೆದು ಕೊಂಡದ್ದರಿಂದ ವಿದ್ಯಾಭ್ಯಾಸವನ್ನು ಚಿಕ್ಕಂದಿನಲ್ಲಿಯೇ ನಿಲ್ಲಿಸಿದರು ತಮ್ಮ ಬುದ್ಧಿ ಶಕ್ತಿಯಿಂದ ಆಗಿನ ಕಾಲದ ಕೊಡಗಿನ ಉಚ್ಚ ಅಧಿಕಾರಿಗಳ ಸ್ನೇಹತನವನ್ನು ಗಳಿಸಿ ಒಬ್ಬ ಪ್ರಭಾವವಂತ ವ್ಯಕ್ತಿಗಳಾಗಿದ್ದರು. ಇವರು ಕೊಡಗಿನ ಸೆಷನ್ಸ್ ಕೋರ್ಟಿನಲ್ಲಿ ಜ್ಯೂರಿ ಆಗಿ 10 ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ.

### ದಿವಂಗತ ಸೋಣಂಗೇರಿ ಚಿನ್ನಪ್ಪ ಗೌಡರು

ದಿವಂಗತ ಸೋಣಂಗೇರಿ ಚಿನ್ನಪ್ಪ ಗೌಡರು ದಕ್ಷಿಣ ಕನ್ನಡದ ಸುಳ್ಯ ತಾಲೋಕಿನ ಜಾಲಸಾರು ಗ್ರಾಮದಲ್ಲಿ ಜನಿಸಿ ಮದ್ರಾಸು ವಿಶ್ವ ವಿದ್ಯಾನಿಲಯದಲ್ಲಿ. ಬಿ.ಎಲ್. ಪದವಿಯನ್ನು ಗಳಿಸಿ ಪುತ್ತೂರಿನಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿ ಒಬ್ಬ ಪ್ರಖ್ಯಾತ ವಕೀಲರೆನಿಸಿ ಕೊಂಡಿದ್ದರು. ಶ್ರೀ ಚಿನ್ನಪ್ಪಗೌಡರು ದಕ್ಷಿಣ ಕನ್ನಡ ಗೌಡರಲ್ಲಿಯೇ ಪ್ರಥಮ ಪದವೀಧರರೂ ಮತ್ತು ವಕೀಲ ವೃತ್ತಿಯನ್ನ ಪ್ರಾರಂಭ ಮಾಡಿದವರಲ್ಲಿ ಮೊದಲಿಗರು ಸಾಮಾಜಿಕ ಅಭಿವೃದ್ಧಿಗೂ ಶ್ರಮಿಸಿ ಅದರ ಏಳಿಗೆಗೆ ಕಾರಣಕರ್ತರಾಗಿದ್ದಾರೆ. ಇವರು ಸ್ವತಃ ವಕೀಲರಾಗಿದ್ದರೂ ಜನರ ಜಗಳಗಳನ್ನು ಖಾಸಗಿಯಾಗಿ ಪಂಚಾಯಿತಿ ರೀತಿಯಲ್ಲಿ ತೀರ್ಮಾನವಾಗುವಂತೆ ಪ್ರೋತ್ಸಾಹಿಸಿ ಕೋರ್ಟುಗಳಿಗೆ ಹೋಗುವದನ್ನು ತಪ್ಪಿಸಿ ಜನರ ಪ್ರಿತಿಗೆ ಪಾತ್ರರಾಗಿದ್ದರು.

### ದಿವಂಗತ ಶಿರಕಜೆ ಪೊನ್ನಪ್ಪನವರು

ಇವರು ಭಾಗಮಂಡಲ ನಾಡಿನ ಚೇರಿಕಾಲ ಗ್ರಾಮದ ಒಬ್ಬ ಗಣ್ಯ ವ್ಯಕ್ತಿ ಇವರು ಕೊಡಗಿನ ರಾಜಕೀಯದಲ್ಲೂ ಸಾರ್ವಜನಿಕ ಸೇವೆಯಲ್ಲಿ ತುಂಬಾ ಶ್ರಮಿಸಿದ್ದಾರೆ ಅಲ್ಲದೆ 1908ನೇ ಇಸವಿಯಲ್ಲಿ ಸ್ಥಾಪಿಸಿದ ಕೊಡಗು ಗೌಡ ವಿದ್ಯಾ ಸಂಘದ ಸ್ಥಾಪಕ ಸದಸ್ಯರು. ಲಾರ್ಡ್ ಇರ್ವಿನರನ್ನು ಭೇಟಿಮಾಡಿ ಬಿನ್ನವತ್ತಳೆಯನ್ನು ಅರ್ಪಿಸಿದವರಲ್ಲೊಬ್ಬರು.

## ದಿವಂಗತ ಕೇಪ್ಟನ್ ಕುಯ್ಯಮುಡಿ ಸುಬ್ಬಯ್ಯನವರು

1900–1063

ದಿವಂಗತ ಕ್ಯಾಪ್ಟನ್ ಕುಯ್ಯಮುಡಿ ಸುಬ್ಬಯ್ಯ ಕೊಡಗು ಜಿಲ್ಲೆಯ ಸಣ್ಣ ಪುಲಿಕೋಟ್ ಗ್ರಾಮದವರು. ನಮ್ಮ ಜನಾಂಗದ ಹೆಸರುವಾಸಿಯಾದ ಅನೇಕ ವ್ಯಕ್ತಿಗಳಲ್ಲಿ ಇವರೂ ಒಬ್ಬರಾಗಿದ್ದಾರೆ. ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು



ಮುಗಿಸಿದ ನಂತರ ಸ್ವಲ್ಪ ಕಾಲ ಕೊಡಗಿನ ಅರಣ್ಯ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದು ನಂತರ ಕೊಡಗಿನ ಐ. ಟಿ. ಎಫ್. ಸೈನ್ಯದಲ್ಲಿ ದೊಡ್ಡ ಹುದ್ದೆಯಲ್ಲಿದ್ದರು. ಇವರು ಆಟೋಟಗಳಲ್ಲಿ ತುಂಬಾ ನಿಪುಣರಾಗಿದ್ದರು.

ಕ್ಯಾಪ್ಟನ್ ಸುಬ್ಬಯ್ಯನವರು ಪ್ರಪಂಚದ ಎರಡು ಮಹಾಯುದ್ಧಗಳಲ್ಲಿ ಭಾಗವಹಿಸಿರುವರು. ಎರಡನೇ ಮಹಾಯುದ್ಧದಲ್ಲಿ ಇವರು ಪರದೇಶದಲ್ಲಿಯೂ ಸೇವೆ ಸಲ್ಲಿಸಿದ್ದಾರೆ. ಆಫ್ರಿಕದ ಟ್ಯೂನಿಶ್ಯದಲ್ಲಿದ್ದಾಗ ಜರ್ಮನರ ಕೈದಿಯಾಗಿದ್ದರು. ಆಮೇಲೆ ಸ್ವದೇಶಕ್ಕೆ ಹಿಂತಿರುಗಿದ ನಂತರ ಬರ್ಮದಲ್ಲಿಯೂ ಸೇವೆ ಸಲ್ಲಿಸಿದ್ದಾರೆ. ಯುದ್ಧದಲ್ಲಿ ಅವರು ತೋರಿಸಿದ ಉತ್ಸಾಹ ಮತ್ತು ಸಾಹಸ ಕಾರ್ಯಕ್ಕೆಬ್ರಿಟಿಷ್ ಸರ್ಕಾರದವರು "Mentioned in Despatches" ಎಂಬ ಬಿರುದನ್ನು ಕೊಟ್ಟರು. ಇವರು 1947 ರಲ್ಲಿ ತಮ್ಮ ಹುದ್ದೆಯಿಂದ ನಿವೃತ್ತರಾದರು.

ಕ್ಯಾಪ್ಟನ್ ಸುಬ್ಬಯ್ಯನವರು, ಇಂಡಿಯಾ ದೇಶದ ವೈಸ್‌ರಾಯರು ಕೊಡಗಿಗೆ ಬಂದಾಗ ನಮ್ಮ ಜನಾಂಗದ ಏಳಿಗೆಗಾಗಿ ಕಾಣಲು ಹೋದ ತಂಡದವರಲ್ಲಿ ಒಬ್ಬರಾಗಿದ್ದರು. ಈ ರೀತಿ ಇವರು ಜನಾಂಗದ ಏಳಿಗೆಗಾಗಿ ತುಂಬಾ ಸೇವೆ ಸಲ್ಲಿಸಿದ್ದಾರೆ.

ಕ್ಯಾಪ್ಟನ್ ಸುಬ್ಬಯ್ಯನವರು 1963ರ ನವೆಂಬರ್ ತಿಂಗಳಲ್ಲಿ ನಿಧನರಾದರು.

---

## ದಿವಂಗತ ನಿಡ್ಯಮಲೆ ಮುದ್ದಪ್ಪನವರು, ಬಿ.ಎ.ಬಿ.ಎಲ್.

ದಿವಂಗತ ನಿಡ್ಯಮಲೆ ಮುದ್ದಪ್ಪನವರು ಭಾಗಮಂಡಲ ನಾಡಿನ ಪರಾಜೆ ಗ್ರಾಮದವರು. ನಿಡ್ಯಮಲೆ ಮುದ್ದಪ್ಪನವರು ತಮ್ಮ ಪ್ರೌಢಶಾಲೆ ವಿದ್ಯಾಭ್ಯಾಸವನ್ನು ಮಡಿಕೇರಿಯ ಸೆಂಟ್ರಲ್ ಪ್ರೌಢ ಶಾಲೆಯಲ್ಲಿ ಮುಗಿಸಿ ಸೆಯಿಂಟ್ ಎಲೋಸಿಯಸ್ ಕಾಲೇಜಿನಲ್ಲಿ ಬಿ. ಎ. ಪದವಿಯನ್ನು ಗಳಿಸಿ ಮದ್ರಾಸು ವಿಶ್ವವಿದ್ಯಾನಿಲಯದಲ್ಲಿ "ಲಾ" ಪದವಿಯನ್ನು ಗಳಿಸಿದರು. ಶ್ರೀಮಾನ್ ಮುದ್ದಪ್ಪನವರು ಕೊಡಗಿನ ಗೌಡರಲ್ಲಿ ಪದವಿಯನ್ನು ಪಡೆದವರಲ್ಲಿ ಮೊದಲಿಗರು. ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿದ ನಂತರ ಕೆಲವು ಕಾಲ ವಕೀಲ ವೃತ್ತಿಯನ್ನು ಮಾಡಿ ರಾಜಕೀಯ ಕ್ಷೇತ್ರದಲ್ಲಿ ದುಡಿದಿದ್ದಾರೆ. ಇವರು

1908ರಲ್ಲಿ ಸ್ಥಾಪಿಸಲಾದ ಕೊಡಗು ಗೌಡ ವಿದ್ಯಾಸಂಘದ ಸ್ಥಾಪಕರಲ್ಲೊಬ್ಬರು. ಕೊಡಗಿನ ರಾಜಕೀಯದಲ್ಲಿ ಇವರು ಕೈಹಾಕಿದ ನಂತರ ಕೊಡಗಿನಲ್ಲಿ ರಾಜಕೀಯ ಸುಧಾರಣೆಯಲ್ಲಿಯೂ ಸಮಾಜದಲ್ಲಿದ್ದ ಕೆಲವು ಶೋಷಣೆಯ ಮನೋಭಾವದ ವಿರುದ್ಧ ಪ್ರತಿಭಟಿಸಿ ರಾಜಕೀಯ ಕ್ರಾಂತಿಯನ್ನು ಪ್ರಾರಂಭಿಸಿದರೆಂದರೆ ತಪ್ಪಾಗದು. ಹಿಂದುಳಿದ ಜನರ ಉದ್ಧಾರಕ್ಕಾಗಿ ಶ್ರಮಿಸಿ ಹರಿಜನೋದ್ಧಾರ ಕಾರ್ಯದಲ್ಲಿ ತೀವ್ರ ರೀತಿಯ ಕ್ರಮಗಳನ್ನು ಕೈಕೊಂಡು ಅಸ್ಪೃಶ್ಯತೆಯ ನಿರ್ಮೂಲನಕ್ಕೆ ಪಣತೊಟ್ಟು ಹರಿಜನ ವಿದ್ಯಾರ್ಥಿಗಳನ್ನು ತಮ್ಮ ಮನೆಯಲ್ಲಿಟ್ಟು ವಿದ್ಯಾರ್ಜನೆಗೆ ಪ್ರೋತ್ಸಾಹ ಮಾಡಿಕೊಟ್ಟಿದ್ದಾರೆ. ವಕೀಲ ವೃತ್ತಿಯನ್ನು ಮಾಡುತ್ತಿದ್ದ ಸಮಯದಲ್ಲಿ ಕೊಡಗಿನಲ್ಲಿ



ಚೀಫ್ ಕಮಿಷನರ್‌ರವರಿಗೆ ಸಲಹೆಯನ್ನು ಕೊಡುತ್ತಿದ್ದ ಕೌನ್ಸಿಲ್‌ನ ಮೆಂಬರ್ 1924ರ ನಂತರ ಆಯ್ಕೆಯಾಗಿದ್ದಾರೆ.

1929ರಲ್ಲಿ ಲಾರ್ಡ್ ಇರ್‌ವಿನ್‌ರವರು ವೈಸರಾಯಿಯಾಗಿ ಕೊಡಗಿಗೆ ಭೇಟಿ ಇತ್ತಾಗ ಕೊಡಗಿನ ಗೌಡರ ಮುಖಂಡರ ಮುಂದಾಳಾಗಿ ಗೌಡರ ಪರವಾಗಿ ಭಿನ್ನವತ್ತಳೆಯನ್ನು ಅರ್ಪಿಸಿದವರಲ್ಲಿ ಒಬ್ಬರಾಗಿದ್ದರು. ತದನಂತರ ಕೊಡಗಿನ ಮೊತ್ತಮೊದಲಿನ ಜಿಲ್ಲಾ ಮತ್ತು ಸೆಷನ್ಸ್ ಜಡ್ಜರಾಗಿ ನೇಮಕಗೊಂಡರು. ಇವರು ಈ ಕೆಲಸದಲ್ಲಿ ಇದ್ದಾಗಲೇ 1954ರಲ್ಲಿ ಶಿವಾಧೀನರಾದರು.

ಶ್ರೀಮಾನ್ ನಿಡ್ಯಮಲೆ ಮುದ್ದಪ್ಪನವರು ವಕೀಲರಾಗಿ ಬಂದನಂತರ ಕೊಡಗಿನ ಮತ್ತು ದಕ್ಷಿಣ ಕನ್ನಡ ಗೌಡರ ಮುನ್ನಡೆಗೆ ಎಲ್ಲಾ ರೀತಿಯ ಮಾರ್ಗದರ್ಶನವಿತ್ತಿದ್ದಾರೆ. ಅವರು ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷರಾಗಿ ಹಲವಾರು ವರ್ಷಗಳವರೆಗೂ ದುಡಿದು ಮಡಿಕೇರಿಯ ಗೌಡ ವಿದ್ಯಾರ್ಥಿಗಳ ಮತ್ತು ವಿದ್ಯಾರ್ಥಿನಿ ಭವನಗಳ ನಿರ್ಮಾಣ ಕಾರ್ಯಕ್ಕೆ ತುಂಬಾ ಶ್ರಮಿಸಿದ್ದಾರೆ. ಅಲ್ಲದೆ ಗೌಡ ವಿದ್ಯಾಸಂಘದ ನಿಧಿಸಂಗ್ರಹಕ್ಕೆ ತುಂಬಾ ಶ್ರದ್ಧೆವಹಿಸಿ ತಮಗೆ ಬಿಡುವು ಸಮಯವನ್ನು ಈ ಜನೋಪಕಾರ ಕೆಲಸಕ್ಕೆ ಉಪಯೋಗಿಸಿದ್ದಾರೆ. ತೀಕ್ಷ್ಣಮತಿಯಾಗಿ ನಿರ್ಮಲ ಮನಸ್ಸಿನಿಂದ ಕೂಡಿದ ನ್ಯಾಯಮೂರ್ತಿಯಾಗಿದ್ದ ಮುದ್ದಪ್ಪನವರು ಸಮಾಜದಲ್ಲಿ ಆಗುವ ಅನ್ಯಾಯವನ್ನು ಖಂಡಿಸಿ ತಮ್ಮ ಕರ್ತವ್ಯದಲ್ಲಿ ನಿಷ್ಪಕ್ಷಪಾತಿಯಾಗಿ ಜನರಿಗೆ ದಾರಿ ತೋರಿಸಿದ್ದಾರೆ. ಕೊಡಗಿನ ಮತ್ತು ದಕ್ಷಿಣ ಕನ್ನಡ ಗೌಡ ಜನರು ಇವರ ಮಾರ್ಗದರ್ಶನ ಪಡೆದಿದ್ದಾರೆ.

---

## ದಿವಂಗತ ನರಿಯೂರ ರಾಮಣ್ಣ ಪಟೇಲರು

ದಿವಂಗತ ಶ್ರೀಯುತ ನರಿಯೂರು ರಾಮಣ್ಣ ಗೌಡರು ಕನಕಮಜಲು ಗಾಮದಲ್ಲಿ ಜನಿಸಿದ ಧನಿಕರು. ಇವರು ಧನಿಕರಾದರೂ ಸರಳ ಸ್ವಭಾವದ ವ್ಯಕ್ತಿಯಾಗಿ ಊರಿನ ಹಾಗೂ ಗೌಡ ಜನರ ವಿದ್ಯಾಭಿವೃದ್ಧಿ ಹಾಗೂ ಸಾಮಾಜಿಕ ಅಭಿವೃದ್ಧಿಗಾಗಿ ಶ್ರಮಿಸಿ ಜನಾನುರಾಗಿಗಳಾಗಿದ್ದರು.

## ದಿವಂಗತ ಕೋಚನ ಸುಬ್ಬಪ್ಪನವರು

ಇವರು ಹೊರಮನೆನಾಡು ಗಾಳಿಬೀಡು ಗ್ರಾಮದಲ್ಲಿ ಜನಿಸಿದರು. ಗ್ರಾಮದ ಮತ್ತು ನಾಡಿನ ಸಾರ್ವಜನಿಕ ಸೇವೆಯಲ್ಲಿ ತುಂಬಾ ಆಸಕ್ತಿವಹಿಸಿ ಕೆಲಸ ಮಾಡಿದ್ದಾರೆ ತಮ್ಮ ಜಾತಿಬಾಂಧವರಿಗೆ ವಿದ್ಯಾಭಿವೃದ್ದಿಯಾಗಬೇಕೆಂಬ ಬಯಕೆಯಿಂದಾಗಿ ಮಡಿಕೇರಿ ಗೌಡ ವಿದ್ಯಾ ಸಂಘದ ಸ್ಥಾಪಕ ಸದಸ್ಯರಾಗಿ ದುಡಿದಿದ್ದಾರೆ.

## ದಿವಂಗತ ಕರಣಯ್ಯನ ಕರುಂಬಯ್ಯನವರು

ಶ್ರೀಯುತರು ಮಡಿಕೇರಿ ನಾಡಿನ ಕುಂಬಳದಾಳು ಗ್ರಾಮದಲ್ಲಿ ಜನಿಸಿ ತನ್ನ ಊರಿನ ಮತ್ತು ನಾಡಿನ ಜನರ ವಿದ್ಯಾಭ್ಯಾಸದ ಮುನ್ನಡೆಗಾಗಿ ಶ್ರಮಿಸಿದ್ದಾರೆ ಇವರು ಕೊಡಗು ಗೌಡ ವಿದ್ಯಾಸಂಘದ ಸ್ಥಾಪಕರಲ್ಲೊಬ್ಬರಾಗಿ ಕೊಡಗಿನ ವಿದ್ಯಾವಂತ ಗೌಡರ ಪ್ರೀತಿಗೆ ಪಾತ್ರರಾಗಿದ್ದಾರೆ.

## ದಿ॥ ಯಂಕನ ತಿಮ್ಮಯ್ಯನವರು.

ಶ್ರೀಯುತರು ಹಿಂದಿನ ಕಾಲದ ವಿದ್ಯಾವಂತ ವ್ಯಕ್ತಿಗಳಲ್ಲೊಬ್ಬರು. ಇವರು ಕೊಡಗು ಗೌಡ ವಿದ್ಯಾ ಸಂಘ ಸ್ಥಾಪಕರಲ್ಲೊಬ್ಬರು. ಇವರೊಬ್ಬ ಕಾಫಿ ತೋಟದವರಾಗಿದ್ದರು. ಇವರು ಊರಿನ ಮತ್ತು ನಾಡಿನ ವಿದ್ಯಾಭ್ಯಾಸಕ್ಕಾಗಿ ತುಂಬಾ ಆಸಕ್ತಿವಹಿಸಿ ಕೆಲಸ ಮಾಡಿದ್ದಾರೆ. ಸಣ್ಣ ಪುಟ್ಟ ಜಗಳಗಳನ್ನು ಕೋರ್ಟು ಕಛೇರಿಗೆ ಹೋಗಗೊಡದೆ ನಿಷ್ಪಕ್ಷಪಾತಿಯಾಗಿ ತಿರ್ಮಾನಿಸುತ್ತಿದ್ದರು.

## ದಿ॥ ಪೂಜಾರೀರ ಪೂವಯ್ಯನವರು

ಮಡಿಕೇರಿ ನಾಡಿನ ಅರುವತ್ತೊಕ್ಕಲು ಗ್ರಾಮದಲ್ಲಿ ಜನಿಸಿ ಅನೇಕ ದುಂದುಗಾರಿಕೆ ಖರ್ಚುಮಾಡುವುದರ ವಿಷಯ ಸತತ ಹೋರಾಡಿದರು. ರಾಜಕೀಯ ಕ್ಷೇತ್ರದಲ್ಲಿ ಹೆಚ್ಚಿನ ಶ್ರದ್ಧೆವಹಿಸಿ ಮುಖಂಡರುಗಳ ಶ್ರೇಯಸ್ಸಿಗಾಗಿ ದುಡಿದಿದ್ದಾರೆ.

## ದಿ॥ ಪಾಂಡನ ಸುಬ್ಬಯ್ಯನವರು

ದಿವಂಗತ ಪಾಂಡನ ಸುಬ್ಬಯ್ಯನವರು ಮರಗೋಡು ಗ್ರಾಮದಲ್ಲಿ ಜನಿಸಿ ವಿದ್ಯಾಭ್ಯಾಸವನ್ನು ಮುಗಿಸಿ ಸರಕಾರಿ ಉದ್ಯೋಗಸ್ಥರಾಗಿ ಸೇವೆ ಸಲ್ಲಿಸಿ ಕೊಡಗಿನ ರೆವಿನ್ಯೂ ಇಲಾಖೆಯಲ್ಲಿ ಸುಭೇದಾರರಾಗಿ ಕೆಲಸ ಮಾಡಿದ್ದಾರೆ. ಬ್ರಿಟೀಷರಕಾಲದಲ್ಲಿ ಸುಭೇದಾರಿಕೆ ಕೊಡಗಿನಲ್ಲಿ ಗೌರವ ತರುವ ಉದ್ಯೋಗವಾಗಿದ್ದಿತು.

ದಿವಂಗತ ಪಾಂಡನ ಸುಬ್ಬಯ್ಯನವರು ಊರಿನ ಜನರ ಜಗಳಗಳನ್ನು ನಿಷ್ಪಕ್ಷ ಪಾತವಾಗಿ ಬಗೆ ಹರಿಸಿ ಕೋರ್ಟು ಖಚೇರಿಗಳಿಗೆ ವ್ಯಾಜ್ಯವನ್ನು ಹೋಗಗೊಡದೆ ಊರಿನಲ್ಲೇ ತೀರ್ಮಾನವಾಗುವಂತೆಮಾಡಿ ಜನರ ಪ್ರೀತಿಯನ್ನು ಗಳಿಸಿದಮಹನೀಯರು.

## ದಿವಂಗತ ಮುಂಡೋಡಿ ಪಟೇಲ್ ತಿಮ್ಮಪ್ಪ ಗೌಡರು

ದಿವಂಗತ ಮುಂಡೋಡಿ ತಿಮ್ಮಪ್ಪ ಗೌಡರು ಸುಳ್ಯ ತಾಲ್ಲೋಕಿನ ದೇವಚಳ್ಳ ಗ್ರಾಮದ ಪ್ರತಿಭಾವಂತ ವ್ಯಕ್ತಿಗಳಾಗಿದ್ದು ಗ್ರಾಮದ ಜನರ ಜಗಳಗಳನ್ನು ಪಂಚಾಯಿತಿಯ ಮೂಲಕ ಬಗೆ ಹರಿಸುತ್ತಿದ್ದರು. ಊರಿನ ಪಟೇಲರಾಗಿಯೂ ಗ್ರಾಮದ ಮುಂದಾಳಾಗಿ ಹಲವಾರು ಸಾರ್ವಜನಿಕ ರಂಗದಲ್ಲಿ ಸೇವೆ ಸಲ್ಲಿಸಿದ್ದಾರೆ.

## ದಿವಂಗತ ಚೆರಿಯಮನೆ ಕರಿಯಾಲಪ್ಪನವರು

ಇವರು ಮುನ್ನಾಡಿನ ಹೊಸ್ಕೇರಿ ಗ್ರಾಮದಲ್ಲಿ ಜನಿಸಿ ಹಲವಾರು ಸಾರ್ವಜನಿಕ ಕ್ಷೇತ್ರದಲ್ಲೂ ವಿದ್ಯಾಕ್ಷೇತ್ರದಲ್ಲಿಯೂ ದುಡಿದಿದ್ದಾರೆ. ತಮ್ಮ ಊರಿನ ಶಾಲೆಯ ಕಟ್ಟಡವನ್ನು ಕಟ್ಟಿಸಿ ಆಗಿನ ಕಾಲದ ಕಾಫೀ ತೋಟಗಾರರಲ್ಲಿ ಒಬ್ಬರಾಗಿದ್ದರು. ಇವರು ಕೊಡಗು ಗೌಡ ವಿದ್ಯಾ ಸಂಘದ ಸ್ಥಾಪಕ ಸದಸ್ಯರು. ಇವರು ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

## ದಿ॥ ಕುಂಬುಗೌಡನ ಕುಶಾಲಪ್ಪನವರು

ಮಡಿಕೇರಿ ನಾಡು ಮುಕ್ಕಂದೂರು ಗ್ರಾಮದಲ್ಲಿ ಜನಿಸಿ ಪಾರುಪತ್ತೆದಾರರಾಗಿ ನಿವೃತ್ತರಾದವರು. ಊರಿನ ಮತ್ತು ಬಂದು ಜನರ ವಿದ್ಯಾಭ್ಯಾಸಕ್ಕಾಗಿ ತುಂಬಾ ದುಡಿದಿದ್ದಾರೆ. ಇವರು ಕೊಡಗು ವಿದ್ಯಾ ಸಂಘ ಸ್ಥಾಪನೆಗೆ ಮುಖ್ಯ ಕಾರಣ ಕರ್ತರಾಗಿದ್ದಾರೆ ಆದಕ್ಕಾಗಿ ಜನಾಂಗದ ವಿದ್ಯಾವಂತ ಮಹನಿಯರುಗಳು ಅವರಿಗೆ ಕೃತಜ್ಞರಾಗಿರಬೇಕಾದದ್ದು ಸಹಜವಾಗಿದೆ. ಇವರ ಪ್ರೋತ್ಸಾಹದಿಂದಲೇ ಕೊಡಗು ಮತ್ತು ದ ಕ. ವಿದ್ಯಾ ಸಂಘಗಳ ಸ್ಥಾಪನೆಗೆ ಕಾರಣವಾಯಿತು.

## ದಿ॥ ತೆಕ್ಕಡ ಕಾಳಪ್ಪನವರು

ಮಡಿಕೇರಿನಾಡು ಕುಂಬಳದಾಳು ಗ್ರಾಮದಲ್ಲಿ ಜನಿಸಿದ ಶ್ರೀ ಕಾಳಪ್ಪನವರು ವಿದ್ಯಾಭಿವೃದ್ಧಿ ಕೆಲಸದಲ್ಲಿ ಹೆಚ್ಚಿನ ಆಸಕ್ತಿ ವಹಿಸಿ ದುಡಿದಿದ್ದಾರೆ. ಇವರು ಕೊಡಗು ಗೌಡ ವಿದ್ಯಾ ಸಂಘದ ಸ್ಥಾಪಕಲ್ಲಿ ಒಬ್ಬರಾಗಿದ್ದಾರೆ.

## ದಿ॥ ಕೆದಂಬಾಡಿ ಅಪ್ಪಚ್ಚನವರು

ಇವರು ಮಡಿಕೇರಿನಾಡು ಕುಂದಚ್ಚೇರಿ ಗ್ರಾಮದಲ್ಲಿ ಜನಿಸಿ ಕೊಡಗಿನ ಕೊಡಗು ವಿದ್ಯಾ ಸಂಘ ಸ್ಥಾಪನೆಯ ಕಾರಣ ಕರ್ತರಲ್ಲೊಬ್ಬರು. ಇವರೊಬ್ಬ ಜಮಿನ್ದಾರರಾಗಿದ್ದರು.

## ದಿ॥ ಕೆದಂಬಾಡಿ ಅಪ್ಪಚ್ಚನವರು

ಶ್ರೀಯುತ ಅಪ್ಪಚ್ಚನವರು ಭಾಗಮಂಡಲ ನಾಡಿನ ಕುಂದಚೇರಿ ಗ್ರಾಮದಲ್ಲಿ ಜನಿಸಿ ಒಬ್ಬ ಪ್ರಖ್ಯಾತರಾದ ಪಟೇಲರಾಗಿದ್ದರು ಇವರು 1929 ರಲ್ಲಿ ಲಾರ್ಡ್ ಇರ್ವಿನ್ ರವರು ಕೊಡಗಿಗೆ ಭೇಟಿ ಇತ್ತಾಗ ಗೌಡ ಮುಖಂಡರೊಡಗೂಡಿ ಕೊಡಗಿನ ಗೌಡರ ಪರವಾಗಿ ಬಿನ್ನವತ್ತಳೆ ಅರ್ಪಿಸಿದವರಲ್ಲೊಬ್ಬರು. ಶ್ರೀ ಅಪ್ಪಚ್ಚನವರು ನಾಡಿನ ಮತ್ತು ಗ್ರಾಮದ ಸಾಮಾಜಿಕ ಕುಂದು ಕೊರತೆಗಳನ್ನು ಹೋಗಲಾಡಿಸುವುದರಲ್ಲಿ ತುಂಬಾ ಆಸಕ್ತಿಯಿಂದ ದುಡಿದಿದ್ದಾರೆ. ಇವರೊಬ್ಬ ಒಳ್ಳೆಯ ವಾಗ್ಮಿಗಳಾಗಿದ್ದರು.

## ದಿ॥ ದಂಬೆಕೋಡಿ ನಂಜಪ್ಪನವರು

ಇವರು ಕುಂಬಳದಾಳು ಗ್ರಾಮದಲ್ಲಿ ಜನ್ಮತಾಳಿದರು. ಕಾಪೀ ತೋಟದವರೆಂದು ಪ್ರಖ್ಯಾತರಾಗಿದ್ದರು. ಇವರೊಬ್ಬ ಊರಿನ ಗಣ್ಯವ್ಯಕ್ತಿಗಳಾಗಿ ಊರಿನ ಮತ್ತು ನಾಡಿನ ವಿದ್ಯಾಭ್ಯಾಸ ಅಭಿವೃದ್ಧಿಗೆ ಕಾರಣರಾಗಿ ಕೊಡಗಿನ ಗೌಡ ವಿದ್ಯಾ ಸಂಘದ ಸ್ಥಾಪಕರಲ್ಲಿ ಒಬ್ಬರಾಗಿದ್ದಾರೆ.

---



## ದಿ॥ ಕುಂಬ ಗೌಡನ ಅಪ್ಪಯ್ಯನವರು

ದಿವಂಗತ ಕುಂಬ ಗೌಡನ ಅಪ್ಪಯ್ಯನವರು ಮುಕ್ಕಂದೂರು ಗ್ರಾಮದಲ್ಲಿ ಜನಿಸಿ ಪಾರುಪತ್ತೆಗಾರರಾಗಿ ಕೆಲಸ ಮಾಡಿ ವಿದ್ಯಾ ಸಂಘದ ಏಳಿಗೆಗಾಗಿ ದುಡಿದಿದ್ದಾರೆ. ಶ್ರೀಯುತರು ಕೊಡಗು ಗೌಡ ವಿದ್ಯಾ ಸಂಘ ಸ್ಥಾಪನೆಗೆ ಕಾರಣರಾದ ದಿವಂಗತ ತುಂಬ ಗೌಡನ ಕುಶಾಲಪ್ಪನವರ ಮಕ್ಕಳು.

### ದಿವಂಗತ ಉಳುವಾರನ ಕುಶಾಲಪ್ಪನವರು

ಇವರು ಕಾಂತೂರ ಗ್ರಾಮದಲ್ಲಿ ಜನಿಸಿ ಗೌಡ ಮುಖಂಡರುಗಳಲ್ಲಿ ಒಬ್ಬರಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ತಂಬಾ ದುಡಿದು ಹೆಸರುವಾಸಿಯಾಗಿದ್ದರು, ಶ್ರೀಯುತರು 1929 ರಲ್ಲಿ ಲಾರ್ಡ್ ಇರ್‌ವಿನ್ ವೈಸರಾಯರು ಕೊಡಗಿಗೆ ಆಗಮಸಿದ್ದಾಗ ಅವರಿಗೆ ಅರ್ಪಿಸಿದ ಬಿನ್ನವತ್ತಳೆಯ ಗೌಡ ಮುಖಂಡರಲ್ಲಿ ಒಬ್ಬರು.

### ದಿ|| ಕೋರನ ಮಾದಯ್ಯನವರು

ಶ್ರೀ ಕೋರನ ಮಾದಯ್ಯನವರು ಹೆದ್ದೂರು ಗ್ರಾಮದಲ್ಲಿ ಜನಿಸಿ ತಮ್ಮ ನಾಡಿನ ಮತ್ತು ಸ್ವಜನ ಬಾಲಕ ಬಾಲಕಿಯರ ವಿದ್ಯಾಭ್ಯಾಸದ ಅಭಿವೃದ್ಧಿಯಲ್ಲಿ ತುಂಬಾ ಶ್ರದ್ಧೆವಹಿಸಿ ಕೊಡಗಿನ ಗೌಡ ವಿದ್ಯಾ ಸಂಘದ ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿ ಸೇವೆ ಸಲ್ಲಿಸಿದ್ದಾರೆ.

### ದಿ|| ಪೊಡನೋಳಂಡ್ರ ಐಯ್ಯಪ್ಪನವರು

ದಿವಂಗತ ಐಯ್ಯಪ್ಪನವರು ಭಾಗಮಂಡಲನಾಡು ಕೋಪಟಿ ಗ್ರಾಮದಲ್ಲಿ ಜನಿಸಿ ಸಾರ್ವಜನಿಕ ಕ್ಷೇತ್ರದಲ್ಲಿ ದುಡಿದು ವಿದ್ಯಾ ಅಭಿವೃದ್ಧಿ ಕಾರ್ಯದಲ್ಲಿ ತುಂಬಾ ಅಭಿರುಚಿಯುಳ್ಳವರಾಗಿ ಕೊಡಗಿನ ಗೌಡ ವಿದ್ಯಾ ಸಂಘದ ಸ್ಥಾಪಕ ಸದಸ್ಯರಾಗಿ ಗೌಡ ಜನಾಂಗಕ್ಕೆ ಸಂಘದ ಉಪಾಧ್ಯಕ್ಷರಾಗಿ ಸೇವೆಯನ್ನು ಸಲ್ಲಿಸಿದ್ದಾರೆ.

### ದಿ|| ಉಳುವಾರನ ಅಪ್ಪಯ್ಯನವರು

ಕಾಂತೂರು ಗ್ರಾಮದಲ್ಲಿ ಜನಿಸಿದ ಉಳುವಾರನ ಅಪ್ಪಯ್ಯನವರು ಸಾರ್ವಜನಿಕ ಸೇವೆಯಲ್ಲಿ ತುಂಬಾ ಶ್ರಮಪಟ್ಟು ದುಡಿದಿದ್ದಾರೆ. ಇವರ ಪ್ರಯತ್ನದಿಂದಾಗಿ ಮಡಿಕೇರಿಯ ಗೌಡ ವಿದ್ಯಾರ್ಥಿ ಭವನ ಮತ್ತು ವಿದ್ಯಾ ಸಂಘ ಊರ್ಜಿತ ಸ್ಥಿತಿಗೆ ಬಂತು. ಮಡಿಕೇರಿಯ ಗೌಡ ವಿದ್ಯಾರ್ಥಿಗಳು ಇವರನ್ನು ಸ್ಮರಿಸಬೇಕು. ಇವರು ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷರಾಗಿ ದುಡಿದಿದ್ದಾರೆ.

### ದಿ|| ಮೂಟೇರ ಅಣ್ಣಯ್ಯನವರು

ಶ್ರೀ ಮೂಟೇರ ಅಣ್ಣಯ್ಯನವರು ಮಡಿಕೇರಿನಾಡು ಅರ್ವತೊಕ್ಲು ಗ್ರಾಮದಲ್ಲಿ ಜನಿಸಿ ಉಪಧ್ಯಾಯರಾಗಿ ಹಲವರ್ಷ ದುಡಿದು ಊರಿನ ಗಣ್ಯ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದರು. ಇವರು ಕೊಡಗು ಗೌಡ ವಿದ್ಯಾ ಸಂಘದ ಸ್ಥಾಪಕರಲ್ಲಿ ಒಬ್ಬರು. ಇವರು ವಿದ್ಯಾ ಸಂಘದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ.

### ದಿ|| ಮೇಜರ್ ಶಿರಕಜೆ ರಾಮಪ್ಪನವರು

ದಿ|| ಮೇಜರ್ ಶಿರಕಜೆ ರಾಮಪ್ಪನವರು ಭಾಗಮಂಡಲ ನಾಡಿನ ಚೇರಂಗಾಲ ಗ್ರಾಮದಲ್ಲಿ 1894 ರಲ್ಲಿ ಜನಿಸಿ ತಮ್ಮ ಪ್ರೌಢಶಾಲೆಯ ವಿದ್ಯಾಭ್ಯಾಸವನ್ನು ಮುಗಿಸಿದನಂತರ ಕೊಡಗಿನ ಪೋಲಿಸ್ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದು ನಂತರ ಇಂಡಿಯಾದ ಸೈನ್ಯದಲ್ಲಿ ಮೇಜರ್ ಆಗಿ ನಿವೃತ್ತಿ ಹೊಂದಿದರು. ಇವರು ಕೊಡಗಿನ ಗೌಡರಲ್ಲಿ ಸೈನ್ಯದಲ್ಲಿ ಕಮಿಶನ್ ಅಧಿಕಾರಿಯಾಗಿ ಆಯ್ಕೆಯಾದವರಲ್ಲಿ ಮೊದಲಿಗರು. ಇವರು ಮೊದಲನೆಯ ಮತ್ತು ಎರಡನೇ ಮಹಾಯುದ್ಧಗಳಲ್ಲಿ ಸೇವೆಯನ್ನು ಸಲ್ಲಿಸಿದ್ದಾರೆ.

ಕೊಡಗು ಬೆಟಾಲಿಯನ್‌ನಲ್ಲಿ ಗೌಡರಿಗೆ ಪ್ರತ್ಯೇಕ ಕಂಪನಿಯನ್ನು ತೆರೆಯಲು ಕಾರಣ ಕರ್ತರು ಮೇಜರ್ ರಾಮಪ್ಪವರು 77 ನೇ ಕರ್ನಾಟಕ ಬೆಟಾಲಿಯನ್. ಮುಂದಾಳಾಗಿ ಒಂದನೆ ಮಹಾ ಯುದ್ಧದಲ್ಲಿ ಮೆಸಪಟೋಮಿಯದಲ್ಲಿ ಸೇವೆ ಸಲ್ಲಿಸಿದ್ದಾರೆ. ಡೆಲ್ಲಿಯಲ್ಲಿ ಪ್ರಥಮವು ನಡೆದ ಜಾನಪದ ನೃತ್ಯಕ್ಕೆ ಕೊಡಗು ರೆಜಿಮೆಂಟಿನ ಕಮಾಂಡರಾಗಿದ್ದರು. ಮೇಜರ್ ರಾಮಪ್ಪನವರು ಗೌಡ ವಿದ್ಯಾ ಸಂಘದ ಅಭಿವೃದ್ಧಿಗೂ ಗೌಡರ ಹಕ್ಕು ಬಾಧ್ಯತೆಗಳಿಗಾಗಿ ತುಂಬಾ ಶ್ರಮಿಸಿದ್ದಾರೆ. 1968 ರಲ್ಲಿ ದೈವಾಧೀನರಾದರು.

### ದಿ॥ ಕೋಚನ ಅಪ್ಪಯ್ಯನವರು

ದಿವಂಗತ ಕೋಚನ ಅಪ್ಪಯ್ಯನವರು ಮರಗೋಡು ಗ್ರಾಮದಲ್ಲಿ ಜನಿಸಿ ಕೊಡಗಿನಲ್ಲಿ ಪ್ರಾರಂಭವಾದ ಕಾಂಗ್ರೆಸಿನ ಚಳುವಳಿಯಲ್ಲಿ ಭಾಗವಹಿಸಿದ್ದಾರೆ. ರಾಷ್ಟ್ರೀಯ ಧ್ವಜ ವಂದನೆ ಸೇಂದಿ ಸರಾಯಿಗಳ ಅಂಗಡಿ ಮುಂದೆ ಕುಡಿಯುವವರಿಗೆ ತಡೆಯುವುದು, ಸರಕಾರಿ ಅಜ್ಞೆಯನ್ನು ಉಲ್ಲಂಘಿಸುವುದು ಮುಂತಾದ ಕಾರ್ಯ ಕ್ರಮದಲ್ಲಿ ಭಾಗವಹಿಸಿ 1930–31 ರಲ್ಲಿ ಸೆರೆಮನೆ ವಾಸವನ್ನು ಅನುಭವಿಸಿದರು.

---



### ದಿ॥ ಪೋರೆಯ್ಯನ ಮಂಡಣ್ಣನವರು

ಶ್ರೀ ಪೋರೆಯ್ಯನ ಮಂಡಣ್ಣನವರು ಭಾಗಮಂಡಲ ನಾಡಿನ ಕಡಿಯತ್ತೂರು ಗ್ರಾಮದಲ್ಲಿ ಜನಿಸಿ ಕೊಡಗಿನ ರಾಜಕೀಯದಲ್ಲಿ ಕೈ ಹಾಕಿ ಕಾಂಗ್ರೆಸ್ಸಿನಲ್ಲಿಯೂ ಸೇವೆ ಸಲ್ಲಿಸಿದ್ದಾರೆ. ಇವರು 1942 ನೇ ಇಸವಿಯ 'ಬ್ರಿಟೀಷರೇ ಭಾರತದಿಂದ ತೊಲಗಿರಿ'ಎಂಬ ಚಳುವಳಿಯಲ್ಲಿ ಭಾಗವಹಿಸಿದ್ದಾರೆ. ಸೆರೆಮನೆ ವಾಸವನ್ನು ಅನುಭವಿಸಿದ್ಧಾರೆ.

---

### ದಿ॥ ಶ್ರೀಮಾನ್ ಮಲ್ಲಾರ ಮ್ಯಾಲಪ್ಪ ಗೌಡರು

ಜನನ 2-3-1883 ಮರಣ 3-7-1969

ಶ್ರೀಮಾನ್ ಮಲ್ಲಾರ ಮ್ಯಾಲಪ್ಪ ಗೌಡರು ಸುಳ್ಯ ತಾಲೋಕಿನ ಹರಿಹರ ಪಳ್ಳ ತಪ್ಪ ಗ್ರಾಮದಲ್ಲಿ ಕ್ರಿ.ಶ. ೧೮೮೩ ನೇ ಮಾರ್ಚ್ ೨ ರಂದು ಜನ್ಮ ತಾಳಿದರು.

ಶ್ರೀ ಮ್ಯಾಲಪ್ಪ ಗೌಡರು ಬಾಲ್ಯದಲ್ಲಿಯೇ ತಂದೆ ತಾಯಿಯರನ್ನು ಕಳೆದುಕೊಂಡು ತಮ್ಮ ಸ್ವಂತ ದುಡಿಮೆ ಫಲವಾಗಿ ದೊಡ್ಡ ಜಮೀನ್ದಾರರಾಗಿ ಊರಿನಲ್ಲಿ ಒಬ್ಬ ಪ್ರಭಾವವಂತ ವ್ಯಕ್ತಿಯಾಗಿ ಮುಂದಕ್ಕೆ ಬಂದವರು. ಇವರ ವಿವೇಕ ತನದಿಂದಾಗಿ ಇವರಿಗೆ ಊರಿನ ಗೌಡತನ ಮತ್ತು ಊರ ದೇವಸ್ಥಾನದ ಮೊಕ್ತೇಸರ ಮುಂತಾದ ಗ್ರಾಮದ ಹುದ್ದೆಗಳವಂಭಿಸಿ ಊರಿನಲ್ಲಾಗುವ ಪಂಚಾಯಿತಿಗಳಲ್ಲಿ ಪ್ರಾಮುಖ್ಯ ಪಾತ್ರವನ್ನು ವಹಿಸುತ್ತಿದ್ದರು. ಇವರು ತಮ್ಮ ಊರಿನ ಸಹಕಾರ ಸಂಘ, ಶಾಲಾ ಸಮಿತಿ, ಗೌಡ ವಿದ್ಯಾ ವರ್ಧಕ ಸಂಘಮುಂತಾದವುಗಳಲ್ಲಿ ದುಡಿದು ಪುತ್ತೂರಿನಲ್ಲಿರುವ ದಕ್ಷಿಣ ಕನ್ನಡ ಜಿಲ್ಲಾ ಗೌಡ ವಿದ್ಯಾ ಸಂಘದ ಆಡಳಿತ ಮಂಡಳಿಯಲ್ಲೂ ಕೆಲಸ ಮಾಡಿ ಗೌಡ ಬಾಲಕ ಬಾಲಕಿಯರ ವಿದ್ಯಾರ್ಜನೆಗಾಗಿ ಹತ್ತಾರು ಶಾಲೆಗಳನ್ನೂ ಮತ್ತು ವಿದ್ಯಾರ್ಥಿನಿಲಯಗಳನ್ನು ತೆರೆಯುವುದಕ್ಕೆ ಊರೂರು ತಿರುಗಿ ಜನರಿಂದವಂತಿಗೆ ಜಮಾಯಿಸುವುದಕ್ಕೆ ಹಗಲಿರುಳು ದುಡಿದಿದ್ದಾರೆ. ಅಲ್ಲದೆ ತಮ್ಮದೇ ಖರ್ಚಿ



ನಿಂದ ಪುತ್ತೂರಿನ ಗೌಡ ವಿದ್ಯಾರ್ಥಿ ಭವನದ ಜಡಾವಣೆಯ ಕಟ್ಟಡವನ್ನು ಕಟ್ಟಿಸಿ ಕೊಟ್ಟಿದ್ದಾರೆ. ಹೆಚ್ಚಿನ ವಿದ್ಯಾವಂತರಲ್ಲದಿದ್ದರೂ ಮುಂಬರುವ ಪೀಳಿಗೆಗೆ ದಾರಿ ತೋರಿಸಿಕೊಟ್ಟ ಮಹಾನ್ ವ್ಯಕ್ತಿ ದಿ॥ ಮ್ಯಾಲಪ್ಪ ಗೌಡರು. ಇವರು ದಕ್ಷಿಣ ಕನ್ನಡ ಜಿಲ್ಲೆಯ ಗೌಡರ ಇತಿಹಾಸದಲ್ಲಿ ವಿದ್ಯಾಭಿವೃದ್ಧಿ ಕಾರ್ಯದಲ್ಲಿ ಕ್ರಾಂತಿಕಾರಕ ಲಸವನ್ನು ಮಾಡಿದ್ದಾರೆ.

### ದಿವಂಗತ ಪೆಲತಡ್ಕ ದುಗ್ಗಪ್ಪಗೌಡರು

ದಿವಂಗತ ಪೆಲತಡ್ಕ ದುಗ್ಗಪ್ಪಗೌಡರು ಸುಳ್ಯ ತಾಲ್ಲೋಕಿನ ಅರಂತೋಡು ಗ್ರಾಮದವರು ಇವರೊಬ್ಬ ಹೆಸರಾಂತ ಭೂಮಾಲೀಕರೂ ಮುಂದಾಳುವೂ ಆಗಿ ತನ್ನ ಊರಿನ ಹಾಗೂ ನೆರೆ ಊರಿನ ಜನರ ಉದ್ಧಾರಕ್ಕಾಗಿ ಶ್ರಮಿಸಿ ಜನರ ಪ್ರೀತಿಗೆ ಪಾತ್ರರಾಗಿದ್ದಾರೆ. ಅಲ್ಲದೆ ಗೌಡ ಜನರ ವಿದ್ಯಾಭಿವೃದ್ಧಿಗಾಗಿ ದುಡಿದಿದ್ದಾರೆ.

### ದಿವಂಗತ ಗೂನಡ್ಕ ಗುಡ್ಡಪ್ಪಗೌಡರು

ದಿವಂಗತ ಗೂನಡ್ಕ ಗುಡ್ಡಪ್ಪಗೌಡರು ಸಂಪಾಜೆ ಗ್ರಾಮದವರು ಇವರು. ಒಬ್ಬ ಧನಿಕ ವ್ಯಕ್ತಿಯಾಗಿ ಊರಿನ ಹಲವಾರು ಸಾರ್ವಜನಿಕ ಕ್ಷೇತ್ರದಲ್ಲಿ ದುಡಿದಿದ್ದಾರೆ. ಗೌಡ ವಿದ್ಯಾ ಸಂಘದ ಏಳಿಗೆಗಾಗಿ ಶ್ರಮಿಸಿದ್ದಾರೆ.

---

ಕೊಡಗು ಗೌಡ ವಿದ್ಯಾಸಂಘದ ಸ್ಥಾಪನೆಗಾಗಿ ದುಡಿದವರಲ್ಲಿ ಒಬ್ಬರಾಗಿ ಸದ್ರಿ ಸಮಾಜದ ಸ್ಥಾಪಕರಲ್ಲಿ ಒಬ್ಬರು. ಇವರೊಬ್ಬ ದೊಡ್ಡ ಜಮೀನ್‌ದಾರರು. ಇವರು ಸಂಘದ ಉಪಾಧ್ಯಕ್ಷರಾಗಿದ್ದರು.

---

### ದಿವಂಗತ ದೇವರಗುಂಡ ತ್ಯಾಂಪಣ್ಣ ಗೌಡ

ದಿವಂಗತ ದೇವರಗುಂಡ ತ್ಯಾಂಪಣ್ಣಗೌಡರು ಸುಳ್ಯದ ದೇಂಗೋಡಿಯಲ್ಲಿ ಜನಿಸಿದರು. ಇವರೊಬ್ಬ ಭೂಮಾಲೀಕರಾಗಿ ಜನತಾ ಸೇವೆಯಲ್ಲಿ ತಮ್ಮ ಆಯುಷ್ಯನ್ನು ಕಳೆದಿದ್ದಾರೆ. ವಿದ್ಯಾಭಿವೃದ್ಧಿಗಾಗಿ ಊರಿನ ಮತ್ತು ಗೌಡರ ವಿದ್ಯಾರ್ಥಿಗಳಿಗೆ ತುಂಬಾ ಪ್ರೋತ್ಸಾಹ ಮತ್ತು ಧನಸಹಾಯವನ್ನು ಮಾಡಿ ಗೌಡ ವಿದ್ಯಾಸಂಘದ ಏಳಿಗೆಗಾಗಿ ದುಡಿದಿದ್ದಾರೆ.

---



### ದಿವಂಗತ ತೆಕ್ಕಡ ಪೂವಯ್ಯನವರು

ಮೂರ್ನಾಡಿನ ಮುತ್ತಾರ್ಮುಡಿ ಗ್ರಾಮದಲ್ಲಿ ಜನಿಸಿ ಹಿಂದಿನ ಕಾಲದಲ್ಲಿ ಜನಾಂಗದ ವಿದ್ಯಾವಂತರಲ್ಲಿ ಒಬ್ಬರಾಗಿ



### ದಿ॥ ಕುಯಿಂತೋಡು ಸುಬ್ರಾಯಗೌಡರು

ಸುಳ್ಯ ತಾಲ್ಲೂಕಿನ ಸಂಪಾಜೆ ಗ್ರಾಮದ ಕುಯಿಂತೋಡು ಮನೆಯಲ್ಲಿ ಜನಿಸಿದರು. ಬಾಲ್ಯದ ವಿದ್ಯಾಭ್ಯಾಸ

ವನ್ನು ಊರಿನಲ್ಲಿ ಹಲವಾರು ಸಾರ್ವಜನಿಕ ಕಾರ್ಯಗಳಲ್ಲಿ ಶ್ರಮವಹಿಸಿ ದುಡಿದಿದ್ದಾರೆ. ಇವರು ತಮ್ಮ ಗ್ರಾಮ ಪಟೇಲರಾಗಿ ಸತ್ಯ, ಧರ್ಮ, ನ್ಯಾಯ ಇವನ್ನು ಪಾಲಿಸುವುದು ತನ್ನ ಜನ್ಮದ ಕರ್ತವ್ಯವೆಂದಿಟ್ಟುಕೊಂಡು ಜಾತಿ ಮತ ಭೇದವಿಲ್ಲದೆ ಊರಿನ ಜಗಳ, ತಕರಾರುಗಳನ್ನು ನ್ಯಾಯ ರೀತಿಯಿಂದ ತೀರ್ಮಾನಿಸಿ ನಿಷ್ಪಕ್ಷಪಾತಿಯಾಗಿ ಕೆಲಸ ಮಾಡಿ, ಸಾರ್ವಜನಿಕರ ಪ್ರೀತಿಯನ್ನು ಗಳಿಸಿ ಪ್ರಸಿದ್ಧಿಯಾಗಿದ್ದರು. ದಕ್ಷಿಣ ಕನ್ನಡ ಗೌಡ ವಿದ್ಯಾ ಸಂಘದಲ್ಲಿ ಮತ್ತು ಸಹಕಾರ ಕ್ಷೇತ್ರದಲ್ಲಿ ಬಹಳವಾಗಿ ದುಡಿದು ಕೀರ್ತಿ ಗಳಿಸಿದ್ದಾರೆ. ವಿದ್ಯೆಯಲ್ಲಿರುವ ಅಪರಿಮಿತ ಪ್ರೇಮ ಭಾವನೆಯಿಂದ, ಬಹಳ ಮಂದಿ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದ್ದಾರೆ. ಇವರ ಪೈಕಿ ಇವರ ಅಳಿಯನಾದ ಡಾ॥ ಕೆ. ವೀರಪ್ಪಗೌಡರೂ ಒಬ್ಬರು.

ಇವರು ಒಬ್ಬ ಪ್ರಖ್ಯಾತಿಗೊಂಡ ಶಿಕಾರಿಯೂ ಆಗಿದ್ದರು. ತನ್ನ ಜೀವಮಾನದಲ್ಲಿ ಊರಿಗೆ ಹಾವಳಿ ಮಾಡುತ್ತಿದ್ದ 22 ಹುಲಿಗಳನ್ನು ಗುಂಡಿಕ್ಕಿ ಕೊಂದಿರುವರು.

ಶ್ರೀಮಾನ್ ಸುಬ್ರಾಯಗೌಡರು ಒಬ್ಬ ನಿಷ್ಠಾವಂತ ವ್ಯಕ್ತಿಯಾಗಿದ್ದು ಊರಿನ ಜನರ ಮೆಚ್ಚುಗೆಗೆ ಪಾತ್ರರಾಗಿದ್ದರು. ಇವರು 1966ನೇ ಇಸವಿಯಲ್ಲಿ 78ನೇ ವಯಸ್ಸಿನಲ್ಲಿ ದೈವಾಧೀನರಾದರು.

## ದಿ॥ ಕೂಜುಗೋಡು ಕುಶಾಲಪ್ಪಗೌಡರು

ದಿವಂಗತ ಕೂಜುಗೋಡು ಕುಶಾಲಪ್ಪಗೌಡರು ಸುಬ್ರಹ್ಮಣ್ಯದ ಹರಿಹರ ಪಳ್ಳತಡ್ಕ ಗ್ರಾಮದಲ್ಲಿ ಜನಿಸಿ ಒಬ್ಬ ಪ್ರಭಾವಮಂತ ವ್ಯಕ್ತಿಗಳಾಗಿದ್ದರು. ಇವರು ತನ್ನ ಊರಿನ ಮೇಲ್ಮೆಗಾಗಿ ದುಡಿದಿದ್ದಾರೆ. ದಕ್ಷಿಣ ಕನ್ನಡ ಗೌಡ ವಿದ್ಯಾವರ್ಧಕ ಸಂಘದ ಅಭಿವೃದ್ಧಿಗಾಗಿ ತುಂಬಾ ಶ್ರಮಿಸಿದ್ದಾರೆ. ತನ್ನ ಊರಿನ ಜನರ ಪ್ರೀತಿಗೆ ಪಾತ್ರರಾಗಿದ್ದು ಅವರ ಏಳಿಗೆಗಾಗಿ ಸಾಕಷ್ಟು ದುಡಿದಿದ್ದಾರೆ.

## ದಿವಂಗತ ಚಂಡೀರ ಬೆಳ್ಯಪ್ಪನವರು

ಶ್ರೀ ಚಂಡೀರ ಬೆಳ್ಯಪ್ಪನವರು ಕೈಕೇರಿ ಗ್ರಾಮದಲ್ಲಿ ಜನಿಸಿ ಮಡಿಕೇರಿ ಸೆಂಟ್ರಲ್ ಪ್ರೌಢ ಶಾಲೆಯಲ್ಲಿ ವಿದ್ಯಾ



ಭ್ಯಾಸವನ್ನು ಮುಗಿಸಿ ಕೊಡಗಿನ ರೆವಿನ್ಯೂ ಇಲಾಖೆಯಲ್ಲಿ ಕೆಲಸ ಮಾಡಿ ಪಾರುಪತ್ತೆಗಾರರಾಗಿ ನಿವೃತ್ತರಾಗಿ ಸಾರ್ವಜನಿಕರಿಗೆ ನಮ್ಮ ಅಧಿಕಾರದ ಕಾಲದಲ್ಲಿ ನಂತರವೂ ತುಂಬಾ ಉಪಕಾರಿಯಾಗಿದ್ದರು.

---

## ದಿವಂಗತ ನಿಡ್ಯಮಲೆ ಸೋಮಣ್ಣನವರು

ಬಿ.ಎ. ಬಿ.ಎಲ್., ಎಂ.ಪಿ.

1905 ನೇ ಇಸವಿ ಏಪ್ರಿಲ್ 15 ರಂದು ಕೊಡಗಿನ ಪೆರಾಜೆ ಗ್ರಾಮದಲ್ಲಿ ಸರ್ಕಾರಿ ನೌಕರ ಮಗನಾಗಿ ಜನ್ಮ ತಾಳಿದರು. ಶ್ರೀಯುತ ಸೋಮಣ್ಣನವರು ಮಡಿಕೇರಿಯ ಸೆಂಟ್ರಲ್ ಪ್ರೌಢ ಶಾಲೆಯಲ್ಲಿ ಪ್ರೌಢಶಾಲೆಯ ವಿದ್ಯಾಭ್ಯಾಸವನ್ನು ಮುಗಿಸಿ ಮಂಗಳೂರಿನ ಸೆಯಿಂಟ್ ಎಲೋಸಿಯಸ್ ಕಾಲೇಜಿನಲ್ಲಿ

ಪದವಿಯನ್ನು ಗಳಿಸಿ ಮದ್ರಾಸು ವಿಶ್ವವಿದ್ಯಾನಿಲಯದಲ್ಲಿ "ಲಾ" ಪದವಿಯನ್ನು 1930ರಲ್ಲಿ ಗಳಿಸಿದರು.

ವಿದ್ಯಾಭ್ಯಾಸವನ್ನು ಮುಗಿಸಿದೊಡನೆ ಅವರು ಕಾಂಗ್ರೆಸ್ ಪಾರ್ಟಿಗೆ ಸೇರಿದರು. ಇದೇ ಮೊದಲಬಾರಿಗೆ ಅವರು ರಾಜಕೀಯದ ಜೀವನಕ್ಕೆ ಪ್ರಾರಂಭ ಮಾಡಿದ್ದಾರೆ. ಒಂದು ಸಲ ಅವರು ಕೊಡಗು ಜಿಲ್ಲಾ ಕಾಂಗ್ರೆಸ್ಸಿನ ಸಮಿತಿಯ ಉಪಾಧ್ಯಕ್ಷರಾಗಿದ್ದರು.

ಸೈಮನ್ ಕಮಿಷನ್ನಿನ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸಿದ ಚಳುವಳಿಯಲ್ಲಿ ಮುಖ್ಯ ಪಾತ್ರವನ್ನು ವಹಿಸಿದ್ದಾರೆ. ಅದನಂತರ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಾರೆ 1942ರ "ಭಾರತ ಬಿಟ್ಟು



ತೊಲಗಿರಿ" ಸತ್ಯಾಗ್ರಹದಲ್ಲಿ ಭಾಗವಹಿಸಿ ಅವರನ್ನು ಜೈಲಿಗೆ ಬಂದಿಸುವುದರಿಂದ ತಪ್ಪಿಸಿಕೊಂಡು ಗುಪ್ತವಾಗಿ ಕೆಲಸ ಮಾಡಿ ಸೇವೆಯನ್ನು ಸಲ್ಲಿಸಿದ್ದಾರೆ.

ಶ್ರೀಯುತ ಸೋಮಣ್ಣನವರು 1945ರಲ್ಲಿ ಕೊಡಗಿನ ಲೆಜಿಸ್ಲೇಟಿವ್ ಕೌನ್ಸಿಲಿನ ಸದಸ್ಯರಾಗಿ ಆಯ್ಕೆಯಾಗಿ ಅದರೊಡನೆ ಕೊಡಗು ಜಿಲ್ಲಾ ಕಾಂಗ್ರೆಸ್ಸಿನ ಉಪಾಧ್ಯಕ್ಷರಾಗಿ 1951ರವರೆಗೆ ದುಡಿದರು.

ಲೆಜಿಸ್ಲೇಟೀವ್ ಕೌನ್ಸಿಲಿನ ಸದಸ್ಯರಾಗಿ ಕೌನ್ಸಿಲಿನ ಸಭೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸಿ ರಾಜ್ಯದ ಆರ್ಥಿಕ ಭದ್ರತೆ, ರಾಜ್ಯದ ಯೋಜನೆಗಳನ್ನು ರೂಪಿಸುವುದರಲ್ಲೂ ಹರಿಜನರ ಸ್ಥಿತಿಯನ್ನುಉದ್ಧರಿಸುವುದರಲ್ಲಿಯೂ ಕೌನ್ಸಿಲ್‌ನಲ್ಲಿ ನಡೆದ ಚರ್ಚೆಗಳಲ್ಲಿ ತುಂಬಾ ಶ್ರದ್ಧೆವಹಿಸುತ್ತಿದ್ದರು. ಅವರು ರಾಜ್ಯದ ಪಂಚವಾರ್ಷಿಕ ಯೋಜನೆಯ ಮಂಡಳಿಯಲ್ಲೂ, ಹರಿಜನರ ಉದ್ಧಾರ ಕೆಲಸ ಕಾರ್ಯಗಳ ಮಂಡಳಿಯ ಸದಸ್ಯರಾಗಿಯೂ ಲೆಜಿಸ್ಲೇಟಿವ್ ಕೌನ್ಸಿಲಿನ ಹಣ ಕಾಸಿನ ಸಮಿತಿಯಲ್ಲಿಯೂ ಸಾಕಷ್ಟು ದುಡಿದಿದ್ದಾರೆ.

ಗಾಂಧೀಜೀಯವರ ಭಕ್ತರೂ ಮತ್ತು ಶಿಷ್ಯರೂ ಆದ ಸಮಾಜದಲ್ಲಿದ್ದ ದುಷ್ಟ ಸ್ಥಿತಿಗಳಾದ ಅಸ್ಪೃಶ್ಯತೆ ಮುಂತಾದವುಗಳನ್ನು ಹೋಗಲಾಡಿಸಲು ಹರಿಜನರ ಉದ್ಧಾರ ಕಾರ್ಯದಲ್ಲೂ, ಖಾದಿಯನ್ನು ಪ್ರಚಾರ ಮಾಡುವ ವಿಷಯದಲ್ಲಿ ತುಂಬಾ ದುಡಿದಿದ್ದಾರೆ ಕೃಷಿಯೇ ಪ್ರಧಾನವಾದ ರಾಷ್ಟ್ರದ ಒಬ್ಬ ಕುವರನಾಗಿ ಕೃಷಿಕರ ಅಭಿವೃದ್ಧಿಯ ಬದಲಾವಣೆಯ ಕಾನೂನು ಖಾಯಿದೆಗಳನ್ನು ರೂಪಿಸಲು ದುಡಿದಿದ್ದಾರೆ. ಕೃಷಿಗಳನ್ನು ನಾಶಮಾಡುವ ಕೀಟಗಳ ನಿರ್ಮೂಲನಕ್ಕಾಗಿ ಲಂತಾನ ಕಮಿಟಿಯಲ್ಲೂ ತುಂಬಾ ಕೆಲಸ ಮಾಡಿದ್ದಾರೆ.

ಅವರಿಗೆ ಬಹುಷ್ಯ ಸಾಮಾಜಿಕ ಹಾಗೂ ವಿದ್ಯಾಭ್ಯಾಸದ ಸುಧಾರಣೆಯಲ್ಲಿದ್ದ ಆಸಕ್ತಿ ಇದ್ದುದರಿಂದಲೇನೋ ಅವರನ್ನು ಕೊಡಗಿನಿಂದ ಬೊಂಬಾಯಿ ಸರ್ಕಾರದವರು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇದರ ಸಮಿತಿಯ ಒಬ್ಬ ಸದಸ್ಯರಾಗಿ ನೇಮಿಸಿದ್ದರು.

1949ರಲ್ಲಿ ಸರ್ದಾರ್ ವಲ್ಲಾಬಾಯಿ ಪಟೇಲರು ಕೊಡಗಿನ ಭವಿಷ್ಯದ ವಿಷಯ ಚರ್ಚಿಸಲು ಇವರಿಗೆ ದೆಹಲಿಗೆ ಬರಲು ಆಹ್ವಾನವಿತ್ತಿದ್ದರು.

1952ರಲ್ಲಿ ಪ್ರಪ್ರಥಮ ಭಾರತದ ಪ್ರಜಾಪ್ರಭುತ್ವದ ಲೋಕಸಭೆಯ ಸದಸ್ಯರಾಗಿ ಆಯ್ಕೆಯಾದರು.

ಸಂಸತ್ತಿನಲ್ಲಿ ಯೋಜನೆಯ ಒಳಾಡಳಿತ ಮತ್ತು ಸಂಪರ್ಕ ಕಲ್ಪಿಸುವ ಮಂಡಳಿಗಳ ಕಾಂಗ್ರೆಸ್ ಪಕ್ಷದ ಸಂಸತ್ತಿನ ಸದಸ್ಯರಾಗಿದ್ದರು.

ಕೊಡಗಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಅಲ್ಲದೆ ಇವರು ದೇಶದ ರಕ್ಷಣೆಯ ವಿಷಯದಲ್ಲಿ ಹೆಚ್ಚಿಗೆ ಆಸಕ್ತಿ ತೋರಿಸಿ ಭಾರತದಲ್ಲಿ ದಕ್ಷತೆಯ ವಿಮಾನ ಬಲ ಮತ್ತು ನೌಕಾಜಲವನ್ನು ನಮ್ಮ ಉದ್ದವಾದ ಕರಾವಳಿಗಳನ್ನು ಕಾಪಾಡಲು ಭದ್ರಪಡಿಸಬೇಕೆಂದು ಭಾರತ ಸರ್ಕಾರವನ್ನು ಒತ್ತಾಯಪಡಿಸುತ್ತಿದ್ದರು.

ಶ್ರೀ ಸೋಮಣ್ಣನವರು ಕೊಡಗು ಒಂದು 'ಸಿ' ಪ್ರಾಂತ್ಯವಾಗಿರುವುದರಲ್ಲಿ ತೃಪ್ತಿಪಡದೆ ಅದು 'ಎ' ಪ್ರಾಂತ್ಯಗಳ ಸಮೂಹದಲ್ಲಿ ಸೇರಿಸಬೇಕೆಂದು ಬಲವಾದ ಅಭಿಪ್ರಾಯವನ್ನು ಹೊಂದಿದ್ದರು.

ಶ್ರೀ ಸೋಮಣ್ಣನವರ ಜೀವನವು ಒಬ್ಬ ಸರಳ ಸ್ವಭಾವದ ನಿರ್ಮಲ ಮನಸ್ಸಿನ ವ್ಯಕ್ತಿ ಒಳ್ಳೆಯ ವಾಗ್ಮಿ. ಇವರ ಜೀವನ ನಿಷ್ಕಪಟ ವ್ಯಕ್ತಿತ್ವದಿಂದ ಕೂಡಿತ್ತು.

ಶ್ರೀ ಸೋಮಣ್ಣನವರು ನಂತರ ವಿಧಿವಶಾತ್ ಹಠಾತ್ತನೆ ಪಕ್ಷವಾತ ರೋಗಕ್ಕೆ ತುತ್ತಾದುದರಿಂದ ರಾಜಕೀಯದ ಜೀವನ ಕುಂಟಿತವಾಗಿ 1957ನೇ ಇಸವಿಯಲ್ಲಿ ವಿಶಾಲ ಮೈಸೂರು ರಾಜ್ಯವಾದ ನಂತರ ಪೆರಿಯಾಪಟ್ಟಣ ಕ್ಷೇತ್ರದಿಂದ ಮೈಸೂರಿನ ವಿಧಾನ ಸಭೆಗೆ ಆಯ್ಕೆಯಾದರು. ಅವರು 1960ರಲ್ಲಿ ಶಿವಾಧೀನರಾದರು.

### ದಿ|| ಕುಯುಂತೋಡಿ ಪದ್ಮಯ್ಯಗೌಡರು

ಸುಳ್ಯ ತಾಲ್ಲೋಕಿನ ಸಂಪಾಜೆ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಶ್ರೀ ಸುಬ್ರಾಯಗೌಡರು. ಇವರು ತನ್ನ ವಿದ್ಯಾಭ್ಯಾಸವನ್ನು ಮುಗಿಸಿಡೊಡನೆ ಸೈನ್ಯಕ್ಕೆ ಸೇರಿ ಸೇವೆ ಸಲ್ಲಿಸಿದರು. ಇವರು ಗೌಡರ ವಿದ್ಯಾಭ್ಯಾಸಕ್ಕಾಗಿ ಶ್ರಮಿಸಿದ್ದಾರೆ. ಯುವಕರಾಗಿದ್ದಾಗಲೇ ಮರಣ ಹೊಂದಿದುದರಿಂದ ಇವರ ಸೇವೆ, ಜನರಿಗೆ ಇನ್ನೂ ಹೆಚ್ಚಿನ ರೀತಿಯಲ್ಲಿ ದೊರಕದಂತಾಯಿತು.

---



### ದಿ|| ಸಂಪಾಜೆ ಸಣ್ಣಯ್ಯ ಪಟೇಲರು

ದಿವಂಗತ ಸಂಪಾಜೆ ಸಣ್ಣಯ್ಯ ಪಟೇಲರು 1890ರಲ್ಲಿ ಜನಿಸಿದರು. ಇವರು ಚಿಕ್ಕವಯಸ್ಸಿನಲ್ಲಿಯೇ ವಿದ್ಯಾಭ್ಯಾಸವನ್ನು ಮುಗಿಸಿ 1908 ರಿಂದ 1951ರ ವರೆಗೆ ಪಟೇಲರಾಗಿ ಸೇವೆ ಸಲ್ಲಿಸಿದ್ದಾರೆ. 1924ರಿಂದ 1955ರ ವರೆಗೆ ದಕ್ಷಿಣ ಕನ್ನಡ ವಿದ್ಯಾ ಸಂಘದ ಕಾರ್ಯದರ್ಶಿಯಾಗಿ ನಂತರ ಅಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ. ಇವರಿಗೆ ಹಲವಾರು ಸಾರಿ ಕೊಡಗಿನ ಸಹಕಾರ ಸಂಘಗಳ ರಿಜಿಸ್ಟ್ರಾರಿಂದ ಮೆಚ್ಚಿಗೆ ಪತ್ರವನ್ನು ಪಡೆದಿದ್ದಾರೆ. ಇವರಿಗೆ 28-2-53ರಲ್ಲಿ ಕೊಡಗು ಸರ್ಕಾರದಿಂದ ಸನ್ಮಾನ ಪತ್ರ ಮತ್ತು ಚಿನ್ನದ ಪದಕ ದೊರಕಿದೆ. ಇವರು ಸಂಪಾಜೆ ಶಾಲಾ ಕಟ್ಟಡಕ್ಕಾಗಿ ಸಹಕಾರ ಸಂಘದ ಕಟ್ಟಡ ಮತ್ತು ಊರಿನ ದೇವಾಲಯಕ್ಕೆ ರೂ.20,000ಕ್ಕಿಂತಲೂ ಹೆಚ್ಚು ಉದಾರ ದಾನ ಮಾಡಿದ್ದಾರೆ. ಇದೂ ಅಲ್ಲದೆ ಸಂಪಾಜೆಯ ಸಿವಿಲ್ ಆಸ್ಪತ್ರೆ, ಹಿರಿಯ ಬುನಾದಿ ಶಾಲೆ, ಪಶು

ವೈದ್ಯಶಾಲೆ, ಹೆರಿಗೆ ಆಸ್ಪತ್ರೆ ಮುಂತಾದವುಗಳಿಗಾಗಿ 30,000 ರೂಪಾಯಿಗಿಂತಲೂ ಹೆಚ್ಚು ಧನ ಸಹಾಯ ಮಾಡಿದ್ದಾರೆ. ಇದಲ್ಲದೆ ದ. ಕ. ಮತ್ತು ಕೊಡಗು ಜಿಲ್ಲೆಗಳ ವಿದ್ಯಾ ಸಂಘದ ವಿದ್ಯಾರ್ಥಿ ಭವನಕ್ಕಾಗಿ ದಾನ ಮಾಡಿದ್ದಾರೆ. ತಾಂತ್ರಿಕ ಶಿಕ್ಷಣಗಳಿಗಾಗಿ ವಿದ್ಯಾರ್ಥಿ ವೇತನವನ್ನೂ ಕೊಟ್ಟು ವಿದ್ಯಾ ಸಂಘಗಳ ನಿಧಿ ಸಂಗ್ರಹಣೆಗಾಗಿ ಸಂಚಾರ ಮಾಡಿ ಹಣ ಸಂಗ್ರಹ ಕೆಲಸ ಮಾಡಿದ್ದಾರೆ. ಸುಳ್ಯ, ಬೆಳ್ಳಾರೆ ಪುತ್ತೂರುಗಳಲ್ಲಿ ಗೌಡ ವಿದ್ಯಾರ್ಥಿ ಭವನಗಳನ್ನು ಸ್ಥಾಪಿಸಿದ್ದಾರೆ. ಶ್ರೀಯುತರು 25-1-61ರಲ್ಲಿ ನಿಧನರಾದರು.

### ದಿವಂಗತ ಶ್ರೀ ಸಣ್ಣಯ್ಯ ಪಟೇಲರಿಗೆ ಕೊಡಗು ಸರ್ಕಾರದವರು ಇತ್ತ ಸನ್ಮಾನ ಪತ್ರದ ಅನುವಾದ

ಶ್ರೀ ನಂಜೇಗೌಡನ ಸಣ್ಣಯ್ಯನವರು ಸಂಪಾಜೆ ಗ್ರಾಮದ ಪಟೇಲರಾಗಿ 43 ವರ್ಷ ಕಾಲ ಕೆಲಸ ನೋಡಿ ತನಗೆ 60 ವರ್ಷ ತುಂಬಿದುದರಿಂದ 1951 ನೇ ಇಸವಿ ದಶಂಬರ್ 10ಕ್ಕೆ ಕೆಲಸದಿಂದ ನಿವೃತ್ತಿ ಹೊಂದಿರುವರು. ಸರ್ಕಾರದ ಕಾರ್ಯವೆಂದರೆ ಅವರಿಗೆ ಪವಿತ್ರ ಮತ್ತು ನಂಬಿಕೆಯುಳ್ಳದಾಗಿದ್ದು ರಾಷ್ಟ್ರಾಭಿವೃದ್ಧಿ ಕಾರ್ಯದಲ್ಲಿ ಆಗಿಂದಾಗ್ಯೆ ಅವರು ಜವಾಬ್ದಾರಿಯಿಂದ ಮುಂದಾಳತ್ವ ವಹಿಸುತಿದ್ದರು. ಜನತಾ ಸೇವೆಯಲ್ಲಿ ವಿನಯಶೀಲರಾಗಿ ದುಡಿಯುತ್ತಿದ್ದಾರೆ. ಸಾರ್ವಜನಿಕ ಕಾರ್ಯಗಳಾದ ಸಂಪಾಜೆ ಶಾಲಾ ಕಟ್ಟಡ, ಸಹಕಾರಿ ಸಂಘ, ಗ್ರಾಮದ ದೇವಾಲಯ ಇತ್ಯಾದಿಗಳಿಗೆ ಅವರು ರೂ. 20,000 ಕ್ಕಿಂತಲೂ ಹೆಚ್ಚು ದಾನ ಮಾಡಿರುವರು. ಅವರು ತನ್ನ ಕೆಲಸವನ್ನು ಶ್ರದ್ಧೆಯಿಂದಲೂ ರಾಜನಿಷ್ಠೆಯಿಂದಲೂ ನೆರವೇರಿಸಿ ಸರಕಾರದ ಹೊಗಳಿಕೆಗೂ ಜನರ ಪ್ರೀತಿ ಗೌರವಗಳಿಗೂ ಪಾತ್ರರಾಗಿದ್ದಾರೆ. ಅನೇಕ ವರ್ಷಗಳಿಂದ ಅವರು ಸಲ್ಲಿಸಿದ ಸೇವೆಗೆ ಮೆಚ್ಚಿ ಸರ್ಕಾರವು ಅವರಿಗೆ ಒಂದು ಚಿನ್ನದ ಪದಕವನ್ನು ಕೊಡಲು ಸಂತೋಷಪಡುತ್ತದೆ.

ಮಡಿಕೇರಿ
28-2-1953

ಲೆ. ಕ. ದಯಾಸಿಂಗ್‌ಬೇಡಿ
ಚೀಫ್ ಕಮೀಶನರ್

### ದಿವಂಗತ ಪಿಂಡಿಬನ ಕೃಷ್ಣಪ್ಪಗೌಡರು

ಶ್ರೀಯುತರು ಸೋಣಂಗೇರಿ ಗ್ರಾಮದಲ್ಲಿ ಜನಿಸಿ ಚಿಕ್ಕಂದಿನಿಂದಲೇ ಸ್ವತಃ ಆಸ್ತಿಯನ್ನು ಗಳಿಸಿ ಒಬ್ಬ ಧನಿಕ ವ್ಯಕ್ತಿಯಾಗಿದ್ದರು. ಊರಿನ ಅಭಿವೃದ್ಧಿಗೂ ಮತ್ತು ಗೌಡ ಜನರ ಅಭಿವೃದ್ಧಿಗೂ ತುಂಬಾ ಶ್ರಮಿಸಿದ್ದಾರೆ. ಪುತ್ತೂರಿನ ಗೌಡ ವಿದ್ಯಾರ್ಥಿ ನಿಲಯಕ್ಕೂ ಬೋರ್ಡು ಹೈಸ್ಕೂಲಿಗೂ ಸಾವಿರ ರೂಪಾಯಿಗಿಂತ ಹೆಚ್ಚು ದಾನಮಾಡಿದ್ದಾರೆ.



### ದಿವಂಗತ ಪೂಜಾರಿರ ರಾಮಪ್ಪನವರು

ಜನನ 1912  ಮರಣ 1665

ಶ್ರೀಯುತ ಪೂಜಾರಿರ ರಾಮಪ್ಪನವರು ಮೇಕೇರಿ ಗ್ರಾಮದಲ್ಲಿ ಜನಿಸಿದರು. ಮಡಿಕೇರಿಯ ಸೆಂಟ್ರಲ್ ಪ್ರೌಢ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಸಮಯದಲ್ಲಿಯೇ ಗಾಂಧೀಜಿಯವರ ಅಸಹಕಾರ ಚಳುವಳಿಯ ಕೂಗಿಗೆ ಓಗೊಟ್ಟು ರಾಜಕೀಯ ರಂಗಕ್ಕೆ ಇಳಿದರು.

1930 – 31 ಧ್ವಜವಂದನೆ ಸೇಂದಿ ಸರಾಯಿ ಅಂಗಡಿಗಳ ಮುಂದೆ ಕುಡಿಯುವವರಿಗೆ ತಡೆಮಾಡುವುದು ಸರಕಾರಿ ಆಜ್ಞೆಯನ್ನು ಉಲ್ಲಂಘನೆ ಮುಂತಾದ ಕಾಂಗ್ರೆಸ್ಸಿಗರ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸತ್ಯಾಗ್ರಹಗಳಲ್ಲಿ ಪಾಲುಗೊಂಡವರಾಗಿದ್ದರು ಇದರಿಂದಾಗಿ ಇವರನ್ನು ಬ್ರಿಟಿಷ್ ಸರ್ಕಾರವು ಬಂಧಿಸಿ ದಂಡ ಮತ್ತು ಸೆರೆವಾಸ ವನ್ನು ವಿಧಿಸಿತು.

ತಾ॥ 25-10-1932ರ ಮಧ್ಯರಾತ್ರಿಯಲ್ಲಿ ಮಡಿಕೇರಿ ಕೋಟೆಯಲ್ಲಿ ಹಾರುತ್ತಿದ್ದ ಬ್ರಿಟಿಷರ ಧ್ವಜ ವಾದ ಯೂನಿಯನ್ ಜಾಕನ್ನು ಗಡಿಯಾರ ಕಂಬದ ಮೇಲೆ ಹತ್ತಿ ಕೆಳಗಿಳಿಸಿ ಕಾಂಗ್ರೆಸ್ಸಿನ ತ್ರಿವರ್ಣ ಧ್ವಜ ವನ್ನು ಮೇಲಕ್ಕೇರಿಸಿ "ವಂದೇ ಮಾತರಂ" ಹಾಡಿ ಧ್ವಜ ವಂದನೆಯನ್ನು ಮಾಡಿ ಕೆಳಕ್ಕೆ ಧುಮುಕಿ ಕಾಲ್ನಡಿಗೆ ಯಲ್ಲಿಯೇ ರಾತ್ರಿ ಸಮುದ್ರದಲ್ಲಿ ನಡೆದು ಗೋಣಿಕೊಪ್ಪ ಲನ್ನು ಸೇರಿದ್ದಾಗ ಪೋಲೀಸರು ಇವರನ್ನು ದಸ್ತಗಿರಿ ಮಾಡಿ ಕಾಲ್ನಡಿಗೆಯಲ್ಲಿಯೇ ಮಡಿಕೇರಿಗೆ ಕರೆದುಕೊಂಡು ಬಂದು ಕೋರ್ಟಿಗೆ ಹಾಜರುಪಡಿಸಿ ಸಾದಾ ಶಿಕ್ಷೆ ವಿಧಿ ಸಲ್ಪಟ್ಟು ತಿರುಗಿ ಮಡಿಕೇರಿಯಿಂದ ವಿರಾಜಪೇಟೆಯವರೆಗೆ ಕಾಲ್ನಡಿಗೆಯಲ್ಲಿಯೇ ಕರೆದುಕೊಂಡು ಹೋಗಿ ಅಲ್ಲಿಂದ ಅವರನ್ನು ಕಣ್ಣಿನೊಂದಿಗೆ ಸಾಗಿಸಿದರು. ಜೈಲಿನಿಂದ ಬಂದನಂತರ ಬಿಳಿಗೇರಿ ಗ್ರಾಮದಲ್ಲೊಂದು ರಾಷ್ಟ್ರೀಯ ಶಿಕ್ಷಣ ಶಾಲೆ ಎಂಬ ಶಾಲೆಯನ್ನು ತೆರೆದು ವಿದ್ಯಾರ್ಥಿ ಗಳಿಗೂ ಮತ್ತು ಸುತ್ತಮುತ್ತಲಿನ ಹಳ್ಳಿಯ ಜನರಿಗೆ ಖಾದಿಯ ಪ್ರಚಾರ ಕಾರ್ಯವನ್ನು ತಕಲಿ ಮತ್ತು ಚರಕಾದಲ್ಲಿ ನೂಲುವ ತರಬೇತಿಯ ಏರ್ಪಾಡನ್ನೂ ಮಾಡಿ ಖಾದೀ ಪ್ರಚಾರ ಕಾರ್ಯವನ್ನು ಸಾಕಷ್ಟು ಮಾಡಿದ್ದರು. 1941ರಲ್ಲಿ ವೈಯಕ್ತಿಕ ಸತ್ಯಾಗ್ರಹಿಗಳ ತರಬೇತಿ ಶಿಬಿರ ದಲ್ಲಿ ಭಾಗವಹಿಸಿ ವ್ಯಕ್ತಿಗತ ಸತ್ಯಾಗ್ರಹದಲ್ಲೂ ಪ್ರತಿಜ್ಞೆ ಕೈಗೊಂಡರು 1942ರಲ್ಲಿ 'ಬ್ರಿಟಿಷರೇ ಭಾರತದಿಂದ 'ತೊಲಗಿರಿ' ಎಂಬ ಚಳವಳಿಯಲ್ಲಿ ಭಾಗವಹಿಸಿ ಸೆರೆಮನೆಗೆ ಕಳುಹಿಸಲ್ಪಟ್ಟರು.

ಶ್ರೀ ಪೂಜಾರಿರ ರಾಮಪ್ಪನವರು ಈ ರೀತಿ ಭಾರ ತದ ಸ್ವಾತಂತ್ರ್ಯ ಹೋರಾಟದಲ್ಲಿ ತನು ಮನವನ್ನು ತ್ಯಾಗಮಾಡಿ ತನ್ನ ಜೀವಮಾನದ ಹೆಚ್ಚು ಭಾಗವನ್ನೇ ಕಳೆದು ತಮ್ಮ ಜೀವನದ ಕೊನೆಯವರೆಗೂ ಯಾವ ಸುಖವನ್ನೂ ಅನುಭವಿಸದ ಒಬ್ಬ ತ್ಯಾಗ ವ್ಯಕ್ತಿ ಒಬ್ಬ ಧೀರ ವ್ಯಕ್ತಿ. ರಾಜಕೀಯ ಸ್ವತಂತ್ರರಾದರೂ ಸರ್ಕಾರದ ಯಾವ ರೀತಿಯ ಸೌಲಭ್ಯಕ್ಕೂ ಕೈಚಾಚದ ಒಬ್ಬ ತ್ಯಾಗ ವ್ಯಕ್ತಿ. ಇವರು 1964ರಲ್ಲಿ ನಿಧನರಾದರು.

---

## ದಿವಂಗತ ತೋಟಂಬೈಲು ಮಾದಪ್ಪನವರು



ದಿವಂಗತ ತೋಟಂಬೈಲು ಮಾದಪ್ಪನವರು ದಕ್ಷಿಣ ಕೊಡಗಿನ ನಾಪೋಕ್ಲು ನಾಡಿನ ಚೈಯಂಡಾಣೆ ಗ್ರಾಮ ದಲ್ಲಿ ಜನಿಸಿ ಪ್ರೌಢ ವಿದ್ಯಾಭ್ಯಾಸವನ್ನು ಮುಗಿಸಿ ಫಾರೆಸ್ಟ್ ಇಲಾಖೆಯಲ್ಲಿ ಒಬ್ಬ ಅಧಿಕಾರಿಯಾಗಿ ನಿವೃತ್ತರಾದರು. ಕೊಡಗಿನ ಗೌಡರಲ್ಲಿ ಶ್ರೀಮಂತ ಕಾಫಿ ತೋಟಗಾರರ ಲ್ಲೊಬ್ಬರು. ಇವರು ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷ ರಾಗಿ ಕೆಲವು ಕಾಲ ಕೆಲಸ ಮಾಡಿದ್ದಾರೆ ಬಡ ವಿದ್ಯಾರ್ಥಿ ಗಳಿಗೆ ವಿದ್ಯಾರ್ಥಿ ವೇತನವನ್ನು ಕೊಟ್ಟು ಸಹಾಯ ಮಾಡಿದ್ದಾರೆ ಇವರು ಸರ್ಕಾರಿ ಅಧಿಕಾರಿಯಾಗಿ ನಿವೃತ್ತಿಯಾದನಂತರ ರಾಜಕೀಯಕ್ಕೆ ಸೇರಿ ಕಾಂಗ್ರೆಸ್ಸಿನ ಒಬ್ಬ ಮುಖಂಡರಾಗಿ ಕೆಲಸ ಮಾಡಿದ್ದಾರೆ. ಸಿದ್ದಾಪುರ

ಗ್ರಾಮ ಪಂಚಾಯಿತಿ ಮತ್ತು ವಿರಾಜಪೇಟೆ ತಾಲ್ಲೋಕಿನ ತಾಲ್ಲೋಕು ಅಭಿವೃದ್ಧಿ ಮಂಡಳಿಯ ಸದಸ್ಯರಾಗಿ ದುಡಿದು ಹಲವಾರು ಸಾರ್ವಜನಿಕ ಕೆಲಸ ಕಾರ್ಯವನ್ನು ಮಾಡಿ ದ್ದಾರೆ. ತಮ್ಮ ಊರಿನ ಪ್ರೌಢ ಶಾಲೆಯ ಸ್ಥಾಪನೆಯ ಮುಖ್ಯ ಕಾರಣಕರ್ತರಾಗಿ, ಊರಿನ ಶಾಲೆ, ಆಸ್ಪತ್ರೆ ಗಳಿಗೂ, ಕೊಡಗು ವಿದ್ಯಾ ಸಂಘದ ವಶಿಯಲ್ಲಿ ಯೋಜಿಸ ಲಾದ ಮೈಸೂರಿನ ವಿದ್ಯಾರ್ಥಿ ಭವನಕ್ಕೂ ಮೈಸೂರಿನ ರಾಮಕೃಷ್ಣ ಆಶ್ರಮಕ್ಕೂ ಇನ್ನಿತರ ಹಲವಾರು ಸಾರ್ವ ಜನಿಕ ಸಂಸ್ಥೆಗಳಿಗೆ ಧಾರಾಳ ಮನಸ್ಸಿನಿಂದ ಧನ ಸಹಾಯ ಮಾಡಿ ತಮ್ಮ ಉದಾರ ಮನೋಭಾವವನ್ನು ತೋರಿಸಿ ದ್ದಾರೆ. ಶ್ರೀಯುತ ತೋಟಂಬೈಲು ಮಾದಪ್ಪನವರು ಶ್ರೀಮಂತರಾಗಿದ್ದರೂ ಸರಳ ಸ್ವಭಾವದವರಾಗಿದ್ದು ಎಲ್ಲಾ ಜನರಲ್ಲಿ ಆತ್ಮೀಯತೆಯ ಒಡನಾಟದಿಂದ ಜನರ ಪ್ರೀತಿಗೆ ಪಾತ್ರರಾಗಿದ್ದರು.

---



**ದಿವಂಗತ ಕೆದಂಬಾಡಿ ಮುದ್ದಪ್ಪನವರು**
ಬಿ.ಎ.ಎಲ್.ಎಲ್.ಬಿ.

ಜನನ 9-12-1915 ಮರಣ 3-6-66

ಶ್ರೀಮಾನ್ ಕೆದಂಬಾಡಿ ಮುದ್ದಪ್ಪನವರು ಭಾಗ ಮಂಡಲನಾಡು ಕುಂದಚೇರಿ ಗ್ರಾಮದಲ್ಲಿ 9-12-1915 ರಲ್ಲಿ ಜನ್ಮ ತಾಳಿದರು. ಇವರ ತಂದೆ ಶ್ರೀಮಾನ್ ಕೆದಂಬಾಡಿ ಪುಟ್ಟಯ್ಯನವರು. ಇವರ ಪ್ರೌಢ ವಿದ್ಯಾ ಭ್ಯಾಸವನ್ನು ಮಡಿಕೇರಿಯ ಸೆಂಟ್ರಲ್ ಪ್ರೌಢಶಾಲೆ ಯಲ್ಲಿ ಮುಗಿಸಿ ಮಂಗಳೂರಿನ ಸೆಯಿಂಟ್ ಎಲೋಸಿಯಸ್ ಕಾಲೇಜಿನಲ್ಲಿ ಬಿ. ಎ. ಪದವಿಯನ್ನು ಗಳಿಸಿ ಬೊಂಬಾಯಿ ವಿಶ್ವವಿದ್ಯಾನಿಲಯದಲ್ಲಿ ಎಲ್. ಎಲ್. ಬಿ. ಪದವಿಯನ್ನು ಗಳಿಸಿದರು.

ಇವರು 1942ರಿಂದ 1943ರ ವರೆಗೆ ತುಮಕೂರಿ ನಲ್ಲಿ ಅಡ್ವಕೇಟ್ ಆಗಿ ಸೇವೆ ಸಲ್ಲಿಸಿ 1943ರಿಂದ 1966ರ ವರೆಗೆ ಬೆಂಗಳೂರಿನ ಹೈಕೋರ್ಟಿನ ವಕೀಲರಾಗಿದ್ದರು. ಇವರೊಬ್ಬ ಖ್ಯಾತಿವೆತ್ತ ವಕೀಲರಾಗಿ ಸೇವೆ ಸಲ್ಲಿಸಿದರು. ಇವರು 1954ರಿಂದ 1966ರ ವರೆಗೆ ಬೆಂಗಳೂರಿನ ಒಕ್ಕಲಿಗರ ಸಂಘದ ಜನರಲ್ ಕಾರ್ಯದರ್ಶಿಯಾಗಿ ಕೆಲಸ ಮಾಡಿ ಒಕ್ಕಲಿಗರ ಸಂಘದ ಅಭಿವೃದ್ಧಿಗೆ ತುಂಬಾ ಶ್ರಮಿಸಿದ್ದಾರೆ. ಇದೂ ಅಲ್ಲದೆ 1965–66ರ ಸಾಲಿನಲ್ಲಿ ಕೊಡಗು ಗೌಡ ಸಮಾಜ ಬೆಂಗಳೂರು ಇದರ ಅಧ್ಯಕ್ಷ ರಾಗಿದ್ದು ಸಮಾಜದ ಅಭಿವೃದ್ಧಿಗೆ ಕಾರಣರಾಗಿದ್ದಾರೆ.

### ದಿವಂಗತ ಪೈಕೇರ ಚಂಗಪನವರು

ಇವರು ಬಿಳಿಗೇರಿ ಗ್ರಾಮದಲ್ಲಿ ಜನಿಸಿ ಪೊಳ್ಳಿ ಬೆಟ್ಟದ ಚನ್ನಯ್ಯನ ಕೋಟೆಯಲ್ಲಿ ದೊಡ್ಡ ಕಾಫಿ ತೋಟ ಗಾರರಾಗಿ ಒಬ್ಬ ಗಣ್ಯವಕ್ತಿಯಾಗಿದ್ದರು. ಇವರು ಕೊಡಗು ಗೌಡ ಸಂಘದ ಮೈಸೂರಿನಲ್ಲಿ ಶಾಖೆಗೆ ಅಲ್ಲಿನ ನಿವೇಶನಕ್ಕೆ ಹಣ ಸಹಾಯ ಮಾಡಿದ್ದುದಲ್ಲದೆ ಹಲವಾರು ಸಾರ್ವಜನಿಕರುಗಳಿಗೆ ಸಹಾಯ ಮಾಡಿದ್ದಾರೆ. 1969 ರಲ್ಲಿ ನಿಧನರಾದರು.

## ದಿವಂಗತ ನಡುಬೆಟ್ಟ ಸಣ್ಣಯ್ಯ

ಗೌಡರು ಚೆಂಬುಗ್ರಾಮದಲ್ಲಿ ಜನಿಸಿ ಒಬ್ಬ ಹೆಸರಾಂತ ಜಮೀನ್ದಾರರು ತೋಟಗಾರರೂ ಆಗಿದ್ದರು.



ಇವರು ತಮ್ಮ ಊರಿನ ಸಾರ್ವಜನಿಕ ಕೆಲಸದಲ್ಲಿ ಧನ ಸಹಾಯವನ್ನು ಮಾಡಿದ್ದಾರೆ. ಊರಿನ ಹಾಗೂ ಗೌಡ ಜನರ ಪ್ರೀತಿಯನ್ನು ಗಳಿಸಿದ್ದರು.

## ದಿವಂಗತ ಕುಡಕಲ್ಲು ಮುತ್ತಣ್ಣನವರು

ಸುಳ್ಯ ತಾಲ್ಲೋಕು ಆಲೇಟಿ ಗ್ರಾಮದಲ್ಲಿ ಜನಿಸಿದರು. ಕುಡಕಲ್ಲು ಮುತ್ತಣ್ಣಗೌಡರು ತಮ್ಮ ಅವಿಭಕ್ತ ಕುಟುಂಬದ ವ್ಯವಸ್ಥೆ ಮತ್ತು ಆಡಳಿತವನ್ನು ಸುಸೂತ್ರ



ವಾಗಿ ನಡೆಸಿ ಹಿಂದೂ ಕೌಟುಂಬಿಕ ಜೀವನದ ಮಾದರಿ ಕುಟುಂಬವನ್ನಾಗಿ ಮಾಡಿದ್ದರು.

ಗೌಡರಲ್ಲಿ ಹಿಂದಿನಿಂದ ನಡೆದುಬಂದ ಅವಿಭಕ್ತ ಕುಟುಂಬದ ಪೋಷಣೆ ಮತ್ತು ಪಾಲನೆಯ ಮಾದರಿಯನ್ನು ಶ್ರೀ ಮುತ್ತಣ್ಣ ಗೌಡರು ತೋರಿಸಿ ಕೊಟ್ಟಿದ್ದಾರೆ.

### ಗ್ರಂಥ ಋಣ


1) ಕೊಡಗಿನಲ್ಲಿ ಗೌಡ ಜನರು : ಶ್ರೀ ಡಿ. ಎನ್. ಕೃಷ್ಣಯ್ಯ
2) ಸ್ವಾತಂತ್ರ್ಯ ಹೋರಾಟ : ಶ್ರೀ ಬಿ. ಡಿ. ಗಣಪತಿ
3) ಭಾರತೀಯ ಸಂಸತ್ : ಶ್ರೀ ತ್ರಿಲೋಚನ ಸಿಂಗ್

ಭಾಗ – ೪

# 25-1-70 ರಲ್ಲಿ ನಡೆದ ಲಕ್ಕಿಡಿಪ್‌ನಲ್ಲಿ ಟಿಕೆಟ್‌ಗಳನ್ನು ಮಾರಾಟ ಮಾಡಲು ಸಹಕರಿಸಿದ ಮಹನೀಯರು

ಸರ್ವಶ್ರೀಗಳಾದ/ಶ್ರೀಮತಿಯರಾದ

1 ಬಾರದನ ದೇವಯ್ಯ, ಹೆಬ್ಬಾಳ್, ಬೆಂಗಳೂರು
2 ತೂಟಿರ ಮುತ್ತಣ್ಣ, ಬೆಂಗಳೂರು
3 ದಂಬೆಕೋಡಿ ಮಾದಪ್ಪ. ಮೈಸೂರು
4 ಹುದೇರಿ ರಾಜೇಂದ್ರ, ಮೈಸೂರು
5 ಮೇಡತನ ರಾಮಕೃಷ್ಣ, ಬಲಮುರಿ
6 ಡಾ|| ಶಿರಕಜೆ ರಾಮಕೃಷ್ಣ, ಮೈಸೂರು
7 ಕುಯ್ಯಮುಡಿ ಭೀಮಯ್ಯ, ಮೈಸೂರು
8 ಕೆ. ಎ. ಕುಶಾಲಪ್ಪ, ಮೈಸೂರು
9 ಕೋಚನ ಶ್ರೀನಿವಾಸ, ಮೈಸೂರು
10 ಹೊಸೂರು ಚೆನ್ನಪ್ಪ, ಮೈಸೂರು
11 ಕೆ. ಎ. ಪದ್ಮಾಜಿ, ಮೈಸೂರು
12 ಅಚ್ಚಪಟ್ಟಿ ಗಣೇಶ, ಮೈಸೂರು
13 ತೊತ್ತಿಯನ ಅಪ್ಪಯ್ಯ, ಮೈಸೂರು
14 ನಂಗಾರು ಸೋಮಣ್ಣ, ಮೈಸೂರು
15 ಕರುಣಾಕರ್ ಎಂ, ಮೈಸೂರು
16 ಕೂಡಕಂಡಿರ ಸೋಮಣ್ಣ, ನಂಜನಗೂಡು
17 ಪಡ್ಡಂಬೈಲು ವೆಂಕಟರಮಣ, ಬೆಂಗಳೊರು
18 ಚೆರಿಯಮನೆ ಪೊನ್ನಪ್ಪ, ಬೆಂಗಳೂರು
19 ಕಟ್ಟೆಮನೆನ್ಯಾನ್ಸಿ, ಬೆಂಗಳೂರು
20 ಚಂದಪ್ಪಗೌಡರು, ಬೆಂಗಳೂರು
21 ಹೊದ್ದೆಟ್ಟಿ ಭವಾನಿ ಶಂಕರ್, ಬೆಂಗಳೂರು

ಸರ್ವಶ್ರೀಗಳಾದ/ಶ್ರೀಮತಿಯರಾದ

22 ಪೂಜಾರಿರ ಪೊಣ್ಣಪ್ಪ, ಬೆಂಗಳೂರು
23 ಗುಡ್ಡನ ಪೊಣ್ಣಪ್ಪ, ಬೆಂಗಳೂರು
24 ಮುಂಙಪುರ ಪೊಣ್ಣಪ್ಪ, ಬೆಂಗಳೂರು
25 ಪಡಿಕಲ್ ಚೆಂಗಪ್ಪ, ಬೆಂಗಳೂರು
26 ದಂಬೆಕೋಡಿ ಸುಭಾಸ್, ಬೆಂಗಳೂರು
27 ಪೇರಿಯನ ಜಯಾನಂದ; ಮೈಸೂರು
28 ಕುಕ್ಕುನೂರು ರಾಮಕೃಷ್ಣ, ಸಿದ್ದಾಪುರ
29 ಎ. ಬಿ. ಪೂಣಚ್ಚ, ಚೆಟ್ಟಳ್ಳಿ
30 ಪೂಜಾರಿರ ರಾಮಕೃಷ್ಣ, ಮಡಿಕೇರಿ
31 ಒಡಿಯನ ಪುಟ್ಟಯ್ಯ, ಮೇಕೇರಿ
32 ಪೊನ್ನಚನ ತಮ್ಮಯ್ಯ, ಮಡಿಕೇರಿ
33 ಬೈಲೆರ ಬೋಪಯ್ಯ, ಮಡಿಕೇರಿ
34 ಕೆ. ಎಸ್. ಅಣ್ಣಯ್ಯ, ಮಡಿಕೇರಿ
35 ನಡುವಟ್ಟೆರ ಸೋಮಯ್ಯ. ಮಡಿಕೇರಿ
36 ಯಂಕನ ಪ್ರಕಾಶ್, ಮಡಿಕೇರಿ
37 ಕುಂಬುಗೌಡನ ಗೋಪಾಲ, ಮುಕ್ಕಂಡೂರು
38 ಹೊಸೂರು ಜೋಯಪ್ಪ, ಭಾಗಮಂಡಲ
39 ಕೆದಂಬಾಡಿ ಪೊಣ್ಣಪ್ಪ, ಅಭ್ಯತ್ ಮಂಗಲ
40 ಟಿ. ಕುಂಙಪ್ಪ, ಮಡಿಕೇರಿ
41 ಐಯ್ಯಂಡ್ರ ಬೆಳ್ಯಪ್ಪ, ಚೆಟ್ಟಳ್ಳಿ
42 ಕೆ. ಆರ್. ಯಾಧವ ಚೆಟ್ಟಳ್ಳಿ

43 ಕೆ. ಎಂ. ಬೆಳ್ಯಪ್ಪ, ಚೇರಂಬಾಣೆ
44 ಕೆದಂಬಾಡಿ ತಿಮ್ಮಯ್ಯ, ಬೆಟ್ಟಗೇರಿ
45 ದಂಬೆಕೋಡಿ ಪೂವಯ್ಯ, ಚೆಟ್ಟಳ್ಳಿ
46 ಜೊಕ್ಕಾಡಿ ಪೊನ್ನಪ್ಪ, ಮೈಸೂರು
47 ಕೆದಂಬಾಡಿ ಪೊನ್ನಪ್ಪ, ಬೆಂಗಳೂರು
48 ಕೆ. ಟಿ. ರಮೇಶ, ಭಾಗಮಂಡಲ
49 ಬಾರನ ಸುರೇಶ, ಕಾಜೂರು
50 ಕುಲ್ಲಚನ ಕುಶಾಲಪ್ಪ, ಕುಶಾಲ್‌ನಗರ
51 ಕುಂಬುಗೌಡನ ಭೀಮಯ್ಯ, ಭಾಗಮಂಡಲ
52 ತೆಕ್ಕಡ ಮುತ್ತಣ್ಣ, ಭಾಗಮಂಡಲ
53 ಕೂಡಕಂಡಿ ಗಣಪತಿ, ಸೋಮವಾರಪೇಟೆ
54 ಬೆಪ್ಪುರನ ಮುತ್ತಮ್ಮ . ಸೋಮವಾರಪೇಟೆ
55 ಟಿ. ಜಿ. ಮುಡೂರು, ಪಂಜ
56 ಚೆರಿಯಮನೆ ಲೀಲ, ಬೆಂಗಳೂರು
57 ಪೊಕ್ಕುಳಂಡ್ರ ಪಳಂಗಪ್ಪ, ಬೆಂಗಳೂರು
58 ದಂಬೆಕೋಡಿ ಚಂದ್ರಶೇಖರ್, ಬೆಂಗಳೂರು
59 ಡಾ॥ ಕೆ. ವೀರಪ್ಪಗೌಡರು, ಬೆಂಗಳೂರು
60 ಸಿ. ಟಿ. ಗಣಪತಿ, ಬೆಂಗಳೂರು
61 ಕೆ. ಎಸ್. ಗಣಪತಿ, ಬೆಂಗಳೂರು
62 ಪೂಜಾರಿರ ಮಾದಪ್ಪ, ಅರ್ವತೊಕ್ಲು
63 ಯಂಕನ ಕುಶಾಲಪ್ಪ, ಸುಂಟಿಕೊಪ್ಪ
64 ಪರ್ಲಕೋಟಿ ಸೋಮಯ್ಯ, ದೊಡ್ಡಳ್ಳಿ
65 ಕೆ. ಚಂದ್ರಾವತಿ ಚಾಮಯ್ಯ, ಬೆಂಗಳೂರು
66 ಕಡ್ಲೆರ ಪೊನ್ನಪ್ಪ, ಕೊಯಮುತ್ತೂರು
67 ಚೆಟ್ಟಿಮಾಡ ಅಮ್ಮವ್ವ, ಮಡಿಕೇರಿ
68 ಉಳುವಾರನ ಸೋಮಯ್ಯ, ಮಡಿಕೇರಿ
69 ಕಡ್ಯದ ಗಣಪತಿ, ಅರ್ವತೊಕ್ಲು

ಸರ್ವಶ್ರೀಗಳಾದ/ಶ್ರೀಮತಿಗಳಾದ

70 ಪಿ. ಎಂ. ಸಿದ್ದಾರ್ಥ, ಕೊಯಮುತ್ತೂರು
71 ಓಡಿಯನ ಬಲರಾಂ, ಬೆಂಗಳೂರು
72 ಐಯ್ಯಂಡ್ರ ಭಾಗೀರಥಿ, ಮೈಸೂರು
73 ಎಂ. ಸಿ. ಕೇಸರಿ, ಮಡಿಕೇರಿ
74 ಐಯ್ಯಂಡ್ರ ಭೀಮಯ್ಯ, ಬೆಂಗಳೂರು
75 ಕೆ. ಸಿ. ಕುಶಾಲಪ್ಪ, ಮೈಸೂರು
76 ಚೆಟ್ಟಿಮಾಡ ಉತ್ತಪ್ಪ, ಬೆಂಗಳೂರು
77 ಚೆಟ್ಟಿಮಾಡ ಕುಟ್ಟಪ್ಪ, ಬೆಂಗಳೂರು
78 ತಳೂರು ಮಾದಯ್ಯ, ಅರ್ವತೊಕ್ಲು
79 ಮೂಟೇರ ಮೋಟಯ್ಯ, ಬಿಳಿಗೇರಿ
89 ಸಿ. ಸಿ. ಚೆನ್ನಪ್ಪಗೌಡರು, ಬೆಂಗಳೂರು
90 ಡಾ॥ ಕುಯ್ಯಮುಡಿ ಅಪ್ಪಾಜಿ, ಕೂಡಿಗೆ
91 ಮೊಟ್ಟನ ಉತ್ತಯ್ಯ, ಅಬ್ಬೂರುಕಟ್ಟೆ
92 ತುಮುತಜ್ಜಿರ ಸೋಮಯ್ಯ, ಶ್ರೀಮಂಗಲ
93 ದಂಬೆಕೋಡಿ ಆನಂದ ಬೆಂಗಳೂರು
94 ಅಜ್ಜಾಡ ಪೂವಯ್ಯ, ಮಡಿಕೇರಿ
95 ಕುಮಪಜೆ ಕೃಷ್ಣಪ್ಪ, ಮಡಿಕೇರಿ
96 ಕುಡ್ಯದ ಪುಟ್ಟಯ್ಯ, ಆಲೂರು ಸಿದ್ದಾಪುರ
97 ಸೂದನ ಲಲಿತ, ಆಲೂರು ಸಿದ್ದಾಪುರ
98 ಗುಡ್ಡೇರ ಅಪ್ಪಾಜಿ, ಸೋಮವಾರಪೇಟೆ
99 ಓಡಿಯನ ರಾಮಯ್ಯ, ಮೇಕೇರಿ
100 ಜೈಮನ ಮುತ್ತಪ್ಪ, ಚೇರಂಬಾಣೆ
101 ಕೆ. ಎ. ಯಾದಪ್ಪ
102 ಕಾಳೇರಮ್ಮನ ದೇವಯ್ಯ ಬೆಂಗಳೂರು
103 ಶಿರಕಜೆ ಚಣ್ಣಪ್ಪ, ಬೆಂಗಳೂರು
104 ಮೂದಗದ್ದೆ ವಿಶ್ವನಾಥ, ಬೆಂಗಳೂರು

ಈ ಲಕ್ಕಿಡಿಪ್ಪಿನ ರಶೀತಿ ಪುಸ್ತಕಗಳನ್ನು ಹಂಚುವುದಕ್ಕೆ ಶ್ರೀಗಳಾದ ದಂಬೆಕೋಡಿ ಸುಭಾಸ್ ಮತ್ತು ಪೇರಿಯನ ಜಯಾನಂದರವರು ತುಂಬಾ ಪ್ರಯತ್ನಪಟ್ಟಿದನ್ನು ನಾವು ಅವರಿಗೆ ಚಿರಋಣಿಗಳಾಗಿದ್ದೇವೆ.

ಐಯ್ಯಂಡ್ರ ಭೀಮಯ್ಯ, ಬಿ.ಎಸ್‌ಸಿ.,
ಪ್ರಾ॥ ಕಾರ್ಯದರ್ಶಿ.

